# ಪ್ರಸ್ತಾವನೆ

ವಿವೇಕಚೂಡಾಮಣಿಯು ಜನಾದರಣೀಯವಾದ ಗ್ರಂಥರತ್ನ. ಅನೇಕ ಪ್ರಕರಣಗ್ರಂಥಗಳ ಮಧ್ಯದಲ್ಲಿ ಇದು ಇಷ್ಟು ಜನಪ್ರಿಯವಾಗಲು ಅನೇಕ ಕಾರಣಗಳಿವೆ: ಮೊದಲನೆಯದಾಗಿ ಇದು ಶ್ರೀಮಚ್ಛಂಕರಭಗವತ್ಪಾದರ ಕೃತಿಯೆಂದು ಸುಪ್ರಸಿದ್ಧವಾಗಿದೆ; ಎರಡನೆಯದಾಗಿ ಗ್ರಂಥಕರ್ತರು ತಮ್ಮ ಆತ್ಮಾನುಭವದ ನಿಲವಿನಿಂದ ಉಪದೇಶಿಸುತ್ತಿರುವುದರಿಂದ ಓದುಗರಿಗೆ—ಅದರಲ್ಲಿಯೂ ಮುಮುಕ್ಷುಗಳಿಗೆ—ಹೃದಯಸ್ಪರ್ಶಿಯಾಗಿದೆ; ಮೂರನೆಯದಾಗಿ ಕೃತಿಯ ಶೈಲಿಯು ಅತ್ಯಂತ ರಮಣೀಯವಾಗಿ ಕಾವ್ಯಗುಣಗಳಿಂದ ಕೂಡಿದ್ದಾಗಿದೆ.

ಗ್ರಂಥವನ್ನು ಓದುವಾಗ ಆತ್ಮಾನಾತ್ಮವಿವೇಕ, ಪಂಚಕೋಶವಿವೇಕ, ಬ್ರಹ್ಮಾತ್ಮೈಕತ್ವಜ್ಞಾನ—ಇವೇ ಮೊದಲಾದ ಭಾವನೆಗಳು ಪುನಃ ಪುನಃ ಬರುವ ಹಾಗೆ ತೋರುತ್ತದೆ. ಇದು ಸಹಜವೇ ಆಗಿದೆ; ಏಕೆಂದರೆ ಈ ಮೂಲಭಾವನೆಗಳನ್ನು ಮುಮುಕ್ಷುವಿನ ಮನಸ್ಸಿನ ಮೇಲೆ ಅಚ್ಚೊತ್ತುವುದೇ ಈ ಗ್ರಂಥದ ಮುಖ್ಯೋದ್ದೇಶವಾಗಿದೆ. 'ಚಿತ್ತದ ಸಮಸ್ತ ದೋಷಗಳನ್ನು ಕಳೆದುಕೊಂಡು, ಭವಸುಖದಲ್ಲಿ ವಿರಕ್ತರಾಗಿ, ಪ್ರಶಾಂತಚಿತ್ತರೂ ಶ್ರುತಿರಸಿಕರೂ ಮುಮುಕ್ಷುಗಳೂ ಆದ ಯತಿಗಳು ಈ ಹಿತವಾದ ಉಪದೇಶವನ್ನು ಆದರಿಸಲಿ' (೫೭೮) ಎಂದು ಆಚಾರ್ಯರೇ ಹೇಳಿರುತ್ತಾರೆ. ಮತ್ತೊಂದು ಕಡೆಯಲ್ಲಿ (೫೭೯), 'ಕಲಿದೋಷಗಳಿಲ್ಲದ, ಕಾಮನಿರ್ಮುಕ್ತವಾದ ಬುದ್ಧಿಯುಳ್ಳ ಮುಮುಕ್ಷುವಾದ ನಿನ್ನನ್ನು ನನ್ನ ಮಗನಂತೆ ಭಾವಿಸಿಕೊಂಡು ಶ್ರುತಿಶಿರಸ್ಸೆನಿಸಿದ ಉಪನಿಷತ್ತುಗಳ ಸಿದ್ಧಾಂತವಾದ ಈ ಅತ್ಯಂತರಹಸ್ಯವನ್ನು (ಎಂದರೆ ನಿತ್ಯಾನಿತ್ಯವಿವೇಕವನ್ನು) ನಿನಗೆ ಪುನಃ ಪುನಃ ಪ್ರಕಾಶಪಡಿಸಿದ್ದೇನೆ' ಎಂದು ಹೇಳಿದ್ದಾರೆ. ಆದುದರಿಂದ ಮುಮುಕ್ಷುಗಳ ಬೋಧನೆಗಾಗಿ ಅನುಗ್ರಹಿಸಲ್ಪಟ್ಟ ಈ ಕೃತಿಯಲ್ಲಿ ಪುನರುಕ್ತಿಯು ಭೂಷಣವೇ ಆಗಿದೆ.

ಈ ಗ್ರಂಥದ ಪಾಠವನ್ನು ಪರಿಷ್ಕರಿಸುವಾಗ ಮತ್ತು ಶ್ಲೋಕಗಳ ಅರ್ಥವನ್ನು ವಿವರಿಸುವಾಗ ಮುನಿಮಂಡಲದ ಕೇಶವಾಚಾರ್ಯಸ್ವಾಮಿಗಳ ಮತ್ತು ಶೃಂಗಗಿರಿ-ಜಗದ್ಗುರು-ಶ್ರೀಚಂದ್ರಶೇಖರಭಾರತೀ ಸ್ವಾಮಿಗಳ ಸಂಸ್ಕೃತ-ವ್ಯಾಖ್ಯಾನಗಳು ಉಪಯೋಗಕರವಾಗಿದ್ದುವು.

**ಶ್ರೀರಾಮಕೃಷ್ಣಾಶ್ರಮ**
**ಮಂಗಳೂರು**

**ಸ್ವಾಮಿ ಆದಿದೇವಾನಂದ**

# ವಿಷಯಸೂಚಿಕೆ

# ವಿವೇಕಚೂಡಾಮಣಿ

**ಸರ್ವ-ವೇದಾಂತ-ಸಿದ್ಧಾಂತ-ಗೋಚರಂ ತಮಗೋಚರಮ್ ।**
**ಗೋವಿಂದಂ ಪರಮಾನಂದಂ ಸದ್ಗುರುಂ ಪ್ರಣತೋಽಸ್ಮ್ಯ-**
**ಹಮ್ ॥ ೧ ॥**

**ಸರ್ವ-ವೇದಾಂತ-ಸಿದ್ಧಾಂತ-ಗೋಚರಂ** = ಸಮಸ್ತ ಉಪನಿಷತ್ತುಗಳ ತಾತ್ಪರ್ಯಕ್ಕೆ ವಿಷಯನಾಗಿರುವ **ಅಗೋಚರಂ** = [ವಾಕ್ಕು, ಮನಸ್ಸು ಇವುಗಳಿಗೆ] ವಿಷಯನಲ್ಲದ **ಪರಮಾನಂದಂ** = ಪರಮಾನಂದಸ್ವರೂಪನಾದ **ಸದ್ಗುರುಂ** = ಸದ್ಗುರುವಾದ **ತಂ ಗೋವಿಂದಂ** = ಆ ಗೋವಿಂದನನ್ನು **ಅಹಂ** = ನಾನು **ಪ್ರಣತಃ ಅಸ್ಮಿ** = ಪ್ರಣಾಮಮಾಡುವವನಾಗಿದ್ದೇನೆ.

೧. ಸಮಸ್ತ ಉಪನಿಷತ್ತುಗಳ ತಾತ್ಪರ್ಯಕ್ಕೆ ಮಾತ್ರ ವಿಷಯನಾಗಿರುವವನೂ ವಾಙ್ಮನಸ್ಸುಗಳಿಗೆ[೧] ವಿಷಯನಲ್ಲದವನೂ ಪರಮಾನಂದಸ್ವರೂಪನೂ ಸದ್ಗುರುವೂ ಆದ ಗೋವಿಂದನಿಗೆ ಮಣಿಯುತ್ತೇನೆ.

[ಗ್ರಂಥವು ನಿರ್ವಿಘ್ನವಾಗಿ ಸಮಾಪ್ತವಾಗಲು ಶ್ರೀಶಂಕರಭಗವತ್ಪಾದರು ಗುರುಗಳಿಗೆ ಗುರುವೂ ತಮ್ಮ ಇಷ್ಟದೇವತೆಯೂ ಆದ ವಿಷ್ಣುವಿಗೆ ನಮಸ್ಕರಿಸುತ್ತಾರೆ; ಅಥವಾ ಇಲ್ಲಿ ಗೋವಿಂದನೆಂದರೆ ಆಚಾರ್ಯರ ಗುರುವಾದ ಶ್ರೀಗೋವಿಂದಭಗವತ್ಪಾದರೂ ಆಗಬಹುದು.

[೧] ಅಥವಾ ವಿಷಯಾಸಕ್ತರಿಗೆ.]

**ಜಂತೂನಾಂ ನರಜನ್ಮ ದುರ್ಲಭಮತಃ ಪುಂಸ್ತ್ವಂ ತತೋ ವಿಪ್ರತಾ**
**ತಸ್ಮಾದ್ವೈದಿಕ-ಧರ್ಮಮಾರ್ಗ-ಪರತಾ ವಿದ್ವತ್ತ್ವಮಸ್ಮಾತ್ ಪರಮ್।**
**ಆತ್ಮಾನಾತ್ಮ-ವಿವೇಚನಂ ಸ್ವನುಭವೋ ಬ್ರಹ್ಮಾತ್ಮನಾ ಸಂಸ್ಥಿತಿ-**
**ರ್ಮುಕ್ತಿರ್ನೋ ಶತಕೋಟಿ-ಜನ್ಮ-ಸುಕೃತೈಃ ಪುಣ್ಯೈರ್ವಿನಾ**
**ಲಭ್ಯತೇ ॥ ೨ ॥**

**ಜಂತೂನಾಂ** = ಪ್ರಾಣಿಗಳಿಗೆ **ನರಜನ್ಮ** = ಮನುಷ್ಯಜನ್ಮವು **ದುರ್ಲಭಂ** = ಕಷ್ಟಸಾಧ್ಯವಾದುದು, **ಅತಃ** = ಇದಕ್ಕಿಂತಲೂ **ಪುಂಸ್ತ್ವಂ** = ಪುರುಷತ್ವವು [ದುರ್ಲಭವು], **ತತಃ** = ಅದಕ್ಕಿಂತಲೂ **ವಿಪ್ರತಾ** = ಬ್ರಾಹ್ಮಣತ್ವವು [ದುರ್ಲಭವು], **ತಸ್ಮಾತ್** = ಅದಕ್ಕಿಂತಲೂ **ವೈದಿಕ-ಧರ್ಮಮಾರ್ಗ-ಪರತಾ** = ವೈದಿಕ ಧರ್ಮಮಾರ್ಗದಲ್ಲಿ ವಿಶ್ವಾಸವು [ದುರ್ಲಭವು], **ಅಸ್ಮಾತ್** = ಇದಕ್ಕಿಂತಲೂ **ವಿದ್ವತ್ತ್ವಂ** = ಶಾಸ್ತ್ರಪಾಂಡಿತ್ಯವು **ಪರಂ** = ಅಧಿಕವಾದುದು; **ಆತ್ಮಾನಾತ್ಮ-ವಿವೇಚನಂ** = ಆತ್ಮ ಅನಾತ್ಮ ಇವುಗಳ ವಿಚಾರ

**ಸ್ವನುಭವಃ**=ಸ್ವಾತ್ಮಾನುಭವ **ಬ್ರಹ್ಮಾತ್ಮನಾ ಸಂಸ್ಥಿತಿಃ**=ಬ್ರಹ್ಮಾತ್ಮ-ಭಾವದಲ್ಲಿರುವುದು [ಇವು ಕ್ರಮವಾಗಿ ಒಂದಕ್ಕಿಂತ ಒಂದು ಅಧಿಕವಾದುವು]; **ಮುಕ್ತಿಃ**=ಮೋಕ್ಷವು **ಶತಕೋಟಿ-ಜನ್ಮ-ಸುಕೃತೈಃ ಪುಣ್ಯೈಃ ವಿನಾ**=ನೂರುಕೋಟಿ ಜನ್ಮಗಳಲ್ಲಿ ಸಂಪಾದಿಸಿದ ಪುಣ್ಯವಿಲ್ಲದೆ **ನೋ ಲಭ್ಯತೇ**=ಲಭಿಸುವುದಿಲ್ಲ.

೨. ಪ್ರಾಣಿಗಳಿಗೆ ಮನುಷ್ಯಜನ್ಮವು ಕಷ್ಟಸಾಧ್ಯವಾದುದು, ಮನುಷ್ಯ ಜನ್ಮಕ್ಕಿಂತಲೂ ಪುರುಷತ್ವವು ದುರ್ಲಭವು, ಪುರುಷತ್ವಕ್ಕಿಂತಲೂ ಬ್ರಾಹ್ಮಣತ್ವವು ದುರ್ಲಭವು, ಬ್ರಾಹ್ಮಣತ್ವಕ್ಕಿಂತಲೂ ವೈದಿಕ-ಧರ್ಮಮಾರ್ಗದಲ್ಲಿ ವಿಶ್ವಾಸವು ದುರ್ಲಭವು, ಇದಕ್ಕಿಂತಲೂ ಶಾಸ್ತ್ರಪಾಂಡಿತ್ಯವು ಅಧಿಕವಾದುದು; ಆತ್ಮ ಅನಾತ್ಮ ಇವುಗಳ ವಿಚಾರ, ಸ್ವಾತ್ಮಾನುಭವ, ಬ್ರಹ್ಮಾತ್ಮ-ಭಾವದಲ್ಲಿರುವುದು[೧] (ಇವು ಕ್ರಮವಾಗಿ ಒಂದಕ್ಕಿಂತ ಒಂದು ಅಧಿಕವಾದುವು). (ಇಂಥ) ಮೋಕ್ಷವು ನೂರು ಕೋಟಿ ಜನ್ಮಗಳಲ್ಲಿ ಸಂಪಾದಿಸಿದ ಪುಣ್ಯವಿಲ್ಲದೆ ಲಭಿಸುವುದಿಲ್ಲ[೨].

[೧ **ಅಹಂ ಬ್ರಹ್ಮಾಸ್ಮಿ** ಎಂಬ ಸ್ಥಿತಿಯಲ್ಲಿರುವುದು.
೨ ಆದುದರಿಂದ ಸರ್ವದಾ ಪುಣ್ಯವನ್ನು ಸಂಪಾದಿಸಲು ಪ್ರಯತ್ನಿಸಬೇಕು.]

**ದುರ್ಲಭಂ ತ್ರಯಮೇವೈತದ್ದೈವಾನುಗ್ರಹ-ಹೇತುಕಮ್ ।**
**ಮನುಷ್ಯತ್ವಂ ಮುಮುಕ್ಷುತ್ವಂ ಮಹಾಪುರುಷ-ಸಂಶ್ರಯಃ ॥ ೩ ॥**

**ದೈವಾನುಗ್ರಹ-ಹೇತುಕಂ**=ಭಗವಂತನ ಅನುಗ್ರಹವೇ ಕಾರಣವಾಗಿರುವ **ಏತತ್ ತ್ರಯಂ**=ಈ ಮೂರು **ದುರ್ಲಭಂ ಏವ**=ಕಷ್ಟಸಾಧ್ಯವೇ; **ಮನುಷ್ಯತ್ವಂ**=ಮನುಷ್ಯ ಜನ್ಮ **ಮುಮುಕ್ಷುತ್ವಂ**=ಮೋಕ್ಷೇಚ್ಛೆ **ಮಹಾಪುರುಷ-ಸಂಶ್ರಯಃ**=ಮಹಾತ್ಮರ ಸಂಗ.

೩. ಭಗವಂತನ ಅನುಗ್ರಹವೇ ಕಾರಣವಾಗಿರುವ ಈ ಮೂರು ಕಷ್ಟಸಾಧ್ಯವೇ: ಮನುಷ್ಯಜನ್ಮ, ಮೋಕ್ಷವನ್ನು ಪಡೆಯಬೇಕೆಂಬ ಇಚ್ಛೆ ಮತ್ತು ಮಹಾತ್ಮರ ಸಂಗ (ಅಥವಾ ಆಶ್ರಯ).

[ಭಗವಂತನ ಅನುಗ್ರಹವಿಲ್ಲದಿದ್ದರೆ ಮನುಷ್ಯತ್ವವೇ ಮೊದಲಾದುವನ್ನು ಪಡೆಯುವುದು ಕಷ್ಟ ಎಂದು ಭಾವ.]

**ಲಬ್ಧ್ವಾ ಕಥಂಚಿನ್ನರಜನ್ಮ ದುರ್ಲಭಂ**
**ತತ್ರಾಪಿ ಪುಂಸ್ತ್ವಂ ಶ್ರುತಿ-ಪಾರದರ್ಶನಮ್ ।**
**ಯಸ್ತ್ವಾತ್ಮಮುಕ್ತೌ ನ ಯತೇತ ಮೂಢಧೀಃ**
**ಸ ಆತ್ಮಹಾ ಸ್ವಂ ವಿನಿಹಂತ್ಯಸದ್ಗ್ರಹಾತ್ ॥ ೪ ॥**

**ಮೂಢಧೀಃ** = ಮೂಢಬುದ್ಧಿಯುಳ್ಳ **ಯಃ ತು** = ಯಾವನು **ದುರ್ಲಭಂ**= ದುಃಸಾಧ್ಯವಾದ **ನರಜನ್ಮ**= ಮನುಷ್ಯಜನ್ಮವನ್ನು **ಕಥಂಚಿತ್** = ಹೇಗೋ **ಲಬ್ಧ್ವಾ**= ಪಡೆದು, **ತತ್ರ** = ಅದರಲ್ಲಿಯೂ **ಪುಂಸ್ತ್ವಂ**=ಪುರುಷತ್ವವನ್ನು **ಶ್ರುತಿಪಾರದರ್ಶನಂ**= ವೇದಪ್ರವೀಣತೆಯನ್ನು [**ಲಬ್ಧ್ವಾ**] **ಅಪಿ** = ಹೊಂದಿದ್ದರೂ **ಆತ್ಮಮುಕ್ತೌ** = ತನ್ನ ಮೋಕ್ಷದ ವಿಷಯದಲ್ಲಿ **ನ ಯತೇತ** = ಪ್ರಯತ್ನಪಡುವುದಿಲ್ಲವೊ **ಸಃ** = ಅವನು **ಆತ್ಮಹಾ**= ಆತ್ಮಹತ್ಯವನ್ನು ಮಾಡಿಕೊಂಡವನು; **ಹಿ**= ಏಕೆಂದರೆ **ಅಸದ್-ಗ್ರಹಾತ್**= ಮಿಥ್ಯಾವಸ್ತುಗಳನ್ನು ಹಿಡಿದುಕೊಳ್ಳುವುದರಿಂದ **ಸ್ವಂ**= ತನ್ನನ್ನು **ವಿನಿಹಂತಿ**= ಕೊಂದು ಕೊಳ್ಳುತ್ತಾನೆ.

**೪.** ದುಃಸಾಧ್ಯವಾದ ಮನುಷ್ಯಜನ್ಮವನ್ನು ಹೇಗೋ ಪಡೆದುಕೊಂಡು, ಅದರಲ್ಲಿಯೂ ಪುರುಷತ್ವವನ್ನು ಮತ್ತು ವೇದಪ್ರವೀಣತೆಯನ್ನು ಹೊಂದಿದ್ದರೂ ಮೂಢಬುದ್ಧಿಯುಳ್ಳ ಯಾವ ಮನುಷ್ಯನು ತನ್ನ ಮೋಕ್ಷಕ್ಕಾಗಿ ಪ್ರಯತ್ನಿಸುವುದಿಲ್ಲವೊ ಅವನು ಆತ್ಮಹತ್ಯಕಾರನು;[೧] ಏಕೆಂದರೆ ಅವನು ಮಿಥ್ಯಾವಸ್ತುಗಳನ್ನು ಹಿಡಿದುಕೊಳ್ಳುವುದರ ದಶೆಯಿಂದ[೨] ತನ್ನನ್ನು ಕೊಂದು ಕೊಳ್ಳುತ್ತಾನೆ.

[[೧] ಮನುಷ್ಯಜನ್ಮ, ಪುರುಷತ್ವ, ವೇದಪ್ರಾವೀಣ್ಯ ಇವುಗಳಿದ್ದರೂ ಮನುಷ್ಯನು ಮೋಕ್ಷವಾಸನೆಯಿಲ್ಲದೆ ವಿಷಯಿಯಾಗಿರಬಹುದು.

[೨] ಅನಾತ್ಮ-ವಸ್ತುಗಳನ್ನು ನಿತ್ಯವೆಂದು ನಂಬಿ ಅವುಗಳಲ್ಲಿ ಆತ್ಮಭಾವನೆಯನ್ನಿಡುವುದು ಆತ್ಮಹತ್ಯವೇ ಸರಿ.]

**ಇತಃ ಕೋ ನ್ವಸ್ತಿ ಮೂಢಾತ್ಮಾ ಯಸ್ತು ಸ್ವಾರ್ಥೇ ಪ್ರಮಾದ್ಯತಿ ।**
**ದುರ್ಲಭಂ ಮಾನುಷಂ ದೇಹಂ ಪ್ರಾಪ್ಯ ತತ್ರಾಪಿ ಪೌರುಷಮ್ ॥ ೫ ॥**

**ಯಃ ತು** = ಯಾವನು **ದುರ್ಲಭಂ** = ದುಃಖಸಾಧ್ಯವಾದ **ಮಾನುಷಂ** = ಮನುಷ್ಯಸಂಬಂಧವಾದ **ದೇಹಂ** = ಶರೀರವನ್ನು **ಪ್ರಾಪ್ಯ** = ಪಡೆದು, **ತತ್ರ ಅಪಿ** = ಅದರಲ್ಲಿಯೂ **ಪೌರುಷಂ** = ಪುರುಷಸಂಬಂಧವಾದುದನ್ನು [ಹೊಂದಿ], **ಸ್ವಾರ್ಥೇ** = ಸ್ವಪ್ರಯೋಜನದಲ್ಲಿ, ಮೋಕ್ಷದಲ್ಲಿ **ಪ್ರಮಾದ್ಯತಿ**= ಅಸಡ್ಡೆ ಮಾಡುತ್ತಾನೆಯೊ **ಇತಃ** = ಇವನಿಗಿಂತಲೂ **ಮೂಢಾತ್ಮಾ** = ಅವಿವೇಕಿಯು **ಕಃ ನು ಅಸ್ತಿ** = ಯಾವನಿರುವನು?

**೫.** ದುರ್ಲಭವಾದ ಮನುಷ್ಯಶರೀರವನ್ನು, ಅದರಲ್ಲಿಯೂ ಪುರುಷ ಶರೀರವನ್ನು ಪಡೆದು ಮೋಕ್ಷವಿಷಯದಲ್ಲಿ ಯಾವನು ಅಸಡ್ಡೆಮಾಡುತ್ತಾನೆಯೊ ಅವನಿಗಿಂತಲೂ ಅವಿವೇಕಿಯಾದವನು ಯಾವನಿರುವನು?[೧]

[[೧] ಆದುದರಿಂದ ಸರ್ವಪ್ರಕಾರದಿಂದಲೂ ಮೋಕ್ಷಕ್ಕಾಗಿ ಪ್ರಯತ್ನಿಸಬೇಕು.]

**ವದಂತು ಶಾಸ್ತ್ರಾಣಿ ಯಜಂತು ದೇವಾನ್**
**ಕುರ್ವಂತು ಕರ್ಮಾಣಿ ಭಜಂತು ದೇವತಾಃ ।**
**ಆತ್ಮೈಕ್ಯಬೋಧೇನ ವಿನಾಪಿ ಮುಕ್ತಿ-**
**ರ್ನ ಸಿಧ್ಯತಿ ಬ್ರಹ್ಮಶತಾಂತರೇಽಪಿ ॥ ೬ ॥**

[ಮನುಷ್ಯರು] **ಶಾಸ್ತ್ರಾಣಿ**=ಶಾಸ್ತ್ರಗಳನ್ನು **ವದಂತು**=ಎತ್ತಿಹೇಳಲಿ, **ದೇವಾನ್ ಯಜಂತು** = ದೇವತೆಗಳಿಗೆ ಯಜ್ಞಮಾಡಲಿ, **ಕರ್ಮಾಣಿ** = ಕರ್ಮಗಳನ್ನು **ಕುರ್ವಂತು**=ಅನುಷ್ಠಾನಮಾಡಲಿ, **ದೇವತಾಃ**=ದೇವತೆಗಳನ್ನು **ಭಜಂತು**=ಭಜಿಸಲಿ; **ಆತ್ಮೈಕ್ಯಬೋಧೇನ ವಿನಾ ಅಪಿ**=ಜೀವ-ಪರಮಾತ್ಮರ ಐಕ್ಯಜ್ಞಾನವಿಲ್ಲದಿದ್ದರೆ **ಬ್ರಹ್ಮಶತಾಂತರೇ ಅಪಿ**=ಶತಬ್ರಹ್ಮರು ಪ್ರಲಯವನ್ನು ಪಡೆದರೂ **ಮುಕ್ತಿಃ**=ಮುಕ್ತಿಯು **ನ ಸಿಧ್ಯತಿ**=ಸಿದ್ಧಿಸುವುದಿಲ್ಲ.

**೬.** (ಮನುಷ್ಯರು) ಶಾಸ್ತ್ರಗಳನ್ನು ಎತ್ತಿಹೇಳಲಿ, ದೇವತೆಗಳಿಗೆ ಯಜ್ಞ ಮಾಡಲಿ, ಕರ್ಮಗಳನ್ನು[೧] ಅನುಷ್ಠಿಸಲಿ, ದೇವತೆಗಳನ್ನು ಭಜಿಸಲಿ; ಜೀವ-ಪರಮಾತ್ಮರ ಐಕ್ಯಜ್ಞಾನವಿಲ್ಲದೆ ನೂರು ಮಂದಿ ಬ್ರಹ್ಮರು ಪ್ರಲಯವನ್ನು ಪಡೆದರೂ[೨] ಮುಕ್ತಿಯು ಸಿದ್ಧಿಸುವುದಿಲ್ಲ.

[[೧] ಇಷ್ಟವೇ ಮೊದಲಾದ ವೈದಿಕ ಕರ್ಮಗಳು ಮತ್ತು ಪೂರ್ತವೇ ಮೊದಲಾದ ಸ್ಮಾರ್ತಕರ್ಮಗಳು.

[೨] ಎಷ್ಟು ದೀರ್ಘಕಾಲವು ಕಳೆದುಹೋದರೂ ಎಂದರ್ಥ.]

**ಅಮೃತತ್ವಸ್ಯ ನಾಶಾಸ್ತಿ ವಿತ್ತೇನೇತ್ಯೇವ ಹಿ ಶ್ರುತಿಃ ।**
**ಬ್ರವೀತಿ ಕರ್ಮಣೋ ಮುಕ್ತೇರಹೇತುತ್ವಂ ಸ್ಫುಟಂ ಯತಃ ॥ ೭ ॥**

**ವಿತ್ತೇನ**=ದ್ರವ್ಯದಿಂದ **ಅಮೃತತ್ವಸ್ಯ**=ಅಮೃತತ್ವದ **ಆಶಾ**=ಆಶೆಯು **ನ ಅಸ್ತಿ**=ಇಲ್ಲ, **ಇತಿ ಏವ ಹಿ**=ಹೀಗೆಂದೇ **ಶ್ರುತಿಃ**=ಶ್ರುತಿಯು **ಬ್ರವೀತಿ**=ಹೇಳುತ್ತದೆ; **ಯತಃ**=ಏಕೆಂದರೆ **ಮುಕ್ತೇಃ**=ಮುಕ್ತಿಗೆ **ಕರ್ಮಣಃ**=ಕರ್ಮದ **ಅಹೇತುತ್ವಂ**=ಅಕಾರಣವು **ಸ್ಫುಟಂ**=ಸ್ಫುಟವಾಗಿದೆ.

**೭.** ದ್ರವ್ಯದ[೧] ಮೂಲಕ ಅಮೃತತ್ವದ ಆಶೆಯಿಲ್ಲ—ಹೀಗೆಂದೇ ಶ್ರುತಿಯು ಹೇಳುತ್ತದೆ;[೨] ಏಕೆಂದರೆ ಮುಕ್ತಿಗೆ ಕರ್ಮವು ಕಾರಣವಲ್ಲವೆಂಬುದು ಸ್ಫುಟವಾಗಿದೆ.[೩]

[[೧] ದ್ರವ್ಯಸಾಧ್ಯವಾದ ಕರ್ಮದ ಮೂಲಕ.

[೨] 'ಆದರೆ ದ್ರವ್ಯದ ಮೂಲಕ ಅಮೃತತ್ವದ ಆಶೆಯಿಲ್ಲ' **ಅಮೃತತ್ವಸ್ಯ ತು ನಾಶಾಸ್ತಿ ವಿತ್ತೇನೇತಿ** (ಬೃಹದಾರಣ್ಯಕ ಉ. ೪. ೪. ೨) ಎಂದು ಯಾಜ್ಞವಲ್ಕ್ಯನು ಮೈತ್ರೇಯಿಗೆ ಹೇಳುತ್ತಾನೆ. 'ಕರ್ಮದಿಂದಾಗಲಿ ಸಂತತಿಯಿಂದಾಗಲಿ ಧನದಿಂದಾಗಲಿ (ಅಮೃ

ತತ್ತ್ವವು) ಸಾಧ್ಯವಿಲ್ಲ, ತ್ಯಾಗದಿಂದಲೇ ಕೆಲವರು ಅಮೃತತ್ವವನ್ನು ಹೊಂದಿದರು' **ನ ಕರ್ಮಣಾ ನ ಪ್ರಜಯಾ ಧನೇನ ತ್ಯಾಗೇನೈಕೇ ಅಮೃತತ್ವಮಾನಶುಃ** (ಮಹಾನಾರಾಯಣೋಪನಿಷತ್) ಎಂದು ಮತ್ತೊಂದು ಶ್ರುತಿಯೂ ಹೇಳುತ್ತದೆ.

೩ ಕರ್ಮಕಾಂಡದ ಅಧ್ಯಯನ ಅನುಷ್ಠಾನ ಇವುಗಳಿಂದ ಆತ್ಯಂತಿಕ-ದುಃಖ-ನಿವೃತ್ತಿಯೂ ಆಗುವುದಿಲ್ಲ. 'ಬ್ರಾಹ್ಮಣನು ಕರ್ಮಕೃತವಾದ ಲೋಕಗಳನ್ನು ಪರೀಕ್ಷಿಸಿ, "ನಿತ್ಯವಸ್ತುವು ಅನಿತ್ಯ ಸಾಧನಗಳಿಂದ ಆಗುವುದಿಲ್ಲ" ಎಂದು ವೈರಾಗ್ಯವನ್ನು ಹೊಂದಬೇಕು' **ಪರೀಕ್ಷ್ಯ ಲೋಕಾನ್ ಕರ್ಮಚಿತಾನ್ ಬ್ರಾಹ್ಮಣೋ ನಿರ್ವೇದಮಾಯಾನ್ನಾಸ್ತ್ಯಕೃತಃ ಕೃತೇನ** ಎಂದು ಮುಂಡಕಶ್ರುತಿಯು (೧. ೨. ೧೨) ಹೇಳುತ್ತದೆ. 'ಹೇಗೆ ಇಲ್ಲಿ ಕರ್ಮಜಿತವಾದ ಲೋಕವು ಕ್ಷಯವಾಗುತ್ತದೆಯೊ ಹಾಗೆಯೇ ಅಲ್ಲಿ ಪುಣ್ಯಜಿತವಾದ ಲೋಕವು ಕ್ಷಯವಾಗುತ್ತದೆ' **ತದ್ಯಥೇಹ ಕರ್ಮಜಿತೋ ಲೋಕಃ ಕ್ಷೀಯತ ಏವಮೇವಾಮುತ್ರ ಪುಣ್ಯಜಿತೋ ಲೋಕಃ ಕ್ಷೀಯತೇ** ಎಂದು ಛಾಂದೋಗ್ಯಶ್ರುತಿಯು (೮. ೧. ೬) ಹೇಳುತ್ತದೆ. ಆತ್ಮನನ್ನು ಅರಿತುಕೊಳ್ಳದೆ ಕರ್ಮಮಾರ್ಗದಲ್ಲೇ ಪ್ರವೃತ್ತರಾಗಿರುವವರಿಗೆ ಯಾವ ಲೋಕಗಳಲ್ಲಿಯೂ ಸ್ವಾತಂತ್ರ್ಯವಿರುವುದಿಲ್ಲ.]

**ಅತೋ ವಿಮುಕ್ತ್ಯೈ ಪ್ರಯತೇತ ವಿದ್ವಾನ್**
**ಸಂನ್ಯಸ್ತ-ಬಾಹ್ಯಾರ್ಥ-ಸುಖಸ್ಪೃಹಃ ಸನ್ ।**
**ಸಂತಂ ಮಹಾಂತಂ ಸಮುಪೇತ್ಯ ದೇಶಿಕಂ**
**ತೇನೋಪದಿಷ್ಟಾರ್ಥ-ಸಮಾಹಿತಾತ್ಮಾ ॥ ೮ ॥**

**ಅತಃ** = ಆದುದರಿಂದ **ವಿದ್ವಾನ್** = ವಿವೇಕಿಯು **ಸಂನ್ಯಸ್ತ-ಬಾಹ್ಯಾರ್ಥ-ಸುಖಸ್ಪೃಹಃ ಸನ್** = ಬಾಹ್ಯ ವಿಷಯಗಳಿಂದಾಗುವ ಸುಖದ ಆಶೆಯನ್ನು ತ್ಯಜಿಸಿದವನಾಗಿ **ಸಂತಂ** = ಸತ್ಪುರುಷನಾದ **ಮಹಾಂತಂ** = ಮಹಾತ್ಮನಾದ **ದೇಶಿಕಂ** = ಆಚಾರ್ಯನನ್ನು **ಸಮುಪೇತ್ಯ** = ಬಳಿಸಾರಿ, **ತೇನ** = ಅವನಿಂದ **ಉಪದಿಷ್ಟಾರ್ಥ-ಸಮಾಹಿತಾತ್ಮಾ** = ಉಪದೇಶಿಸಲ್ಪಟ್ಟ ತತ್ತ್ವದಲ್ಲಿ ಸಮಾಹಿತವಾದ ಮನಸ್ಸುಳ್ಳವನಾಗಿ **ಮುಕ್ತ್ಯೈ** = ಮುಕ್ತಿಗಾಗಿ **ಪ್ರಯತೇತ** = ಪ್ರಯತ್ನಿಸಬೇಕು.

**೮.** ಆದುದರಿಂದ ವಿವೇಕಿಯಾದವನು (ರೂಪ ರಸ ಮೊದಲಾದ) ಬಾಹ್ಯವಿಷಯಗಳಿಂದಾಗುವ ಸುಖದ ಆಶೆಯನ್ನು ತ್ಯಜಿಸಿ, ಸತ್ಪುರುಷನೂ ಮಹಾತ್ಮನೂ ಆದ ಆಚಾರ್ಯನನ್ನು[೧] ಬಳಿಸಾರಿ,[೨] ಅವನು ಉಪದೇಶಿಸಿದ ತತ್ತ್ವದಲ್ಲಿ ಸಮಾಹಿತವಾದ ಮನಸ್ಸುಳ್ಳವನಾಗಿ ಮುಕ್ತಿಗಾಗಿ ಪ್ರಯತ್ನಿಸಬೇಕು.

[೧ ೩೩ನೆಯ ಶ್ಲೋಕದಲ್ಲಿ ಆಚಾರ್ಯನ ಲಕ್ಷಣಗಳನ್ನು ಹೇಳಿದೆ. ಶಾಸ್ತ್ರಜ್ಞನಾದರೂ ಸ್ವತಂತ್ರವಾಗಿ ಬ್ರಹ್ಮಜ್ಞಾನವನ್ನು ಅನ್ವೇಷಿಸಕೂಡದು. 'ಆಚಾರ್ಯ

ವಂತನಾದ ಮನುಷ್ಯನೇ ಅರಿತುಕೊಳ್ಳುತ್ತಾನೆ', **ಆಚಾರ್ಯವಾನ್ ಪುರುಷೋ ವೇದ** (ಛಾಂದೋಗ್ಯ ಉ. ೬. ೧೪. ೨) ಎಂದು ಶ್ರುತಿಯು ಹೇಳುತ್ತದೆ. ಇದೇ ಶ್ರುತಿಯು 'ಆಚಾರ್ಯನಿಂದಲೇ ತಿಳಿದುಕೊಂಡ ವಿದ್ಯೆಯು ಸಾಧು-ತಮತ್ವವನ್ನು ಹೊಂದುತ್ತದೆ' **ಆಚಾರ್ಯಾದ್ಧ್ಯೇವ ವಿದ್ಯಾ ವಿದಿತಾ ಸಾಧಿಷ್ಠಂ ಪ್ರಾಪತ್** (ಛಾಂದೋಗ್ಯ ಉ. ೪. ೯. ೩) ಎಂದೂ ಹೇಳುತ್ತದೆ.

[2] ಆಚಾರ್ಯನನ್ನು ವಿಧಿಪೂರ್ವಕವಾಗಿ ಬಳಿಸಾರಬೇಕು. 'ಅದನ್ನು ತಿಳಿಯುವುದಕ್ಕಾಗಿ ಅವನು ಸಮಿತ್ಪಾಣಿಯಾಗಿ ಶ್ರೋತ್ರಿಯನೂ ಬ್ರಹ್ಮನಿಷ್ಠನೂ ಆದ ಗುರುವನ್ನೇ ಬಳಿಸಾರಬೇಕು' **ತದ್ವಿಜ್ಞಾನಾರ್ಥಂ ಸ ಗುರುಮೇವಾಭಿಗಚ್ಛೇತ್ ಸಮಿತ್ಪಾಣಿಃ ಶ್ರೋತ್ರಿಯಂ ಬ್ರಹ್ಮನಿಷ್ಠಮ್** (ಮುಂಡಕ ಉ. ೧. ೨. ೧೨) ಎಂದು ಶ್ರುತಿಯು ಹೇಳುತ್ತದೆ.]

**ಉದ್ಧರೇದಾತ್ಮನಾತ್ಮಾನಂ ಮಗ್ನಂ ಸಂಸಾರವಾರಿಧೌ ।**
**ಯೋಗಾರೂಢತ್ವಮಾಸಾದ್ಯ ಸಮ್ಯಗ್ದರ್ಶನ-ನಿಷ್ಠಯಾ ॥ ೯ ॥**

**ಸಮ್ಯಗ್-ದರ್ಶನ-ನಿಷ್ಠಯಾ** = ಸಮ್ಯಗ್‌ಜ್ಞಾನದಲ್ಲಿರುವ ನಿಷ್ಠೆಯಿಂದ **ಯೋಗಾರೂಢತ್ವಂ** = ಯೋಗಾರೂಢತ್ವವನ್ನು **ಆಸಾದ್ಯ** = ಪಡೆದು **ಸಂಸಾರ-ವಾರಿಧೌ** = ಸಂಸಾರ ಸಮುದ್ರದಲ್ಲಿ **ಮಗ್ನಂ** = ಮುಳುಗಿರುವ **ಆತ್ಮಾನಂ** = ತನ್ನನ್ನು **ಆತ್ಮನಾ** = ತನ್ನಿಂದಲೇ **ಉದ್ಧರೇತ್** = ಉದ್ಧರಿಸಿಕೊಳ್ಳಬೇಕು.

**೯.** ಸಮ್ಯಗ್‌ಜ್ಞಾನದಲ್ಲಿರುವ ನಿಷ್ಠೆಯಿಂದ ಯೋಗಾರೂಢತ್ವವನ್ನು[1] ಪಡೆದು, ಸಂಸಾರಸಮುದ್ರದಲ್ಲಿ[2] ಮುಳುಗಿರುವ ತನ್ನನ್ನು ತನ್ನಿಂದಲೇ ಉದ್ಧರಿಸಿಕೊಳ್ಳಬೇಕು.[3]

[[1] ಯೋಗಸಿದ್ಧಿ ಎಂದರ್ಥ. 'ಯಾವಾಗ (ಯೋಗಿಯು) ಇಂದ್ರಿಯಗಳ ವಿಷಯಗಳಲ್ಲಿ (ಮತ್ತು ಅದಕ್ಕೆ ಸಂಬಂಧಪಟ್ಟ) ಕರ್ಮಗಳಲ್ಲಿ ಆಸಕ್ತನಾಗುವುದಿಲ್ಲವೊ ಆಗ ಸಂಕಲ್ಪಗಳನ್ನೆಲ್ಲ ಬಿಡುವವನಾಗಿ ಯೋಗಾರೂಢನೆಂದು ಹೇಳಲ್ಪಡುತ್ತಾನೆ' **ಯದಾ ಹಿ ನೇಂದ್ರಿಯಾರ್ಥೇಷು ನ ಕರ್ಮಸ್ವನುಷಜ್ಜತೇ । ಸರ್ವಸಂಕಲ್ಪಸಂನ್ಯಾಸೀ ಯೋಗಾರೂಢಸ್ತದೋಚ್ಯತೇ॥** (ಗೀತಾ ೬. ೪) ಎಂದು ಭಗವಂತನು ಹೇಳಿರುತ್ತಾನೆ.

[2] 'ಈ ಸಂಸಾರವೆಂಬ ವಿಶಾಲಸಾಗರದಲ್ಲಿ ಬಿದ್ದು, ಘೋರವೂ ಕ್ರೂರವೂ ಆದ ಮೀನು-ಮೊಸಳೆಗಳಿಂದ ನುಂಗಲ್ಪಟ್ಟು, ವಿಷಯಸಮೂಹವೆಂಬ ಅಲೆಗಳ ಹೊಡೆತದಿಂದ ಪೀಡಿತನಾಗಿ, ದಿಗ್ಭ್ರಮೆ ಹೊಂದಿರುವ ನನಗೆ, ಹೇ ಲಕ್ಷ್ಮೀನರಸಿಂಹ, ನಿನ್ನ ಕರಗಳ ಆಸರೆಯನ್ನು ನೀಡು' **ಸಂಸಾರ-ಸಾಗರ-ವಿಶಾಲ-ಕರಾಲ-ಕಾಲ-ನಕ್ರ-ಗ್ರಹ-ಗ್ರಸನ-ನಿಗ್ರಹ-ವಿಗ್ರಹಸ್ಯ। ವ್ಯಗ್ರಸ್ಯ ರಾಗನಿಚಯೋರ್ಮಿ-ನಿಪೀಡಿತಸ್ಯ ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಮ್॥** ಎಂದು ಆಚಾರ್ಯರೇ ಭವಾಬ್ಧಿಯಲ್ಲಿ ಮುಳುಗಿರುವ ಸಂಸಾರಿಯ ಅವಸ್ಥೆಯನ್ನು ಹೇಳಿರುತ್ತಾರೆ.

[3]'ಮನಸ್ಸಿನಿಂದಲೇ ತನ್ನನ್ನು ಉದ್ಧರಿಸಿಕೊಳ್ಳಬೇಕು, ತನ್ನನ್ನು ಕುಗ್ಗಿಸಿಕೊಳ್ಳಬಾರದು; ಏಕೆಂದರೆ (ಶುದ್ಧವಾದ) ಮನಸ್ಸೇ ತನ್ನ ಬಂಧು, (ವಿಷಯಗಳಲ್ಲಿ ಅನುರಕ್ತವಾದ) ಮನಸ್ಸೇ ತನ್ನ ಶತ್ರು' ಉದ್ಧರೇದಾತ್ಮನಾತ್ಮಾನಂ ನಾತ್ಮಾನಮವಸಾದಯೇತ್। ಆತ್ಮೈವ ಹ್ಯಾತ್ಮನೋ ಬಂಧುರಾತ್ಮೈವ ರಿಪುರಾತ್ಮನಃ॥ (ಗೀತಾ ೬. ೫.)]

**ಸಂನ್ಯಸ್ಯ ಸರ್ವಕರ್ಮಾಣಿ ಭವಬಂಧ-ವಿಮುಕ್ತಯೇ।**
**ಯತ್ಯತಾಂ ಪಂಡಿತೈರ್ಧೀರೈರಾತ್ಮಾಭ್ಯಾಸ ಉಪಸ್ಥಿತೈಃ ॥ ೧೦ ॥**

**ಸರ್ವಕರ್ಮಾಣಿ** = ಸರ್ವಕರ್ಮಗಳನ್ನು **ಸಂನ್ಯಸ್ಯ** = ತ್ಯಜಿಸಿ **ಭವಬಂಧವಿಮುಕ್ತಯೇ** = ಸಂಸಾರವೆಂಬ ಕಟ್ಟಿನಿಂದ ಬಿಡಿಸಿಕೊಳ್ಳಲು **ಆತ್ಮಾಭ್ಯಾಸೇ** = ಆತ್ಮಚಿಂತನದಲ್ಲಿ **ಉಪಸ್ಥಿತೈಃ** = ನಿಷ್ಠರಾದ **ಧೀರೈಃ** = ಧೀಮಂತರಾದ **ಪಂಡಿತೈಃ** = ವಿವೇಕಿಗಳಿಂದ **ಯತ್ಯತಾಂ** = ಪ್ರಯತ್ನವು ಮಾಡಲ್ಪಡಲಿ.

**೧೦.** ಆತ್ಮಚಿಂತನದಲ್ಲಿ[1] ನಿಷ್ಠೆಯುಳ್ಳವರೂ ಧೀಮಂತರೂ[2] ಆದ ವಿವೇಕಿಗಳು ಸರ್ವಕರ್ಮಗಳನ್ನೂ[3] ತ್ಯಜಿಸಿ ಸಂಸಾರವೆಂಬ ಕಟ್ಟಿನಿಂದ ಬಿಡಿಸಿಕೊಳ್ಳಲು ಪ್ರಯತ್ನಿಸಲಿ.

[[1] ಬ್ರಹ್ಮವಿಷಯವನ್ನೇ ಯಾವಾಗಲೂ ಚಿಂತಿಸುತ್ತ, ಅದನ್ನೇ ಮಾತಾಡುತ್ತ, ಅದಕ್ಕೆ ವಿರುದ್ಧವಾದ ಭಾವನೆಗಳನ್ನು ನಿರಾಕರಿಸುತ್ತ, ಅದರಲ್ಲೇ ತನ್ಮಯವಾಗಿರುವುದು ಆತ್ಮಾಭ್ಯಾಸ, ತಚ್ಚಿಂತನಂ ತತ್ಕಥನಮನ್ಯೋಽನ್ಯಂ ತತ್ಪ್ರಬೋಧನಮ್। ಏತದೇಕಪರತ್ವಂ ಚ ಬ್ರಹ್ಮಾಭ್ಯಾಸಂ ವಿದುರ್ಬುಧಾಃ॥

[2] ತಮ್ಮ ಬುದ್ಧಿಯನ್ನು ವಶದಲ್ಲಿಟ್ಟಿರುವವರು.

[3] ಕರ್ಮಕಾಂಡದಲ್ಲಿ ಹೇಳಿರುವ ಕಾಮ್ಯಕರ್ಮಗಳನ್ನು.]

**ಚಿತ್ತಸ್ಯ ಶುದ್ಧಯೇ ಕರ್ಮ ನ ತು ವಸ್ತೂಪಲಬ್ಧಯೇ।**
**ವಸ್ತುಸಿದ್ಧಿರ್ವಿಚಾರೇಣ ನ ಕಿಂಚಿತ್ ಕರ್ಮಕೋಟಿಭಿಃ ॥ ೧೧ ॥**

**ಕರ್ಮ** = ಕರ್ಮವು **ಚಿತ್ತಸ್ಯ** = ಚಿತ್ತದ **ಶುದ್ಧಯೇ** = ಶುದ್ಧಿಗಾಗಿ, **ವಸ್ತು-ಉಪಲಬ್ಧಯೇ** = ಪರವಸ್ತುವಿನ ಸಾಕ್ಷಾತ್ಕಾರಕ್ಕಾಗಿ **ನ ತು** = ಅಲ್ಲ; **ವಸ್ತುಸಿದ್ಧಿಃ** = ವಸ್ತುಸಾಕ್ಷಾತ್ಕಾರವು **ವಿಚಾರೇಣ** = ವಿಚಾರದಿಂದ [ಉಂಟಾಗುವುದು], **ಕರ್ಮಕೋಟಿಭಿಃ** = ಕೋಟಿಕರ್ಮಗಳಿಂದಲೂ **ನ ಕಿಂಚಿತ್** = ಏನೂ ಆಗುವುದಿಲ್ಲ.

**೧೧.** ಕರ್ಮವು ಚಿತ್ತಶುದ್ಧಿಗಾಗಿ ಇರುವುದೇ ಹೊರತು ಪರವಸ್ತುವಿನ ಸಾಕ್ಷಾತ್ಕಾರಕ್ಕಾಗಿ ಅಲ್ಲ. ವಸ್ತುಸಾಕ್ಷಾತ್ಕಾರವು ವಿಚಾರದಿಂದ ಉಂಟಾಗುವುದೇ ವಿನಾ ಕೋಟಿಕರ್ಮಗಳಿಂದಲೂ ಆಗುವುದಿಲ್ಲ.

[ಫಲಾಭಿಸಂಧಿಯಿಲ್ಲದೆ ಮಾಡಿದ ಕರ್ಮವು ಚಿತ್ತಶುದ್ಧಿಯ ಮೂಲಕ ಆತ್ಮಜ್ಞಾನಕ್ಕೆ ಅವಕಾಶವನ್ನುಂಟುಮಾಡುತ್ತದೆ ಎಂಬುದು ಅಭಿಪ್ರಾಯ.]

**ಸಮ್ಯಗ್ವಿಚಾರತಃ ಸಿದ್ಧಾ ರಜ್ಜು-ತತ್ತ್ವಾವಧಾರಣಾ ।**
**ಭ್ರಾಂತ್ಯೋದಿತ-ಮಹಾಸರ್ಪ-ಭಯದುಃಖವಿನಾಶಿನೀ ॥ ೧೨ ॥**

**ಭ್ರಾಂತ್ಯಾ** = ಭ್ರಾಂತಿಯಿಂದ **ಉದಿತ-ಮಹಾಸರ್ಪ-ಭಯದುಃಖ-ವಿನಾಶಿನೀ** = ಉದಿತವಾದ ಮಹಾಸರ್ಪದಿಂದ ಉಂಟಾದ ಭಯದುಃಖಗಳನ್ನು ಹೋಗಲಾಡಿಸುವ **ರಜ್ಜು-ತತ್ತ್ವ-ಅವಧಾರಣಾ** = ಹಗ್ಗವೆಂಬ ನಿಜಸ್ಥಿತಿಯ ನಿಶ್ಚಯವು **ಸಮ್ಯಗ್-ವಿಚಾರತಃ** = ಸಮ್ಯಗ್ವಿಚಾರದಿಂದಲೇ **ಸಿದ್ಧಾ** = ಸಿದ್ಧವಾಗುವುದು.

**೧೨.** ಭ್ರಾಂತಿಜನಿತವಾದ ಮಹಾಸರ್ಪದಿಂದ ಉಂಟಾಗುವ ಭಯದುಃಖಗಳನ್ನು ಹೋಗಲಾಡಿಸುವ ಹಗ್ಗವೆಂಬ ನಿಜಸ್ಥಿತಿಯ ನಿಶ್ಚಯವು ಸಮ್ಯಗ್ವಿಚಾರದಿಂದಲೇ ಸಿದ್ಧವಾಗುವುದು.

[ನಸುಗತ್ತಲೆಯಲ್ಲಿ ಬಿದ್ದಿರುವ ಹಗ್ಗವನ್ನು ಹಾವೆಂದು ಭಾವಿಸಿಕೊಂಡು ಹೆದರಿದ ಮನುಷ್ಯನು ಒಂದು ದೀಪವನ್ನು ತಂದು 'ಇದು ಹಗ್ಗ, ಹಾವಲ್ಲ' ಎಂದು ವಿಚಾರದ ಮೂಲಕ ವಸ್ತುತತ್ತ್ವವನ್ನು ಅರಿತುಕೊಂಡು ಭಯವನ್ನು ಬಿಡುವುದು ಎಲ್ಲರಿಗೂ ತಿಳಿದ ವಿಷಯ. ಹೀಗೆಯೇ ಶರೀರೇಂದ್ರಿಯ-ಸಂಘಾತವನ್ನು ಆತ್ಮನೆಂದು ಭಾವಿಸಿಕೊಂಡವನು ಆತ್ಮನ ಸ್ವರೂಪವನ್ನು ನಿರ್ಧರಿಸಿದ ಮೇಲೆ ಭ್ರಾಂತಿಯಿಂದ ಉಂಟಾಗಿದ್ದ ಭಯದುಃಖಗಳನ್ನು ಬಿಡುತ್ತಾನೆ.]

**ಅರ್ಥಸ್ಯ ನಿಶ್ಚಯೋ ದೃಷ್ಟೋ ವಿಚಾರೇಣ ಹಿತೋಕ್ತಿತಃ ।**
**ನ ಸ್ನಾನೇನ ನ ದಾನೇನ ಪ್ರಾಣಾಯಾಮ-ಶತೇನ ವಾ ॥ ೧೩ ॥**

**ಅರ್ಥಸ್ಯ** = ತತ್ತ್ವದ **ನಿಶ್ಚಯಃ** = ನಿಶ್ಚಯವು **ಹಿತೋಕ್ತಿತಃ** = ಆಪ್ತವಾಕ್ಯದಿಂದಲೂ **ವಿಚಾರೇಣ** = ವಿಚಾರದಿಂದಲೂ **ದೃಷ್ಟಃ** = ಕಂಡುಬರುತ್ತದೆ; **ಸ್ನಾನೇನ** = ಸ್ನಾನಮಾಡುವುದರಿಂದಲೂ **ನ** = ಇಲ್ಲ, **ದಾನೇನ** = ದಾನದಿಂದಲೂ **ವಾ** = ಅಥವಾ **ಪ್ರಾಣಾಯಾಮ-ಶತೇನ** = ನೂರಾರು ಪ್ರಾಣಾಯಾಮಗಳಿಂದಲೂ **ನ** = ಇಲ್ಲ.

**೧೩.** ತತ್ತ್ವನಿಶ್ಚಯವು ಆಪ್ತವಾಕ್ಯವನ್ನು[೧] ಅನುಸರಿಸಿದ ವಿಚಾರದಿಂದ[೨] ಸಿದ್ಧಿಸುತ್ತದೆಯೇ ವಿನಾ ಸ್ನಾನದಿಂದಾಗಲಿ ದಾನದಿಂದಾಗಲಿ ಅಥವಾ ನೂರಾರು ಪ್ರಾಣಾಯಾಮಗಳಿಂದಾಗಲಿ ಸಿದ್ಧಿಸುವುದಿಲ್ಲ.

[[೧] ಆಪ್ತರಾದ ಆಚಾರ್ಯರು ಉಪದೇಶಮಾಡುವ ಯಥಾರ್ಥವಾದ ಮಾತು ಹಿತೋಕ್ತಿ ಎನಿಸುವುದು.

ವಿ ವಸ್ತುವನ್ನು ಯಥಾರ್ಥವಾಗಿ ನಿರ್ಧರಿಸಲು ಅನುಕೂಲವಾಗಿರುವ ಮಾನಸ ವ್ಯಾಪಾರವು ವಿಚಾರವೆನಿಸುವುದು.]

**ಅಧಿಕಾರಿಣಮಾಶಾಸ್ತೇ ಫಲಸಿದ್ಧಿರ್ವಿಶೇಷತಃ ।**
**ಉಪಾಯಾ ದೇಶ-ಕಾಲಾದ್ಯಾಃ ಸಂತ್ಯಸ್ಮಿನ್ ಸಹಕಾರಿಣಃ ॥ ೧೪ ॥**

**ಫಲಸಿದ್ಧಿಃ**=ಫಲಪ್ರಾಪ್ತಿಯು **ಅಧಿಕಾರಿಣಂ**=ಅಧಿಕಾರಿಯನ್ನು **ವಿಶೇಷತಃ**=ವಿಶೇಷವಾಗಿ **ಆಶಾಸ್ತೇ**=ಬಯಸುತ್ತದೆ; **ಅಸ್ಮಿನ್**=ಈ ವಿಷಯದಲ್ಲಿ **ದೇಶ-ಕಾಲಾದ್ಯಾಃ**=ದೇಶಕಾಲಾದಿಗಳು **ಸಹಕಾರಿಣಃ**=ಸಹಕಾರಿಗಳಾದ **ಉಪಾಯಾಃ ಸಂತಿ**=ಸಾಧನಗಳಾಗಿವೆ.

**೧೪.** (ಬ್ರಹ್ಮಜ್ಞಾನವೆಂಬ) ಫಲಪ್ರಾಪ್ತಿಯು (ಶಮ-ದಮಾದಿಗಳಿಂದ ಕೂಡಿದ) ಅಧಿಕಾರಿಯನ್ನು ವಿಶೇಷವಾಗಿ ಅಪೇಕ್ಷಿಸುತ್ತದೆ. ಈ ವಿಷಯದಲ್ಲಿ ದೇಶ ಕಾಲ ಮೊದಲಾದುವು ಸಹಾಯಕ ಸಾಧನಗಳಾಗಿವೆ.

[ಮುಮುಕ್ಷುವು ಮುಖ್ಯವಾಗಿ ಸಮರ್ಥನಾಗಿರಬೇಕು; ಏಕೆಂದರೆ ಒಳಗಿನ ಸಾಮರ್ಥ್ಯವೇ ಫಲವನ್ನು ಕೊಡುವುದೇ ವಿನಾ ಇತರ ಹೊರಗಿನ ಉಪಕರಣಗಳಲ್ಲ. ಕರ್ಮಮಾರ್ಗದಲ್ಲಿ ನಿರತರಾಗಿರುವವರು **ಯದಾಹವನೀಯೇ ಜುಹೋತಿ, ಸಾಯಂ ಜುಹೋತಿ** ಎಂದು ಶಾಸ್ತ್ರದಲ್ಲಿ ಹೇಳಿರುವ ಪ್ರಕಾರ ಅಸಾಧಾರಣವಾದ ದೇಶಕಾಲಾದಿಗಳನ್ನು ಅವಲಂಬಿಸಬೇಕಾಗಿರುತ್ತದೆ. ಆದರೆ ಬ್ರಹ್ಮಜ್ಞಾನಕ್ಕೆ ಅಂಥ ದೇಶಕಾಲಗಳ ನಿಯಮವಿಲ್ಲ. ಅವನಿಗೆ ನಿರ್ಜನಾದಿ ಪ್ರದೇಶಗಳು, ಅನುಕೂಲವಾದ ಮನಸ್ಸಮಾಧಾನದ ಕಾಲ, ಸತ್ಸಂಗ ಇವೇ ಮೊದಲಾದುವು ಸಹಕಾರಿ-ಕಾರಣಗಳಾಗಿರುತ್ತವೆ.]

**ಅತೋ ವಿಚಾರಃ ಕರ್ತವ್ಯೋ ಜಿಜ್ಞಾಸೋರಾತ್ಮವಸ್ತುನಃ ।**
**ಸಮಾಸಾದ್ಯ ದಯಾಸಿಂಧುಂ ಗುರುಂ ಬ್ರಹ್ಮವಿದುತ್ತಮಮ್ ॥ ೧೫ ॥**

**ಅತಃ**=ಆದುದರಿಂದ **ಬ್ರಹ್ಮವಿದುತ್ತಮಂ**=ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠನಾದ **ದಯಾಸಿಂಧುಂ**=ದಯಾಸಾಗರನಾದ **ಗುರುಂ**=ಗುರುವನ್ನು **ಸಮಾಸಾದ್ಯ** ಹೊಂದಿ **ಜಿಜ್ಞಾಸೋಃ**=ಜಿಜ್ಞಾಸುವಿಗೆ **ಆತ್ಮವಸ್ತುನಃ**=ಆತ್ಮತತ್ತ್ವದ **ವಿಚಾರಃ** ವಿಚಾರವು **ಕರ್ತವ್ಯಃ**=ಮಾಡತಕ್ಕದ್ದಾಗಿದೆ.

**೧೫.** ಆದುದರಿಂದ ಜಿಜ್ಞಾಸುವು ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠನೂ ದಯಾಸಾಗರನೂ ಆದ ಗುರುವನ್ನು[೧] ಹೊಂದಿ ಆತ್ಮತತ್ತ್ವದ ವಿಚಾರವನ್ನು ಮಾಡಬೇಕು.

[[೧] ಗು-ಶಬ್ದವು ಅಂಧಕಾರವನ್ನೂ ರು-ಶಬ್ದವು ಅದರ ನಾಶವನ್ನೂ ಸೂಚಿಸುತ್ತವೆ; ಅಂಧಕಾರವನ್ನು ಎಂದರೆ ಅಜ್ಞಾನವೆಂಬ ಹೃದಯಾಂಧಕಾರವನ್ನು ನಾಶಮಾಡು

ವವನಿಗೆ ಗುರು ಎಂದು ಹೆಸರು. **ಗುಶಬ್ದಸ್ತ್ವಂಧಕಾರಸ್ಸ್ಯಾತ್ ರುಶಬ್ದಸ್ತನ್ನಿರೋಧಕಃ । ಅಂಧಕಾರನಿರೋಧಿತ್ವಾತ್ ಗುರುರಿತ್ಯಭಿಧೀಯತೇ ॥** ಎಂದು ಗುರುಗೀತೆಯು ಹೇಳುತ್ತದೆ.]

**ಮೇಧಾವೀ ಪುರುಷೋ ವಿದ್ವಾನ್ ಊಹಾಪೋಹ-ವಿಚಕ್ಷಣಃ ।**
**ಅಧಿಕಾರ್ಯಾತ್ಮವಿದ್ಯಾಯಾಮುಕ್ತಲಕ್ಷಣ-ಲಕ್ಷಿತಃ ॥ ೧೬ ॥**

**ಮೇಧಾವೀ**=ಮೇಧಾವಿಯಾದ **ವಿದ್ವಾನ್**=ವಿದ್ವಾಂಸನಾದ **ಊಹಾಪೋಹ-ವಿಚಕ್ಷಣಃ**=ಊಹಾಪೋಹಗಳಲ್ಲಿ ಚತುರನಾದ **ಉಕ್ತ-ಲಕ್ಷಣ-ಲಕ್ಷಿತಃ**=ಇಲ್ಲಿಯ ವರೆಗೆ ಹೇಳಲ್ಪಟ್ಟ ಲಕ್ಷಣಗಳನ್ನುಳ್ಳ **ಪುರುಷಃ**=ಪುರುಷನು **ಆತ್ಮವಿದ್ಯಾಯಾಂ**=ಆತ್ಮವಿದ್ಯೆಯಲ್ಲಿ **ಅಧಿಕಾರೀ**=ಅಧಿಕಾರಿಯು.

**೧೬.** ಮೇಧಾವಿಯೂ[೧] ವಿದ್ವಾಂಸನೂ ಊಹಾಪೋಹಗಳಲ್ಲಿ ಚತುರನೂ[೨] ಇಲ್ಲಿಯ ವರೆಗೆ ಹೇಳಲ್ಪಟ್ಟ ಲಕ್ಷಣಗಳುಳ್ಳವನೂ[೩] ಆದ ಪುರುಷನು ಆತ್ಮವಿದ್ಯೆಯಲ್ಲಿ ಅಧಿಕಾರಿಯಾಗಿರುತ್ತಾನೆ.[೪]

[ಬ್ರಹ್ಮಜ್ಞಾನವೆಂಬ ಫಲಕ್ಕೆ ಅಧಿಕಾರಿಯಾದ ಪುರುಷನ ಲಕ್ಷಣಗಳನ್ನು ಇಲ್ಲಿ ಹೇಳಿದೆ.

೧ ಕೇಳಿದ ಅರ್ಥವನ್ನು ನೆನಪಿನಲ್ಲಿಡುವ ಸಾಮರ್ಥ್ಯವುಳ್ಳವನು.

೨ ತರ್ಕ-ಮೀಮಾಂಸೆಗಳಲ್ಲಿ ನುರಿತವನು.

೩ ೮ನೆಯ ಶ್ಲೋಕದಿಂದ ೧೫ನೆಯ ಶ್ಲೋಕದ ವರೆಗೆ ಸೂಚಿಸಲ್ಪಟ್ಟ ವಿವೇಕ ವೈರಾಗ್ಯ ಮೊದಲಾದುವುಗಳಿಂದ ಕೂಡಿರುವವನು.

೪ ಆತ್ಮವಿದ್ಯಾಫಲವೆಂಬ ಮೋಕ್ಷವನ್ನು ಅನುಭವಿಸಲು ಅರ್ಹನಾಗಿರುತ್ತಾನೆ.]

**ವಿವೇಕಿನೋ ವಿರಕ್ತಸ್ಯ ಶಮಾದಿಗುಣ-ಶಾಲಿನಃ ।**
**ಮುಮುಕ್ಷೋರೇವ ಹಿ ಬ್ರಹ್ಮಜಿಜ್ಞಾಸಾ-ಯೋಗ್ಯತಾ ಮತಾ ॥ ೧೭ ॥**

**ವಿವೇಕಿನಃ** = ವಿವೇಕಿಯಾದ **ವಿರಕ್ತಸ್ಯ** = ವಿರಕ್ತನಾದ **ಶಮಾದಿಗುಣ-ಶಾಲಿನಃ**=ಶಮಾದಿಗುಣಗಳಿಂದ ಕೂಡಿರುವ **ಮುಮುಕ್ಷೋಃ ಏವ ಹಿ**=ಮುಮುಕ್ಷುವಿಗೆ ಮಾತ್ರ **ಬ್ರಹ್ಮಜಿಜ್ಞಾಸಾಯೋಗ್ಯತಾ**=ಬ್ರಹ್ಮವಿಚಾರದಲ್ಲಿ ಅರ್ಹತೆ [ಇರುವುದೆಂಬುದು] **ಮತಾ**=ಸಮ್ಮತವು.

**೧೭.** ವಿವೇಕಿಯೂ[೧] ವಿರಕ್ತನೂ[೨] ಶಮ ದಮ ಮೊದಲಾದ ಗುಣಗಳಿಂದ ಕೂಡಿರುವವನೂ ಆದ ಮುಮುಕ್ಷುವಿಗೆ ಮಾತ್ರ ಬ್ರಹ್ಮವಿಚಾರವನ್ನು[೩] ಮಾಡುವುದರಲ್ಲಿ ಅರ್ಹತೆಯಿರುತ್ತದೆ.

[೧ ನಿತ್ಯಾನಿತ್ಯವಸ್ತುಗಳನ್ನು ವಿವೇಚನೆ ಮಾಡುವವನು.

೨ ವಿಷಯಗಳಲ್ಲಿ ಆಸಕ್ತನಾಗದವನು.

[೩ ತಿಳಿದುಕೊಳ್ಳಬೇಕೆಂಬ ಬಯಕೆಗೆ ಜಿಜ್ಞಾಸೆ ಎಂದು ಹೆಸರು; ಬ್ರಹ್ಮದ ಜಿಜ್ಞಾಸೆ ಬ್ರಹ್ಮಜಿಜ್ಞಾಸೆ.]

**ಸಾಧನಾನ್ಯತ್ರ ಚತ್ವಾರಿ ಕಥಿತಾನಿ ಮನೀಷಿಭಿಃ ।**
**ಯೇಷು ಸತ್ಸ್ವೇವ ಸನ್ನಿಷ್ಠಾ ಯದಭಾವೇ ನ ಸಿಧ್ಯತಿ ॥ ೧೮ ॥**

**ಅತ್ರ** = ಈ ವಿಷಯದಲ್ಲಿ **ಮನೀಷಿಭಿಃ** = ಜ್ಞಾನಿಗಳಿಂದ **ಚತ್ವಾರಿ** = ನಾಲ್ಕು **ಸಾಧನಾನಿ** = ಸಾಧನಗಳು **ಕಥಿತಾನಿ** = ಹೇಳಲ್ಪಟ್ಟಿವೆ; **ಯೇಷು ಸತ್ಸು ಏವ** = ಯಾವ ಸಾಧನೆಗಳಿದ್ದರೆ **ಸನ್ನಿಷ್ಠಾ** = ಬ್ರಹ್ಮನಿಷ್ಠೆಯು **ಸಿಧ್ಯತಿ** = ಸಿದ್ಧಿಸುವುದು, **ಯದಭಾವೇ** = ಯಾವುದು ಇಲ್ಲದಿದ್ದರೆ **ನ** = ಸಿದ್ಧಿಸುವುದಿಲ್ಲ.

**೧೮.** ಈ ಬ್ರಹ್ಮಜ್ಞಾನವಿಷಯದಲ್ಲಿ ಜ್ಞಾನಿಗಳು ನಾಲ್ಕು ಸಾಧನಗಳನ್ನು ಹೇಳಿರುತ್ತಾರೆ. ಇವು ಇದ್ದರೇ ಬ್ರಹ್ಮನಿಷ್ಠೆಯು ಸಿದ್ಧಿಸುವುದು, ಇಲ್ಲದಿದ್ದರೆ ಸಿದ್ಧಿಸುವುದಿಲ್ಲ.

**ಆದೌ ನಿತ್ಯಾನಿತ್ಯ-ವಸ್ತು-ವಿವೇಕಃ ಪರಿಗಣ್ಯತೇ ।**
**ಇಹಾಮುತ್ರ-ಫಲಭೋಗ-ವಿರಾಗಸ್ತದನಂತರಮ್ ।**
**ಶಮಾದಿ-ಷಟ್ಕ-ಸಂಪತ್ತಿರ್ಮುಮುಕ್ಷುತ್ವಮಿತಿ ಸ್ಫುಟಮ್ ॥ ೧೯ ॥**

**ಆದೌ** = ಮೊದಲು **ನಿತ್ಯ-ಅನಿತ್ಯ-ವಸ್ತು-ವಿವೇಕಃ** = ನಿತ್ಯಾನಿತ್ಯ-ವಸ್ತು-ವಿವೇಕವು **ಪರಿಗಣ್ಯತೇ** = ಎಣಿಸಲ್ಪಡುತ್ತದೆ; **ತದ್-ಅನಂತರಂ** = ಅದಾದಮೇಲೆ **ಇಹ-ಅಮುತ್ರ-ಫಲಭೋಗ-ವಿರಾಗಃ** = ಇಲ್ಲಿ ಮತ್ತು ಪರಲೋಕದಲ್ಲಿ [ಅನುಭವಿಸುವ] ಕರ್ಮಫಲದ ಭೋಗಗಳಲ್ಲಿ ವೈರಾಗ್ಯವು [ಎಣಿಸಲ್ಪಡುತ್ತದೆ]; [ಅದಾದಮೇಲೆ] **ಶಮಾದಿ-ಷಟ್ಕ-ಸಂಪತ್ತಿಃ** = ಶಮವೇ ಮೊದಲಾದ ಆರರ ಲಾಭವು [ಎಣಿಸಲ್ಪಡುತ್ತದೆ]; [ಅದಾದಮೇಲೆ] **ಮುಮುಕ್ಷುತ್ವಂ** = ಮೋಕ್ಷೇಚ್ಛೆಯು **ಇತಿ** = ಹೀಗೆ [ಸಾಧನಚತುಷ್ಟಯವು] **ಸ್ಫುಟಂ** = ಸ್ಫುಟವಾಗಿದೆ.

**೧೯.** ನಿತ್ಯಾನಿತ್ಯವಸ್ತುವಿವೇಕವು ಮೊದಲನೆಯ ಸಾಧನವೆಂದೂ ಇಲ್ಲಿ ಮತ್ತು ಪರಲೋಕದಲ್ಲಿ ಅನುಭವಿಸುವ ಕರ್ಮಫಲದ ಭೋಗಗಳಲ್ಲಿ ವೈರಾಗ್ಯವು ಎರಡನೆಯ ಸಾಧನವೆಂದೂ ಶಮವೇ ಮೊದಲಾದ[೧] ಆರರ ಲಾಭವು ಮೂರನೆಯ ಸಾಧನವೆಂದೂ ಮೋಕ್ಷೇಚ್ಛೆಯು ನಾಲ್ಕನೆಯ ಸಾಧನವೆಂದೂ (ಜ್ಞಾನಿಗಳು) ಸ್ಪಷ್ಟವಾಗಿ ಎಣಿಸಿರುತ್ತಾರೆ.

[ವಿವೇಕವೇ ಮೊದಲಾದ ನಾಲ್ಕು ಸಾಧನಗಳಲ್ಲಿ ಹಿಂದುಹಿಂದಿನದು ಮುಂದುಮುಂದಿನದಕ್ಕೆ ಕಾರಣವಾಗಿರುವುದರಿಂದ ಇವುಗಳನ್ನು ಕ್ರಮವಾಗಿ ಹೇಳಿದೆ.
೧ ಶಮ, ದಮ, ಉಪರತಿ, ತಿತಿಕ್ಷೆ, ಶ್ರದ್ಧೆ ಮತ್ತು ಸಮಾಧಾನ.]

**ಬ್ರಹ್ಮ ಸತ್ಯಂ ಜಗನ್ಮಿಥ್ಯೇತ್ಯೇವಂರೂಪೋ ವಿನಿಶ್ಚಯಃ ।**
**ಸೋಽಯಂ ನಿತ್ಯಾನಿತ್ಯ-ವಸ್ತು-ವಿವೇಕಃ ಸಮುದಾಹೃತಃ ॥ ೨೦ ॥**

**ಬ್ರಹ್ಮ** = ಬ್ರಹ್ಮವು **ಸತ್ಯಂ** = ಸತ್ಯ, **ಜಗತ್** = ಜಗತ್ತು **ಮಿಥ್ಯಾ** = ಮಿಥ್ಯೆ **ಇತ್ಯೇವಂರೂಪಃ** = ಈ ರೂಪದಲ್ಲಿರುವ **ವಿನಿಶ್ಚಯಃ** = ವಿನಿರ್ಣಯವೆಂಬ **ಸಃ ಅಯಂ** = ಆ ಇದೇ **ನಿತ್ಯಾನಿತ್ಯ-ವಸ್ತು-ವಿವೇಕಃ** = ನಿತ್ಯಾನಿತ್ಯವಸ್ತುವಿವೇಕವು ಎಂದು **ಸಮುದಾಹೃತಃ** = ಹೇಳಲ್ಪಟ್ಟಿದೆ.

**೨೦.** ಪರಬ್ರಹ್ಮವಸ್ತುವೊಂದೇ ಸತ್ಯ, ಈ ಜಗತ್ತೆಲ್ಲ ಮಿಥ್ಯೆ—ಎಂಬೀ ರೂಪದ ವಿನಿರ್ಣಯವೇ ನಿತ್ಯಾನಿತ್ಯವಸ್ತುವಿವೇಕ ಎಂದು ಹೇಳಲ್ಪಟ್ಟಿದೆ.

**ತದ್ವೈರಾಗ್ಯಂ ಜಿಹಾಸಾ ಯಾ ದರ್ಶನ-ಶ್ರವಣಾದಿಭಿಃ ।**
**ದೇಹಾದಿ-ಬ್ರಹ್ಮಪರ್ಯಂತೇ ಹ್ಯನಿತ್ಯೇ ಭೋಗವಸ್ತುನಿ ॥ ೨೧ ॥**

**ದೇಹಾದಿ-ಬ್ರಹ್ಮಪರ್ಯಂತೇ** = ದೇಹದಿಂದ ಪ್ರಾರಂಭಿಸಿ ಬ್ರಹ್ಮನ ವರೆಗಿರುವ **ಅನಿತ್ಯೇ** = ಅನಿತ್ಯವಾದ **ಭೋಗವಸ್ತುನಿ** = ಭೋಗವಸ್ತುವಿನಲ್ಲಿ **ದರ್ಶನ-ಶ್ರವಣಾದಿಭಿಃ** = ನೋಡುವುದು ಕೇಳುವುದು ಮೊದಲಾದುವುಗಳಿಂದ **ಯಾ** = ಯಾವ **ಜಿಹಾಸಾ** = ಜುಗುಪ್ಸೆಯು [ಉಂಟಾಗುವುದೊ] **ತತ್ ಹಿ** = ಅದೇ **ವೈರಾಗ್ಯಂ** = ವೈರಾಗ್ಯವು.

**೨೧.** ದೇಹದಿಂದ ಪ್ರಾರಂಭಿಸಿ ಬ್ರಹ್ಮನ ವರೆಗಿರುವ ಅನಿತ್ಯವಾದ ಭೋಗವಸ್ತುವಿನಲ್ಲಿ ದರ್ಶನಶ್ರವಣಾದಿಗಳಿಂದ[೧] ಯಾವ ಜುಗುಪ್ಸೆಯುಂಟಾಗುವುದೋ ಅದೇ ವೈರಾಗ್ಯವು.

[[೧] ಐಹಿಕ-ದೇಹವೇ ಮೊದಲಾದ ಭೋಗ್ಯವಸ್ತುವಿನ ದರ್ಶನದಿಂದ, ಪರಲೋಕದ ಭೋಗ್ಯವಸ್ತುವಿನ ಶ್ರವಣದಿಂದ.]

**ವಿರಜ್ಯ ವಿಷಯವ್ರಾತಾದ್ದೋಷದೃಷ್ಟ್ಯಾ ಮುಹುರ್ಮುಹುಃ ।**
**ಸ್ವಲಕ್ಷ್ಯೇ ನಿಯತಾವಸ್ಥಾ ಮನಸಃ ಶಮ ಉಚ್ಯತೇ ॥ ೨೨ ॥**

**ಮುಹುರ್ಮುಹುಃ** = ಪುನಃಪುನಃ **ದೋಷದೃಷ್ಟ್ಯಾ** = ದೋಷವನ್ನು ನೋಡುವುದರ ಮೂಲಕ **ವಿಷಯವ್ರಾತಾತ್** = ವಿಷಯಸಮೂಹದಿಂದ **ವಿರಜ್ಯ** = ಬೇರ್ಪಡಿಸಿ **ಸ್ವಲಕ್ಷ್ಯೇ** = ತನ್ನ ಗುರಿಯಲ್ಲಿ **ಮನಸಃ** = ಮನಸ್ಸಿನ **ನಿಯತಾವಸ್ಥಾ** = ನಿಯತವಾದ ಸ್ಥಾಪನೆಯು **ಶಮಃ** = ಶಮವು [ಎಂದು] **ಉಚ್ಯತೇ** = ಹೇಳಲ್ಪಡುತ್ತದೆ.

**೨೨.** ವಿಷಯವಸ್ತುಗಳಲ್ಲಿ ಪುನಃಪುನಃ ದೋಷವನ್ನು ನೋಡುವುದರ ಮೂಲಕ ಅವುಗಳಿಂದ ಮನಸ್ಸನ್ನು ಬೇರ್ಪಡಿಸಿ ತನ್ನ ಗುರಿಯಲ್ಲಿ[೧] ಅದನ್ನು ನಿಯಮದಿಂದ ಸ್ಥಾಪಿಸುವುದೇ ಶಮವು ಎನಿಸುತ್ತದೆ.

[[೧] ಸಗುಣ ಅಥವಾ ನಿರ್ಗುಣ ಬ್ರಹ್ಮ.]

**ವಿಷಯೇಭ್ಯಃ ಪರಾವರ್ತ್ಯ ಸ್ಥಾಪನಂ ಸ್ವಸ್ವಗೋಲಕೇ ।**
**ಉಭಯೇಷಾಮಿಂದ್ರಿಯಾಣಾಂ ಸ ದಮಃ ಪರಿಕೀರ್ತಿತಃ ।**
**ಬಾಹ್ಯಾನಾಲಂಬನಂ ವೃತ್ತೇರೇಷೋಪರತಿರುತ್ತಮಾ ॥ ೨೩ ॥**

**ವಿಷಯೇಭ್ಯಃ** = ವಿಷಯವಸ್ತುಗಳಿಂದ **ಪರಾವರ್ತ್ಯ** – ಹಿಂತಿರುಗಿಸಿ **ಉಭಯೇಷಾಂ ಇಂದ್ರಿಯಾಣಾಂ** = ಎರಡು ಬಗೆಯ ಇಂದ್ರಿಯಗಳನ್ನೂ **ಸ್ವಸ್ವಗೋಲಕೇ** = ತಮ್ಮ ತಮ್ಮ ಗೋಲಕದಲ್ಲಿ **ಸ್ಥಾಪನಂ** = ಸ್ಥಾಪಿಸುವುದು [ಯಾವುದೋ] **ಸಃ** = ಅದೇ **ದಮಃ** = ದಮವೆಂದು **ಪರಿಕೀರ್ತಿತಃ** = ಹೇಳಲ್ಪಟ್ಟಿದೆ. **ವೃತ್ತೇಃ** = ವೃತ್ತಿಯ **ಬಾಹ್ಯ-ಅನಾಲಂಬನಂ** = ಬಾಹ್ಯವಸ್ತುಗಳನ್ನು ಅವಲಂಬಿಸದೆ ಇರುವುದು [ಯಾವುದೋ] **ಏಷಾ** = ಇದೇ **ಉತ್ತಮಾ ಉಪರತಿಃ** = ಉತ್ತಮವಾದ ಉಪರತಿಯು.

**೨೩.** ಎರಡು ಬಗೆಯ ಇಂದ್ರಿಯಗಳನ್ನೂ[೧] ವಿಷಯವಸ್ತುಗಳಿಂದ ಹಿಂತಿರುಗಿಸಿ ತಮ್ಮ ತಮ್ಮ ಗೋಲಕಗಳಲ್ಲಿ[೨] ಸ್ಥಾಪಿಸುವುದೇ ದಮವೆನಿಸುತ್ತದೆ. (ಮನಸ್ಸಿನ) ವೃತ್ತಿಯು[೩] ಹೊರಗಿನ ಯಾವ ವಸ್ತುವನ್ನೂ ಅವಲಂಬಿಸದಿರುವುದೇ ಉತ್ತಮವಾದ ಉಪರತಿ.

[[೧] ಜ್ಞಾನೇಂದ್ರಿಯಗಳನ್ನು ಮತ್ತು ಕರ್ಮೇಂದ್ರಿಯಗಳನ್ನು. ೯೨ನೆಯ ಶ್ಲೋಕವನ್ನು ನೋಡಿ.

[೨] ಕಣ್ಣು ಕಿವಿ ಮೊದಲಾದ ಇಂದ್ರಿಯಸ್ಥಾನಗಳಲ್ಲಿ.

[೩] ಕೆರೆಯೊಳಗಿದ ನೀರು ತೂಬಿನ ಮೂಲಕ ಹೊರಹರಿದು ಹೇಗೆ ಗದ್ದೆಯ ಆಕಾರವನ್ನು ಪಡೆಯುತ್ತದೆಯೊ ಹಾಗೆಯೇ ಅಂತಃಸ್ಥವಾದ ಮನಸ್ಸು ಕಿವಿ ಮೊದಲಾದ ಇಂದ್ರಿಯಗಳ ಮೂಲಕ ಹೊರಬಂದು ಶಬ್ದವೇ ಮೊದಲಾದ ವಿಷಯಗಳ ಆಕಾರವನ್ನು ಪಡೆಯುತ್ತದೆ. ಹೊರಗಿನ ಇಂದ್ರಿಯಗಳು ನಿಗ್ರಹಿಸಲ್ಪಟ್ಟರೆ ಒಳಗಿರುವ ಮನಸ್ಸು ಹೊರಗಿನ ಆಕಾರವನ್ನು ಪಡೆಯುವುದಿಲ್ಲವೆಂಬುದು ಭಾವ.]

**ಸಹನಂ ಸರ್ವದುಃಖಾನಾಮಪ್ರತೀಕಾರಪೂರ್ವಕಮ್ ।**
**ಚಿಂತಾ-ವಿಲಾಪ-ರಹಿತಂ ಸಾ ತಿತಿಕ್ಷಾ ನಿಗದ್ಯತೇ ॥ ೨೪ ॥**

**ಅಪ್ರತೀಕಾರಪೂರ್ವಕಂ** = ಅಪ್ರತೀಕಾರಪೂರ್ವಕವಾದ **ಚಿಂತಾ-ವಿಲಾಪ-ರಹಿತಂ** = ಚಿಂತಾಶೋಕಗಳಿಂದ ರಹಿತವಾದ **ಸರ್ವದುಃಖಾನಾಂ** = ಸಮಸ್ತ ದುಃಖಗಳ **ಸಹನಂ** = ಸಹನೆಯು [ಯಾವುದೋ] **ಸಾ** = ಅದು **ತಿತಿಕ್ಷಾ** = ತಿತಿಕ್ಷೆಯೆಂದು **ನಿಗದ್ಯತೇ** = ಹೇಳಲ್ಪಡುತ್ತದೆ.

**೨೪.** ನಾನಾ ಬಗೆಯಾದ ದುಃಖಗಳು ಸಂಭವಿಸಿದ ಸಮಯದಲ್ಲಿ ಅವುಗಳ ಪರಿಹಾರಕ್ಕೆ ಯಾವುದೊಂದು ಪ್ರತೀಕಾರವನ್ನೂ ಮಾಡದೆ,

ಮನಸ್ಸಿನಲ್ಲಿ ಕೊರಗದೆ ಮತ್ತು ಶೋಕಿಸದೆ ಸಹಿಸಿಕೊಂಡಿರುವುದನ್ನೇ ತಿತಿಕ್ಷೆ ಎಂದು ಹೇಳುತ್ತಾರೆ.

**ಶಾಸ್ತ್ರಸ್ಯ ಗುರುವಾಕ್ಯಸ್ಯ ಸತ್ಯಬುದ್ಧ್ಯವಧಾರಣಮ್ ।**
**ಸಾ ಶ್ರದ್ಧಾ ಕಥಿತಾ ಸದ್ಭಿರ್ಯಯಾ ವಸ್ತೂಪಲಭ್ಯತೇ ॥ ೨೫ ॥**

**ಶಾಸ್ತ್ರಸ್ಯ** = ಶಾಸ್ತ್ರವನ್ನು **ಗುರುವಾಕ್ಯಸ್ಯ** = ಗುರುವಾಕ್ಯವನ್ನು **ಸತ್ಯಬುದ್ಧ್ಯವಧಾರಣಂ** = ಸತ್ಯವೆಂಬ ಬುದ್ಧಿಯಿಂದ ನಿಶ್ಚಯಿಸುವುದು [ಯಾವುದೋ], **ಯಯಾ** = ಯಾವುದರಿಂದ **ವಸ್ತು** = ಬ್ರಹ್ಮವಸ್ತುವು **ಉಪಲಭ್ಯತೇ** = ಹೊಂದಲ್ಪಡುತ್ತದೆಯೋ **ಸಾ** = ಅದು **ಶ್ರದ್ಧಾ** = ಶ್ರದ್ಧೆಯೆಂದು **ಸದ್ಭಿಃ** = ಸಾಧುಗಳಿಂದ **ಕಥಿತಾ** = ಹೇಳಲ್ಪಟ್ಟಿದೆ.

**೨೫.** ಶಾಸ್ತ್ರ ಮತ್ತು ಗುರು ಉಪದೇಶಿಸುವ ವೇದಾಂತವಾಕ್ಯ—ಇವು ಸತ್ಯವೆಂಬ ಬುದ್ಧಿಯಿಂದ ಮನಸ್ಸಿನಲ್ಲಿ ನಿರ್ಧರಿಸಿಕೊಳ್ಳುವುದು ಶ್ರದ್ಧೆ[೧] ಎಂದು ಸಾಧುಗಳು ಹೇಳುತ್ತಾರೆ. ಇದು ಬ್ರಹ್ಮಸಾಕ್ಷಾತ್ಕಾರಕ್ಕೆ ಸಾಧನವಾಗಿರುವುದು.

[[೧] ಇದು ಅಂಧಶ್ರದ್ಧೆಯಲ್ಲ, ದೃಢವಾದ **ವಿಶ್ವಾಸ**. ಇಂಥ ದೃಢವಿಶ್ವಾಸವಿಲ್ಲದೆ ಶಾಸ್ತ್ರಾಚಾರ್ಯರ ಉಪದೇಶವನ್ನು ಅನುಷ್ಠಿಸಲು ಸಾಧ್ಯವಾಗುವುದಿಲ್ಲ. 'ಈ ಧರ್ಮದಲ್ಲಿ ಶ್ರದ್ಧೆಯಿಲ್ಲದಿರುವ ಮನುಷ್ಯರು ನನ್ನನ್ನು ಹೊಂದದೆ ಮೃತ್ಯುಸಂಸಾರದ ಮಾರ್ಗಕ್ಕೆ ಹಿಂತಿರುಗುತ್ತಾರೆ' **ಅಶ್ರದ್ದಧಾನಾಃ ಪುರುಷಾ ಧರ್ಮಸ್ಯಾಸ್ಯ ಪರಂತಪ । ಅಪ್ರಾಪ್ಯ ಮಾಂ ನಿವರ್ತಂತೇ ಮೃತ್ಯುಸಂಸಾರವರ್ತ್ಮನಿ ॥** ಎಂದು ಗೀತೆಯಲ್ಲಿ (೯. ೩.) ಹೇಳಿದೆ.]

**ಸಮ್ಯಗಾಸ್ಥಾಪನಂ ಬುದ್ಧೇಃ ಶುದ್ಧೇ ಬ್ರಹ್ಮಣಿ ಸರ್ವದಾ ।**
**ತತ್ ಸಮಾಧಾನಮಿತ್ಯುಕ್ತಂ ನ ತು ಚಿತ್ತಸ್ಯ ಲಾಲನಮ್ ॥ ೨೬ ॥**

**ಶುದ್ಧೇ ಬ್ರಹ್ಮಣಿ** = ಶುದ್ಧಬ್ರಹ್ಮದಲ್ಲಿ **ಸರ್ವದಾ** = ಯಾವಾಗಲೂ **ಬುದ್ಧೇಃ** = ಬುದ್ಧಿಯನ್ನು **ಸಮ್ಯಕ್ ಆಸ್ಥಾಪನಂ** = ಚೆನ್ನಾಗಿ ನೆಲೆಗೊಳಿಸುವುದು [ಯಾವುದೋ] **ತತ್** = ಅದು **ಸಮಾಧಾನಂ ಇತಿ** = ಸಮಾಧಾನವೆಂದು **ಉಕ್ತಂ** = ಹೇಳಲ್ಪಟ್ಟಿದೆ; **ಚಿತ್ತಸ್ಯ** = ಮನಸ್ಸಿನ **ಲಾಲನಂ** = ಲಾಲನೆಯು **ನ ತು** = ಅಲ್ಲ.

**೨೬.** ಶುದ್ಧಬ್ರಹ್ಮದಲ್ಲಿ ಬುದ್ಧಿಯನ್ನು ಯಾವಾಗಲೂ ಚೆನ್ನಾಗಿ ಸ್ಥಿರಗೊಳಿಸುವುದೇ ಸಮಾಧಾನವೆಂದು ಹೇಳಲ್ಪಟ್ಟಿದೆ;[೧] ಮನಸ್ಸಿನ ಲಾಲನೆಯು[೨] ಸಮಾಧಾನವಲ್ಲ.

[[೧] 'ಚಂಚಲವೂ ಅಸ್ಥಿರವೂ ಆದ ಮನಸ್ಸು ಯಾವ ಯಾವ ವಿಷಯದಿಂದ ಹೊರಕ್ಕೆ ಬರುವುದೊ ಆಯಾ ವಿಷಯದಿಂದ ಮನಸ್ಸನ್ನು ನಿಗ್ರಹಿಸಿ ಆತ್ಮನಲ್ಲಿಯೇ

ವಶಪಡಿಸಿಕೊಳ್ಳಬೇಕು' **ಯತೋ ಯತೋ ನಿಶ್ಚರತಿ ಮನಶ್ಚಂಚಲಮಸ್ಥಿರಮ್ । ತತಸ್ತತೋ ನಿಯಮ್ಯೈತದಾತ್ಮನ್ಯೇವ ವಶಂ ನಯೇತ್ ॥** ಎಂದು ಗೀತೆಯಲ್ಲಿ (೬. ೨೬) ಹೇಳಿರುವಂತೆ ಶಮಾವಸ್ಥೆಯಲ್ಲಿಯೇ ಸಂಕಲ್ಪ-ವಿಕಲ್ಪಾತ್ಮಕವಾದ ಮನಸ್ಸನ್ನು ಬ್ರಹ್ಮದಲ್ಲಿ ಸ್ಥಿರಗೊಳಿಸಲು ವಿಶೇಷವಾಗಿ ಪ್ರಯತ್ನಪಡಬೇಕು.

೨ ಮನಸ್ಸು ಬಯಸಿದ ವಸ್ತುಗಳನ್ನು ಲಾಲನೆಮಾಡುವುದು ಸಮಾಧಾನವಲ್ಲ.]

**ಅಹಂಕಾರಾದಿ-ದೇಹಾಂತಾನ್ ಬಂಧಾನಜ್ಞಾನಕಲ್ಪಿತಾನ್ ।**
**ಸ್ವಸ್ವರೂಪಾವಬೋಧೇನ ಮೋಕ್ತುಮಿಚ್ಛಾ ಮುಮುಕ್ಷುತಾ ॥ ೨೭ ॥**

**ಅಜ್ಞಾನಕಲ್ಪಿತಾನ್** = ಅಜ್ಞಾನದಿಂದ ಕಲ್ಪಿತವಾದ **ಅಹಂಕಾರಾದಿ-ದೇಹಾಂತಾನ್** = ಅಹಂಕಾರದಿಂದ ಪ್ರಾರಂಭಿಸಿ ಶರೀರದ ವರೆಗಿರುವ **ಬಂಧಾನ್** = ಬಂಧಗಳನ್ನು **ಸ್ವಸ್ವರೂಪಾವಬೋಧೇನ** = ತನ್ನ ನಿಜವಾದ ಆತ್ಮಸ್ವರೂಪದ ಜ್ಞಾನದಿಂದ **ಮೋಕ್ತುಂ** = ಬಿಡಿಸಿಕೊಳ್ಳುವುದಕ್ಕೆ **ಇಚ್ಛಾ** = ಇಚ್ಛೆಯು **ಮುಮುಕ್ಷುತಾ** = ಮುಮುಕ್ಷುತ್ವವು.

**೨೭.** ಅಹಂಕಾರದಿಂದ ಪ್ರಾರಂಭಿಸಿ ತನ್ನ ಶರೀರದ ವರೆಗಿರುವ ಅಜ್ಞಾನದಿಂದ ಕಲ್ಪಿತವಾದ ಕಟ್ಟುಗಳನ್ನು ತನ್ನ ನಿಜವಾದ ಆತ್ಮಸ್ವರೂಪದ ಜ್ಞಾನದಿಂದ[೧] ಬಿಡಿಸಿಕೊಳ್ಳಬೇಕೆಂಬ ಇಚ್ಛೆಯು ಮುಮುಕ್ಷುತ್ವವೆನಿಸುತ್ತದೆ.

[೧ ಎಲ್ಲವೂ ಆತ್ಮನೇ ಆಗಿರುವಾಗ ಆತ್ಮನಿಗಿಂತ ಭಿನ್ನವಾಗಿ ಕಂಡುಬರುವ ಯಾವ ವಸ್ತುವನ್ನೂ ಬಯಸದಿರುವುದರಿಂದ ಬಂಧನಿವೃತ್ತಿಯು ಆತ್ಯಂತಿಕವು ಎಂದರ್ಥ.]

**ಮಂದ-ಮಧ್ಯಮ-ರೂಪಾಽಪಿ ವೈರಾಗ್ಯೇಣ ಶಮಾದಿನಾ ।**
**ಪ್ರಸಾದೇನ ಗುರೋಸ್ಸೇಯಂ ಪ್ರವೃದ್ಧಾ ಸೂಯತೇ ಫಲಮ್ ॥ ೨೮ ॥**

**ಸಾ ಇಯಂ** = ಆ ಈ [ಮುಮುಕ್ಷುತ್ವವು] **ಮಂದ-ಮಧ್ಯಮ-ರೂಪಾ ಅಪಿ** = ಮಂದ-ಮಧ್ಯಮ-ಸ್ಥಿತಿಯಲ್ಲಿದ್ದರೂ **ವೈರಾಗ್ಯೇಣ** = ವೈರಾಗ್ಯದಿಂದಲೂ **ಶಮಾದಿನಾ** = ಶಮದಮಾದಿ ಸಾಧನದಿಂದಲೂ **ಗುರೋಃ** = ಗುರುವಿನ **ಪ್ರಸಾದೇನ** = ಅನುಗ್ರಹದಿಂದಲೂ **ಪ್ರವೃದ್ಧಾ** = ಪ್ರಬಲವಾಗಿ **ಫಲಂ** = ಫಲವನ್ನು **ಸೂಯತೇ** = ಉಂಟುಮಾಡುತ್ತದೆ.

**೨೮.** ಆ ಈ ಮುಮುಕ್ಷುತ್ವವು ಮಂದ-ಮಧ್ಯಮ-ಸ್ಥಿತಿಯಲ್ಲಿದ್ದರೂ ವೈರಾಗ್ಯದಿಂದಲೂ ಶಮದಮಾದಿ ಸಾಧನದಿಂದಲೂ ಗುರುವಿನ ಅನುಗ್ರಹದಿಂದಲೂ ಪ್ರಬಲವಾಗಿ (ಮೋಕ್ಷರೂಪವಾದ) ಫಲವನ್ನು ಉಂಟುಮಾಡುತ್ತದೆ.

**ವೈರಾಗ್ಯಂ ಚ ಮುಮುಕ್ಷುತ್ವಂ ತೀವ್ರಂ ಯಸ್ಯ ತು ವಿದ್ಯತೇ ।**
**ತಸ್ಮಿನ್ನೇವಾರ್ಥವಂತಃ ಸ್ಯುಃ ಫಲವಂತಃ ಶಮಾದಯಃ ॥ ೨೯ ॥**

**ತು** = ಆದರೆ **ಯಸ್ಯ** = ಯಾವನಿಗೆ **ವೈರಾಗ್ಯಂ** = ವೈರಾಗ್ಯವು **ಮುಮುಕ್ಷುತ್ವಂ ಚ** = ಮತ್ತು ಮುಮುಕ್ಷುತ್ವವು **ತೀವ್ರಂ ವಿದ್ಯತೇ** = ತೀವ್ರವಾಗಿದೆಯೋ **ತಸ್ಮಿನ್ ಏವ** = ಅವನಲ್ಲಿಯೇ **ಶಮಾದಯಃ** = ಶಮಾದಿಗಳು **ಅರ್ಥವಂತಃ** = ಅರ್ಥವುಳ್ಳವೂ **ಫಲವಂತಃ** = ಫಲವುಳ್ಳವೂ **ಸ್ಯುಃ** = ಆಗುವುವು.

**೨೯.** ಆದರೆ ಯಾವನಲ್ಲಿ ವೈರಾಗ್ಯವು ಮತ್ತು ಮುಮುಕ್ಷುತ್ವವು ತೀವ್ರವಾಗಿರುವುವೊ ಅವನಲ್ಲಿಯೇ ಶಮ-ದಮಾದಿಗಳು ಸಾರ್ಥಕವೂ ಸಫಲವೂ ಆಗುವುವು.

**ಏತಯೋರ್ಮಂದತಾ ಯತ್ರ ವಿರಕ್ತತ್ವ-ಮುಮುಕ್ಷಯೋಃ ।**
**ಮರೌ ಸಲಿಲವತ್ತತ್ರ ಶಮಾದೇರ್ಭಾನಮಾತ್ರತಾ ॥ ೩೦ ॥**

**ಯತ್ರ** = ಯಾವನಲ್ಲಿ **ಏತಯೋಃ ವಿರಕ್ತತ್ವ-ಮುಮುಕ್ಷಯೋಃ** = ಈ ವೈರಾಗ್ಯ-ಮುಮುಕ್ಷುತ್ವಗಳು **ಮಂದತಾ** = ಮಂದವಾಗಿವೆಯೋ, **ಮರೌ** = ಮರುಭೂಮಿಯಲ್ಲಿ **ಸಲಿಲವತ್** = ನೀರಿರುವಂತೆ, **ತತ್ರ** = ಅವನಲ್ಲಿ **ಶಮಾದೇಃ** = ಶಮಾದಿಗಳ **ಭಾನಮಾತ್ರತಾ** = ತೋರ್ಕೆಯು ಮಾತ್ರ [ಇರುತ್ತದೆ].

**೩೦.** ಯಾವನಲ್ಲಿ ಈ ವೈರಾಗ್ಯ-ಮುಮುಕ್ಷುತ್ವಗಳು ಮಂದವಾಗಿವೆಯೋ ಅವನಲ್ಲಿ—ಮರುಭೂಮಿಯಲ್ಲಿ ನೀರು ತೋರುವಂತೆ—ಶಮಾದಿಗಳ ತೋರ್ಕೆಯು ಮಾತ್ರ ಇರುತ್ತದೆ.[೧]

[೧ ಶಮಾದಿಗಳ ಫಲವುಂಟಾಗುವುದಿಲ್ಲ ಎಂದರ್ಥ.]

**ಮೋಕ್ಷಕಾರಣ-ಸಾಮಗ್ರ್ಯಾಂ ಭಕ್ತಿರೇವ ಗರೀಯಸೀ ।**
**ಸ್ವಸ್ವರೂಪಾನುಸಂಧಾನಂ ಭಕ್ತಿರಿತ್ಯಭಿಧೀಯತೇ ॥ ೩೧ ॥**

**ಮೋಕ್ಷಕಾರಣ-ಸಾಮಗ್ರ್ಯಾಂ** = ಮೋಕ್ಷಕ್ಕೆ ಸಹಾಯಕವಾಗಿರುವ ಸಲಕರಣೆಗಳಲ್ಲಿ **ಭಕ್ತಿಃ ಏವ** = ಭಕ್ತಿಯೇ **ಗರೀಯಸೀ** = ಶ್ರೇಷ್ಠವಾದುದು; **ಸ್ವಸ್ವರೂಪ-ಅನುಸಂಧಾನಂ** = ತನ್ನ ನಿಜವಾದ ಆತ್ಮಸ್ವರೂಪದ ಅನುಸಂಧಾನವು **ಭಕ್ತಿಃ ಇತಿ** = ಭಕ್ತಿಯೆಂದು **ಅಭಿಧೀಯತೇ** = ಹೇಳಲ್ಪಡುತ್ತದೆ.

**೩೧.** ಮೋಕ್ಷಕ್ಕೆ ಸಹಾಯಕವಾಗಿರುವ ಸಲಕರಣೆಗಳಲ್ಲಿ ಭಕ್ತಿಯೇ ಶ್ರೇಷ್ಠವಾದುದು. ತನ್ನ ನಿಜವಾದ ಆತ್ಮಸ್ವರೂಪದ ಅನುಸಂಧಾನವೇ ಭಕ್ತಿಯೆನಿಸುವುದು.

[ಇಲ್ಲಿ ಅದ್ವೈತದೃಷ್ಟಿಯ ಪ್ರಕಾರ ಭಕ್ತಿಯ ಲಕ್ಷಣವನ್ನು ಹೇಳಿದೆ.]

**ಸ್ವಾತ್ಮತತ್ತ್ವಾನುಸಂಧಾನಂ ಭಕ್ತಿರಿತ್ಯಪರೇ ಜಗುಃ ।**
**ಉಕ್ತಸಾಧನಸಂಪನ್ನಸ್ತತ್ತ್ವಜಿಜ್ಞಾಸುರಾತ್ಮನಃ ।**
**ಉಪಸೀದೇದ್ಗುರುಂ ಪ್ರಾಜ್ಞಂ ಯಸ್ಮಾದ್ಬಂಧ-**
**ವಿಮೋಕ್ಷಣಮ್ ॥ ೩೨ ॥**

**ಅಪರೇ** = ಕೆಲವರು **ಸ್ವಾತ್ಮ-ತತ್ತ್ವ-ಅನುಸಂಧಾನಂ** = ತನ್ನ ಆತ್ಮತತ್ತ್ವದ ಅನುಸಂಧಾನವೇ **ಭಕ್ತಿಃ ಇತಿ**=ಭಕ್ತಿಯೆಂದು **ಜಗುಃ** = ಹೇಳಿದರು; **ಉಕ್ತಸಾಧನ-ಸಂಪನ್ನಃ** = ಹಿಂದೆ ಹೇಳಿದ ಸಾಧನಗಳಿಂದ ಕೂಡಿದವನೂ, **ಆತ್ಮನಃ** = ಆತ್ಮನ **ತತ್ತ್ವಜಿಜ್ಞಾಸುಃ** = ತತ್ತ್ವವನ್ನು ತಿಳಿಯಲು ಬಯಸುವವನೂ **ಯಸ್ಮಾತ್** = ಯಾವನಿಂದ **ಬಂಧವಿಮೋಕ್ಷಣಂ** = ಬಂಧದ ಮೋಕ್ಷವು [ಆಗುತ್ತದೆಯೋ] **ತಂ ಪ್ರಾಜ್ಞಂ ಗುರುಂ** = ಅಂಥ ಜ್ಞಾನಿಯಾದ ಗುರುವನ್ನು **ಉಪಸೀದೇತ್** = ಬಳಿಸಾರಬೇಕು.

**೩೨.** ಕೆಲವರು ತಮ್ಮ ಆತ್ಮನ ನಿಜಸ್ವರೂಪದ ಅನುಸಂಧಾನವೇ ಭಕ್ತಿಯೆಂದು ಹೇಳುತ್ತಾರೆ. (ಹೀಗೆ) ಹಿಂದೆ ಹೇಳಿದ ವಿವೇಕಾದಿ-ಸಾಧನಗಳಿಂದ ಸಂಪನ್ನನಾದವನೂ ಆತ್ಮತತ್ತ್ವವನ್ನು ತಿಳಿಯಲು ಬಯಸುವವನೂ ಆದ ಮುಮುಕ್ಷುವು, ಯಾವನಿಂದ ಸಂಸಾರವೆಂಬ ಬಂಧದ ಬಿಡುಗಡೆಯು ಉಂಟಾಗುತ್ತದೆಯೋ ಅಂಥ ಜ್ಞಾನಿಯಾದ ಗುರುವನ್ನು ಬಳಿಸಾರಬೇಕು.

[೩೧ನೆಯ ಶ್ಲೋಕದ ಸ್ವಸ್ವರೂಪಾನುಸಂಧಾನಕ್ಕೂ ಇಲ್ಲಿ ಹೇಳಿರುವ ಸ್ವಾತ್ಮಾನುಸಂಧಾನಕ್ಕೂ ಹೆಚ್ಚು ಭೇದವು ಕಂಡುಬರುವುದಿಲ್ಲ. ೮ನೆಯ ಶ್ಲೋಕದ ಟಿಪ್ಪಣಿಗಳನ್ನು ನೋಡಿ.]

**ಶ್ರೋತ್ರಿಯೋಽವೃಜಿನೋಽಕಾಮಹತೋ ಯೋ ಬ್ರಹ್ಮವಿತ್ತಮಃ ।**
**ಬ್ರಹ್ಮಣ್ಯುಪರತಃ ಶಾಂತೋ ನಿರಿಂಧನ ಇವಾನಲಃ ।**
**ಅಹೇತುಕ-ದಯಾಸಿಂಧುರ್ಬಂಧುರಾನಮತಾಂ ಸತಾಮ್ ॥ ೩೩ ॥**

**ಯಃ** = ಯಾವನು **ಶ್ರೋತ್ರಿಯಃ** = ಶ್ರೋತ್ರಿಯನೊ, **ಅವೃಜಿನಃ** = ಪಾಪರಹಿತನೊ, **ಅಕಾಮಹತಃ** = ಕಾಮವಿಲ್ಲದವನೊ, **ಬ್ರಹ್ಮವಿತ್ತಮಃ** = ಬ್ರಹ್ಮವಿದರಲ್ಲಿ ಶ್ರೇಷ್ಠನೊ, **ಬ್ರಹ್ಮಣಿ**=ಬ್ರಹ್ಮದಲ್ಲಿ **ಉಪರತಃ**=ನೆಲಸಿರುವನೊ, **ನಿರಿಂಧನಃ ಅನಲಃ ಇವ** = ಕಟ್ಟಿಗೆಯನ್ನು ಸುಟ್ಟಿರುವ ಬೆಂಕಿಯಂತೆ **ಶಾಂತಃ** = ಶಾಂತನೊ **ಅಹೇತುಕ-ದಯಾಸಿಂಧುಃ** = ಯಾವ ನಿಮಿತ್ತವಿಲ್ಲದೆ ದಯಾಸಿಂಧುವೊ **ಆನಮತಾಂ ಸತಾಂ** = ನಮಿಸುತ್ತಿರುವ ಸಾಧುಗಳಿಗೆ **ಬಂಧುಃ** = ಬಾಂಧವನೊ—

**೩೩.** ಯಾವನು ಶ್ರೋತ್ರಿಯನೊ ಪಾಪರಹಿತನೊ ಕಾಮವಿಲ್ಲದವನೊ ಬ್ರಹ್ಮವಿದರಲ್ಲಿ ಶ್ರೇಷ್ಠನೊ ಬ್ರಹ್ಮದಲ್ಲಿ ನೆಲಸಿರುವನೊ ಕಟ್ಟಿಗೆಯನ್ನೆಲ್ಲ

ಸುಟ್ಟಿರುವ ಬೆಂಕಿಯಂತೆ ಶಾಂತನೊ[2] ಯಾವ ಪ್ರತಿಫಲವನ್ನೂ ಬಯಸದೆ ದಯಾಸಿಂಧುವಾಗಿರುವನೊ ನಮಿಸಿದ ಸಾಧುಗಳಿಗೆ ಬಂಧುವೊ—

[[1]ಬೃಹದಾರಣ್ಯಕೋಪನಿಷತ್ತು (೪. ೩. ೩೩) **ಯಶ್ಚ ಶ್ರೋತ್ರಿಯೋಽವೃಜಿನೋಽಕಾಮಹತಃ** ಎಂದು ಶ್ರೋತ್ರಿಯನ ಗುಣವನ್ನು ವಿವರಿಸುತ್ತದೆ.

[2]ಶ್ವೇತಾಶ್ವತರೋಪನಿಷತ್ತು (೬, ೧೯) **ದಗ್ಧೇಂಧನಮಿವಾನಲಮ್** ಎಂದು ಈಶ್ವರನ ಲಕ್ಷಣವನ್ನು ಹೇಳುತ್ತದೆ.]

**ತಮಾರಾಧ್ಯ ಗುರುಂ ಭಕ್ತ್ಯಾ ಪ್ರಹ್ವ-ಪ್ರಶ್ರಯ-ಸೇವನೈಃ ।**
**ಪ್ರಸನ್ನಂ ತಮನುಪ್ರಾಪ್ಯ ಪೃಚ್ಛೇಜ್ಜ್ಞಾತವ್ಯಮಾತ್ಮನಃ ॥ ೩೪ ॥**

ತಂ **ಗುರುಂ** = ಅಂಥ ಗುರುವನ್ನು **ಭಕ್ತ್ಯಾ** = ಭಕ್ತಿಯಿಂದ **ಆರಾಧ್ಯ** = ಆರಾಧಿಸಿ **ಪ್ರಹ್ವ-ಪ್ರಶ್ರಯ-ಸೇವನೈಃ** = ನಮ್ರತೆ-ವಿನಯ-ಸೇವೆಗಳಿಂದ **ಪ್ರಸನ್ನಂ ತಂ** = ಪ್ರಸನ್ನನಾದ ಅವನನ್ನು **ಅನುಪ್ರಾಪ್ಯ** = ಹೊಂದಿ **ಆತ್ಮನಃ ಜ್ಞಾತವ್ಯಂ** = ತನಗೆ ತಿಳಿಯಬೇಕಾದುದನ್ನು **ಪೃಚ್ಛೇತ್** = ಪ್ರಶ್ನಿಸಬೇಕು.

**೩೪.** ಅಂಥ ಗುರುವನ್ನು ಭಕ್ತಿಯಿಂದ ಆರಾಧಿಸಿ, ನಮ್ರತೆ ವಿನಯ ಸೇವೆ ಇವುಗಳಿಂದ ಪ್ರಸನ್ನನಾದ ಅವನನ್ನು ಬಳಿಸಾರಿ ತಾನು ತಿಳಿಯಬೇಕೆಂದಿರುವುದನ್ನು ಕುರಿತು ಪ್ರಶ್ನಿಸಬೇಕು.

**ಸ್ವಾಮಿನ್ನಮಸ್ತೇ ನತಲೋಕಬಂಧೋ**
**ಕಾರುಣ್ಯಸಿಂಧೋ ಪತಿತಂ ಭವಾಬ್ಧೌ ।**
**ಮಾಮುದ್ಧರಾತ್ಮೀಯ-ಕಟಾಕ್ಷದೃಷ್ಟ್ಯಾ**
**ಋಜ್ವ್ಯಾತಿಕಾರುಣ್ಯ-ಸುಧಾಭಿವೃಷ್ಟ್ಯಾ ॥ ೩೫ ॥**

**ನತಲೋಕಬಂಧೋ** = ನಮಿಸುತ್ತಿರುವ ಜನರ ಬಂಧುವೆ, **ಕಾರುಣ್ಯಸಿಂಧೋ** = ಕರುಣಾಸಿಂಧುವೆ, **ಸ್ವಾಮಿನ್** = ಸ್ವಾಮಿಯೆ, **ತೇ** = ನಿನಗೆ **ನಮಃ** = ನಮಸ್ಕಾರ; **ಭವಾಬ್ಧೌ** = ಸಂಸಾರಸಾಗರದಲ್ಲಿ **ಪತಿತಂ** = ಬಿದ್ದಿರುವ **ಮಾಂ** = ನನ್ನನ್ನು **ಋಜ್ವ್ಯಾ** = ಸರಳವಾದ **ಅತಿಕಾರುಣ್ಯ-ಸುಧಾಭಿವೃಷ್ಟ್ಯಾ** = ಕರುಣಾಮೃತವನ್ನು ವರ್ಷಿಸುತ್ತಿರುವ **ಆತ್ಮೀಯ-ಕಟಾಕ್ಷ-ದೃಷ್ಟ್ಯಾ** = ನಿನ್ನ ಕಟಾಕ್ಷದೃಷ್ಟಿಯಿಂದ **ಉದ್ಧರ** = ಉದ್ಧರಿಸು.

**೩೫.** ನಮಿಸುತ್ತಿರುವ ಜನರ ಬಂಧುವೆ, ಕರುಣಾಸಾಗರನೆ, ಸ್ವಾಮಿನ್, ನಿನಗೆ ನಮಸ್ಕಾರ! ಸಂಸಾರಸಾಗರದಲ್ಲಿ ಬಿದ್ದಿರುವ ನನ್ನನ್ನು ಕರುಣಾಮೃತವನ್ನು ವರ್ಷಿಸುತ್ತಿರುವ ನಿನ್ನ ಸರಳವಾದ ಕಟಾಕ್ಷದೃಷ್ಟಿಯಿಂದ ಉದ್ಧರಿಸು.

[೨೫ನೆಯ ಶ್ಲೋಕದಿಂದ ೪೦ರ ವರೆಗೆ ಶಿಷ್ಯನ ಪ್ರಶ್ನೆಗಳು.]

**ದುರ್ವಾರ-ಸಂಸಾರ-ದವಾಗ್ನಿತಪ್ತಂ**
**ದೋಧೂಯಮಾನಂ ದುರದೃಷ್ಟವಾತೈಃ ।**
**ಭೀತಂ ಪ್ರಪನ್ನಂ ಪರಿಪಾಹಿ ಮೃತ್ಯೋಃ**
**ಶರಣ್ಯಮನ್ಯಂ ಯದಹಂ ನ ಜಾನೇ ॥ ೩೬ ॥**

**ಯತ್** = ಯಾವ ಕಾರಣದಿಂದ **ಅಹಂ** = ನಾನು **ಅನ್ಯಂ ಶರಣ್ಯಂ** = ಬೇರೆ ರಕ್ಷಕನನ್ನು **ನ ಜಾನೇ** = ಅರಿಯೆನೊ [ಆದುದರಿಂದಲೇ] **ದುರ್ವಾರ-ಸಂಸಾರ-ದವಾಗ್ನಿತಪ್ತಂ** = ಪರಿಹರಿಸಲಶಕ್ಯವಾದ ಸಂಸಾರವೆಂಬ ಕಾಡ್ಗಿಚ್ಚಿನಿಂದ ಬೆಂದಿರುವ **ದುರದೃಷ್ಟವಾತೈಃ** = ದುರದೃಷ್ಟವೆಂಬ ಬಿರುಗಾಳಿಗಳಿಂದ **ದೋಧೂಯಮಾನಂ** = ಕಂಪಿಸುತ್ತಿರುವ **ಭೀತಂ** = ಭೀತನಾದ **ಪ್ರಪನ್ನಂ** = ಶರಣಾಗತನಾದ [ನನ್ನನ್ನು] **ಮೃತ್ಯೋಃ** = ಮೃತ್ಯುವಿನಿಂದ **ಪರಿಪಾಹಿ** = ಕಾಪಾಡು.

**೩೬.** ಪರಿಹರಿಸಲಶಕ್ಯವಾದ ಸಂಸಾರವೆಂಬ ಕಾಡ್ಗಿಚ್ಚಿನಿಂದ ಬೆಂದು, ದುರದೃಷ್ಟವೆಂಬ ಬಿರುಗಾಳಿಗಳಿಂದ ಕಂಪಿಸುತ್ತ, ಭಯಗೊಂಡು, ನಿನ್ನಲ್ಲಿಯೇ ಶರಣಾಗತನಾಗಿರುವ ನನ್ನನ್ನು ಸಂಸಾರವೆಂಬ ಮೃತ್ಯುವಿನಿಂದ ಕಾಪಾಡು; ಏಕೆಂದರೆ ಬೇರೊಬ್ಬ ರಕ್ಷಕನನ್ನು ನಾನು ಅರಿಯೆನು.

**ಶಾಂತಾ ಮಹಾಂತೋ ನಿವಸಂತಿ ಸಂತೋ**
**ವಸಂತವಲ್ಲೋಕಹಿತಂ ಚರಂತಃ ।**
**ತೀರ್ಣಾಃ ಸ್ವಯಂ ಭೀಮಭವಾರ್ಣವಂ ಜನಾ-**
**ನಹೇತುನಾನ್ಯಾನಪಿ ತಾರಯಂತಃ ॥ ೩೭ ॥**

**ಭೀಮಭವಾರ್ಣವಂ** = ಭಯಂಕರವಾದ ಸಂಸಾರಸಾಗರವನ್ನು **ಸ್ವಯಂ** = ತಾವೇ **ತೀರ್ಣಾಃ** = ದಾಟಿರುವವರೂ **ಅಹೇತುನಾ** = ನಿಮಿತ್ತವಿಲ್ಲದೆ **ಅನ್ಯಾನ್ ಜನಾನ್ ಅಪಿ** = ಇತರ ಜನರನ್ನೂ **ತಾರಯಂತಃ** = ದಾಟಿಸುವವರೂ **ಶಾಂತಾಃ** = ಶಾಂತರೂ **ಮಹಾಂತಃ** = ಮಹನೀಯರೂ [ಆದ] **ಸಂತಃ** = ಸತ್ಪುರುಷರು **ವಸಂತವತ್** = ವಸಂತಋತುವಿನಂತೆ **ಲೋಕಹಿತಂ** = ಲೋಕಕಲ್ಯಾಣವನ್ನು **ಚರಂತಃ** = ಮಾಡುತ್ತಾ **ನಿವಸಂತಿ** = ಇರುತ್ತಾರೆ.

**೩೭.** ಭಯಂಕರವಾದ ಸಂಸಾರಸಾಗರವನ್ನು ತಾವು ದಾಟಿ,[೧] ಯಾವ ನಿಮಿತ್ತವೂ ಇಲ್ಲದೆ ಇತರ ಜನರನ್ನು ದಾಟಿಸುವ ಶಾಂತರೂ ಮಹನೀಯರೂ ಆದ ಸತ್ಪುರುಷರು ವಸಂತಋತುವಿನಂತೆ ಲೋಕಕಲ್ಯಾಣವನ್ನು ಮಾಡುತ್ತಾ ಇರುತ್ತಾರೆ.

[[೧] ಕುರುಡನಾದವನು ಇತರರಿಗೆ ದಾರಿಯನ್ನು ತೋರಿಸಲಾರನು. ಸಂಸಾರವನ್ನು ದಾಟಿದವರೇ ಇತರರನ್ನು ದಾಟಿಸಲು ಶಕ್ತರಾಗುವರು.]

**ಅಯಂ ಸ್ವಭಾವಃ ಸ್ವತ ಏವ ಯತ್ಪರ-**
**ಶ್ರಮಾಪನೋದ-ಪ್ರವಣಂ ಮಹಾತ್ಮನಾಮ್ ।**
**ಸುಧಾಂಶುರೇಷ ಸ್ವಯಮರ್ಕ-ಕರ್ಕಶ-**
**ಪ್ರಭಾಭಿತಪ್ತಾಮವತಿ ಕ್ಷಿತಿಂ ಕಿಲ ॥ ೩೮ ॥**

**ಸ್ವತಃ ಏವ** = ತಾವಾಗಿಯೇ **ಪರಶ್ರಮಾಪನೋದ-ಪ್ರವಣಂ ಯತ್** = ಇತರರ ಶ್ರಮಪರಿಹಾರದಲ್ಲಿ ಪ್ರವೃತ್ತಿಯು ಯಾವುದೊ **ಅಯಂ** = ಇದು **ಮಹಾತ್ಮನಾಂ** = ಮಹಾತ್ಮರ **ಸ್ವಭಾವಃ** = ಸ್ವಭಾವವು; **ಅರ್ಕ-ಕರ್ಕಶಪ್ರಭಾ-ಅಭಿತಪ್ತಾಂ** = ಸೂರ್ಯನ ತೀಕ್ಷ್ಣವಾದ ಬಿಸಿಲಿನಿಂದ ಬೆಂದಿರುವ **ಕ್ಷಿತಿಂ** = ಭೂಮಿಯನ್ನು **ಏಷಃ ಸುಧಾಂಶುಃ** = ಈ ಚಂದ್ರನು **ಸ್ವಯಂ** = ತಾನಾಗಿಯೇ **ಅವತಿ ಕಿಲ** = ರಕ್ಷಿಸುವ ನಲ್ಲವೆ?

**೩೮.** ಇತರರ ಶ್ರಮವನ್ನು ಪರಿಹರಿಸುವುದರಲ್ಲಿ ತಾವಾಗಿಯೇ ಪ್ರವರ್ತಿಸುವುದು ಮಹಾತ್ಮರ ಸ್ವಭಾವವು. ಸೂರ್ಯನ ತೀಕ್ಷ್ಣವಾದ ಬಿಸಿಲಿನಿಂದ ಬೆಂದಿರುವ ಭೂಮಿಯನ್ನು ಈ ಚಂದ್ರನು ತಾನಾಗಿಯೇ ರಕ್ಷಿಸುತ್ತಾನಲ್ಲವೆ?

**ಬ್ರಹ್ಮಾನಂದ-ರಸಾನುಭೂತಿ-ಕಲಿತೈಃ ಪೂತೈಃ ಸುಶೀತೈರ್ಹಿತೈ-**
**ರ್ಯುಷ್ಮದ್-ವಾಕ್ಕಲಶೋಜ್ಝಿತೈಃ ಶ್ರುತಿಸುಖೈರ್ವಾಕ್ಯಾಮೃತೈಃ ಸೇಚಯ ।**
**ಸಂತಪ್ತಂ ಭವತಾಪ-ದಾವದಹನ-ಜ್ವಾಲಾಭಿರೇನಂ ಪ್ರಭೋ**
**ಧನ್ಯಾಸ್ತೇ ಭವದೀಕ್ಷಣ-ಕ್ಷಣಗತೇಃ ಪಾತ್ರೀಕೃತಾಃ ಸ್ವೀಕೃತಾಃ ॥ ೩೯ ॥**

**ಪ್ರಭೋ** = ಹೇ ಪ್ರಭುವೆ, **ಭವತಾಪ-ದಾವದಹನ-ಜ್ವಾಲಾಭಿಃ** = ಸಂಸಾರ ತಾಪವೆಂಬ ಕಾಡ್ಗಿಚ್ಚಿನ ಜ್ವಾಲೆಗಳಿಂದ **ಸಂತಪ್ತಂ**=ಬೆಂದಿರುವ **ಏನಂ**= ಈ [ನನ್ನನ್ನು] **ಬ್ರಹ್ಮಾನಂದ-ರಸಾನುಭೂತಿ-ಕಲಿತೈಃ** = ಬಹ್ಮಾನಂದರಸದ ಅನುಭವದಿಂದ ಕೂಡಿರುವ, ಮಧುರವಾಗಿರುವ **ಪೂತೈಃ** = ಶುದ್ಧವಾಗಿರುವ **ಸುಶೀತೈಃ**=ಶೀತಲವಾಗಿರುವ **ಹಿತೈಃ** = ಹಿತವಾಗಿರುವ **ಯುಷ್ಮತ್-ವಾಕ್-ಕಲಶ-ಉಜ್ಝಿತೈಃ** = ನಿನ್ನ ಮಾತುಗಳೆಂಬ ಕಲಶದಿಂದ ಹೊರಹೊಮ್ಮಿರುವ **ಶ್ರುತಿಸುಖೈಃ** = ಕೇಳಲು ಇಂಪಾಗಿರುವ **ವಾಕ್ಯಾಮೃತೈಃ** = ವಾಕ್ಯಗಳೆಂಬ ಅಮೃತಧಾರೆಗಳಿಂದ **ಸೇಚಯ** = ಚಿಮುಕಿಸು; **ಭವತ್-ಈಕ್ಷಣ-ಕ್ಷಣಗತೇಃ** = ನಿನ್ನ ಕಟಾಕ್ಷದ ಕ್ಷಣಮಾತ್ರ-ಪ್ರಸರಣೆಗೆ **ಪಾತ್ರೀಕೃತಾಃ** = ಪಾತ್ರರಾಗಿರುವ **ಸ್ವೀಕೃತಾಃ** = ಸ್ವೀಕೃತರಾಗಿರುವ **ತೇ** = ಅವರು **ಧನ್ಯಾಃ** = ಧನ್ಯರು.

**೩೯.** ಹೇ ಪ್ರಭೋ, ಸಂಸಾರತಾಪತ್ರಯವೆಂಬ ಕಾಡ್ಗಿಚ್ಚಿನ ಜ್ವಾಲೆಗಳಿಂದ ಬೆಂದಿರುವ ಈ ನನ್ನನ್ನು, ಬ್ರಹ್ಮಾನಂದ-ರಸಾನುಭವದಿಂದ ಮಧುರವೂ ಶುದ್ಧವೂ ಅತಿಶೀತಲವೂ ಹಿತಕರವೂ ಆದ, ನಿಮ್ಮ ಮಾತೆಂಬ ಕಲಶದಿಂದ ಹೊರಹೊಮ್ಮಿ ಕೇಳುವುದಕ್ಕೆ ಇಂಪಾಗಿರುವ ಉಪದೇಶಾಮೃತ-ಧಾರೆಗಳಿಂದ ಚಿಮುಕಿಸಿ ನಿಮ್ಮ ಕಟಾಕ್ಷದ ಕ್ಷಣಮಾತ್ರ-ಪ್ರಸರಣೆಗೆ ಪಾತ್ರರಾಗಿ ಪರಿಗೃಹೀತರಾಗಿರುವವರೇ ಧನ್ಯರು!

**ಕಥಂ ತರೇಯಂ ಭವಸಿಂಧುಮೇತಂ**
**ಕಾ ವಾ ಗತಿರ್ಮೇ ಕತಮೋಽಸ್ತ್ಯುಪಾಯಃ ।**
**ಜಾನೇ ನ ಕಿಂಚಿತ್ ಕೃಪಯಾऽವ ಮಾಂ ಪ್ರಭೋ**
**ಸಂಸಾರದುಃಖ-ಕ್ಷತಿಮಾತನುಷ್ವ ॥ ೪೦ ॥**

**ಏತಂ ಭವಸಿಂಧುಂ** = ಈ ಸಂಸಾರಸಾಗರವನ್ನು **ಕಥಂ ತರೇಯಂ** = ಹೇಗೆ ದಾಟಬಲ್ಲೆನು? **ಮೇ** = ನನಗೆ **ಗತಿಃ** = ಗತಿಯು **ಕಾ ವಾ** = ಯಾವುದು? **ಕತಮಃ** = ಯಾವ **ಉಪಾಯಃ ಅಸ್ತಿ** = ಉಪಾಯವಿರುವುದು? **ಕಿಂಚಿತ್** = ಯಾವುದನ್ನೂ **ನ ಜಾನೇ** = ಅರಿಯೆನು; **ಪ್ರಭೋ** = ಹೇ ಪ್ರಭುವೆ, **ಮಾಂ** = ನನ್ನನ್ನು **ಕೃಪಯಾ** = ಕೃಪೆಯಿಂದ **ಅವ** = ಕಾಪಾಡು, **ಸಂಸಾರದುಃಖ-ಕ್ಷತಿಂ** = ಸಂಸಾರದುಃಖದ ನಾಶವನ್ನು **ಆತನುಷ್ವ** = ಮಾಡು.

**೪೦.** ಈ ಸಂಸಾರಸಾಗರವನ್ನು ಹೇಗೆ ದಾಟಬಲ್ಲೆನು? ನನಗೆ ಗತಿ ಯಾವುದು? ನನಗೆ ಮೋಕ್ಷೋಪಾಯವು[^1] ಯಾವುದು? ಇದಾವುದನ್ನೂ ನಾನು ಅರಿಯೆನು. ಹೇ ಪ್ರಭೋ, ನನ್ನನ್ನು ಕೃಪೆಯಿಂದ ಕಾಪಾಡು. ನನ್ನ ಸಂಸಾರದುಃಖವನ್ನು ಪೂರ್ಣವಾಗಿ ನಾಶಮಾಡು.

[^1 ಶಾಸ್ತ್ರದಲ್ಲಿ ಹೇಳಿರುವ ಕರ್ಮ-ಜ್ಞಾನ-ಭಕ್ತಿಗಳಲ್ಲಿ ಯಾವುದು ಉಪಾಯವು?]

**ತಥಾ ವದಂತಂ ಶರಣಾಗತಂ ಸ್ವಂ**
**ಸಂಸಾರ-ದಾವಾನಲ-ತಾಪತಪ್ತಮ್ ।**
**ನಿರೀಕ್ಷ್ಯ ಕಾರುಣ್ಯ-ರಸಾರ್ದ್ರ-ದೃಷ್ಟ್ಯಾ**
**ದದ್ಯಾದಭೀತಿಂ ಸಹಸಾ ಮಹಾತ್ಮಾ ॥ ೪೧ ॥**

**ತಥಾ** = ಹೀಗೆ **ವದಂತಂ** = ಹೇಳುತ್ತಿರುವ **ಶರಣಾಗತಂ** = ಶರಣಾಗತನಾದ **ಸ್ವಂ** = ಆತ್ಮೀಯನಾದ **ಸಂಸಾರ-ದಾವಾನಲ-ತಾಪತಪ್ತಂ**-ಸಂಸಾರವೆಂಬ ಕಾಡ್ಗಿಚ್ಚಿನಿಂದ ಬೆಂದಿರುವ [ಶಿಷ್ಯನನ್ನು] **ಮಹಾತ್ಮಾ** = ಮಹಾತ್ಮನು **ಕಾರುಣ್ಯ-ರಸಾರ್ದ್ರ-**

**ದೃಷ್ಟ್ಯಾ** = ಕಾರುಣ್ಯರಸದಿಂದ ನೆನೆದಿರುವ ದೃಷ್ಟಿಯಿಂದ **ನಿರೀಕ್ಷ್ಯ** = ನೋಡಿ **ಸಹಸಾ** = ಕೂಡಲೇ **ಅಭೀತಿಂ** = ಅಭಯವನ್ನು **ದದ್ಯಾತ್** = ಕೊಡಬೇಕು.

**೪೧.** ಹೀಗೆ ಹೇಳುತ್ತಿರುವ, ಸಂಸಾರವೆಂಬ ಕಾಡ್ಗಿಚ್ಚಿನಿಂದ ಬೆಂದು ಶರಣಾಗತನಾಗಿರುವ ತನ್ನ ಶಿಷ್ಯನನ್ನು ಮಹಾತ್ಮನಾದ ಗುರುವು ಕಾರುಣ್ಯ ರಸದಿಂದ ನೆನೆದಿರುವ ದೃಷ್ಟಿಯಿಂದ ನೋಡಿ, ಕೂಡಲೇ ಅಭಯವನ್ನು ನೀಡಬೇಕು.

**ವಿದ್ವಾನ್ ಸ ತಸ್ಮಾ ಉಪಸತ್ತಿಮೀಯುಷೇ**
**ಮುಮುಕ್ಷವೇ ಸಾಧುಯಥೋಕ್ತಕಾರಿಣೇ ।**
**ಪ್ರಶಾಂತಚಿತ್ತಾಯ ಶಮಾನ್ವಿತಾಯ**
**ತತ್ತ್ವೋಪದೇಶಂ ಕೃಪಯೈವ ಕುರ್ಯಾತ್ ॥ ೪೨ ॥**

**ಸಃ ವಿದ್ವಾನ್** = ಆ ವಿದ್ವಾಂಸನು **ಉಪಸತ್ತಿಂ ಈಯುಷೇ** = ಉಪಸತ್ತಿಯನ್ನು ಬಯಸಿರುವ **ಮುಮುಕ್ಷವೇ** = ಮುಮುಕ್ಷುವಾದ **ಸಾಧು-ಯಥೋಕ್ತ-ಕಾರಿಣೇ** = ಹೇಳಿದಂತೆ ಸರಿಯಾಗಿ ನಡೆಯುವ **ಪ್ರಶಾಂತಚಿತ್ತಾಯ** = ಪ್ರಶಾಂತ ಮನಸ್ಕನಾದ **ಶಮಾನ್ವಿತಾಯ** = ಶಮಾದಿಗಳಿಂದ ಕೂಡಿರುವ **ತಸ್ಮೈ** = ಆ ಶಿಷ್ಯನಿಗೆ **ಕೃಪಯಾ ಏವ** = ಕೃಪೆಯಿಂದಲೇ **ತತ್ತ್ವೋಪದೇಶಂ** = ತತ್ತ್ವೋಪದೇಶವನ್ನು **ಕುರ್ಯಾತ್** = ಮಾಡಬೇಕು.

**೪೨.** ಬ್ರಹ್ಮವಿದನಾದ ಗುರುವು ಹೀಗೆ ಉಪಸತ್ತಿಯನ್ನು ಬಯಸುತ್ತಿರುವ, ಮುಮುಕ್ಷುವಾದ, ಹೇಳಿದಂತೆ ಸರಿಯಾಗಿ ನಡೆಯುವ, ಪ್ರಶಾಂತ ಚಿತ್ತನಾದ ಶಮಾದಿಗುಣಗಳಿಂದ ಕೂಡಿರುವ ಆ ಶಿಷ್ಯನಿಗೆ ಕೃಪೆಯಿಂದಲೇ ತತ್ತ್ವೋಪದೇಶವನ್ನು ಮಾಡಬೇಕು.[೧]

[೧ 'ಹೀಗೆ ಸರಿಯಾಗಿ ಬಂದಿರುವ ಪ್ರಶಾಂತಚಿತ್ತನಾದ ಶಮದಿಂದ ಕೂಡಿರುವ ಶಿಷ್ಯನಿಗೆ ಆ ವಿದ್ವಾಂಸನು, ಯಾವುದರಿಂದ ಪರಮಾರ್ಥಸ್ವರೂಪವುಳ್ಳ ಅಕ್ಷರನಾದ ಪುರುಷನನ್ನು ತಿಳಿಯುವನೊ ಆ ಬ್ರಹ್ಮವಿದ್ಯೆಯನ್ನು ಉಪದೇಶಿಸಬೇಕು' **ತಸ್ಮೈ ಸ ವಿದ್ವಾನುಪಸನ್ನಾಯ ಸಮ್ಯಕ್ ಪ್ರಶಾಂತಚಿತ್ತಾಯ ಶಮಾನ್ವಿತಾಯ । ಯೇನಾಕ್ಷರಂ ಪುರುಷಂ ವೇದ ಸತ್ಯಂ ಪ್ರೋವಾಚ ತಾಂ ತತ್ತ್ವತೋ ಬ್ರಹ್ಮವಿದ್ಯಾಮ್ ॥** ಎಂಬ ಮುಂಡಕಶ್ರುತಿಯ (೧. ೨. ೧೩) ಅರ್ಥವನ್ನೇ ಇಲ್ಲಿ ವಿವರಿಸಿದೆ.]

**ಮಾ ಭೈಷ್ಟ ವಿದ್ವಂಸ್ತವ ನಾಸ್ತ್ಯಪಾಯಃ**
**ಸಂಸಾರಸಿಂಧೋಸ್ತರಣೇಽಸ್ತ್ಯುಪಾಯಃ ।**
**ಯೇನೈವ ಯಾತಾ ಯತಯೋಽಸ್ಯ ಪಾರಂ**
**ತಮೇವ ಮಾರ್ಗಂ ತವ ನಿರ್ದಿಶಾಮಿ ॥ ೪೩ ॥**

**ವಿದ್ವನ್** = ಹೇ ವಿದ್ವಾಂಸನೆ, **ಮಾ ಭೈಷ್ಟ** = ಹೆದರಬೇಡ, **ತವ** = ನಿನಗೆ **ಅಪಾಯಃ** = ಅಪಾಯವು **ನ ಅಸ್ತಿ** = ಇಲ್ಲ; **ಸಂಸಾರಸಿಂಧೋಃ** = ಸಂಸಾರಸಾಗರದ **ತರಣೇ** = ದಾಟುವಿಕೆಯಲ್ಲಿ **ಉಪಾಯಃ** = ಸಾಧನವು **ಅಸ್ತಿ** = ಇದೆ; **ಯತಯಃ** = ಪ್ರಯತ್ನಶಾಲಿಗಳು, ಯತಿಗಳು **ಯೇನ ಏವ** = ಯಾವ [ಮಾರ್ಗದಿಂದಲೇ] **ಅಸ್ಯ** = ಇದರ **ಪಾರಂ** = ತೀರವನ್ನು **ಯಾತಾಃ** = ಪಡೆದರೊ **ತಂ ಏವ ಮಾರ್ಗಂ** = ಅದೇ ಮಾರ್ಗವನ್ನೇ **ತವ** = ನಿನಗೂ **ನಿರ್ದಿಶಾಮಿ** = ತೋರಿಸುತ್ತೇನೆ.

**೪೩.** ಹೇ ವಿದ್ವಾಂಸನೆ, ಹೆದರಬೇಡ! ನಿನಗೆ ಅಪಾಯವಿಲ್ಲ.[೧] ಸಂಸಾರಸಾಗರವನ್ನು ದಾಟುವುದಕ್ಕೆ ಸಾಧನವಿದೆ. ಯಾವ ಮಾರ್ಗದಿಂದ ಯತಿಗಳು ಈ ಸಮುದ್ರದ ಆಚೆಯ ತೀರವನ್ನು ಹೊಂದಿದರೊ ಅದನ್ನೇ ನಿನಗೂ ತೋರಿಸುತ್ತೇನೆ.

[[೧] ಗುರುವು ಶಿಷ್ಯನಿಗ ಅಭಯಪ್ರದಾನವನ್ನು ಮಾಡುತ್ತಾನೆ. 'ಕಲ್ಯಾಣಕಾರ್ಯಗಳನ್ನು ಮಾಡುವ ಯಾವನೂ ಅಧೋಗತಿಯನ್ನು ಹೊಂದುವುದಿಲ್ಲ' **ನ ಹಿ ಕಲ್ಯಾಣ-ಕೃತ್ ಕಶ್ಚಿದ್ದುರ್ಗತಿಂ ತಾತ ಗಚ್ಛತಿ** ಎಂದು ಗೀತೆಯಲ್ಲಿ (೬, ೪೦) ಹೇಳಿದೆ.]

**ಅಸ್ತ್ಯುಪಾಯೋ ಮಹಾನ್ ಕಶ್ಚಿತ್ ಸಂಸಾರಭಯನಾಶನಃ ।**
**ತೇನ ತೀರ್ತ್ವಾ ಭವಾಂಭೋಧಿಂ ಪರಮಾನಂದಮಾಪ್ಸ್ಯಸಿ ॥ ೪೪ ॥**

**ಸಂಸಾರ-ಭಯ-ನಾಶನಃ** = ಸಂಸಾರಭಯವನ್ನು ನಾಶಮಾಡುವ **ಮಹಾನ್** = ದೊಡ್ಡದಾದ **ಕಶ್ಚಿತ್-ಉಪಾಯಃ** = ಒಂದಾನೊಂದು ಸಾಧನವು **ಅಸ್ತಿ** = ಇದೆ; **ತೇನ** = ಅದರಿಂದ **ಭವಾಂಭೋಧಿಂ** = ಸಂಸಾರಸಮುದ್ರವನ್ನು **ತೀರ್ತ್ವಾ** = ದಾಟಿ **ಪರಮಾನಂದಂ** = ಪರಮಾನಂದವನ್ನು **ಆಪ್ಸ್ಯಸಿ** = ಹೊಂದುತ್ತೀಯೆ.

**೪೪.** ಸಂಸಾರಭಯವನ್ನು ನಾಶಮಾಡುವ ಒಂದಾನೊಂದು ದೊಡ್ಡ ಉಪಾಯವಿದೆ; ಅದರಿಂದ ಸಂಸಾರಸಮುದ್ರವನ್ನು ದಾಟಿ[೧] ಪರಮಾನಂದವನ್ನು[೨] ಹೊಂದುತ್ತೀಯೆ.

[[೧] ನಿನ್ನ ಅಜ್ಞಾನವನ್ನು ನಾಶಮಾಡಿಕೊಂಡು.
[೨] ನಿರತಿಶಯ-ಬ್ರಹ್ಮಾನಂದವನ್ನು.]

**ವೇದಾಂತಾರ್ಥ-ವಿಚಾರೇಣ ಜಾಯತೇ ಜ್ಞಾನಮುತ್ತಮಮ್ ।**
**ತೇನಾತ್ಯಂತಿಕ-ಸಂಸಾರ-ದುಃಖ-ನಾಶೋ ಭವತ್ಯನು ॥ ೪೫ ॥**

**ವೇದಾಂತಾರ್ಥ-ವಿಚಾರೇಣ** = ಉಪನಿಷದ್ವಾಕ್ಯಗಳ ಅರ್ಥದ ವಿಮರ್ಶೆಯಿಂದ **ಉತ್ತಮಂ ಜ್ಞಾನಂ** = ಉತ್ತಮವಾದ ಜ್ಞಾನವು **ಜಾಯತೇ** = ಉತ್ಪನ್ನವಾಗುತ್ತದೆ;

**ಅನು** = ಕೂಡಲೇ **ತೇನ** = ಅದರಿಂದ **ಆತ್ಯಂತಿಕ-ಸಂಸಾರ-ದುಃಖ-ನಾಶಃ** = ಸಂಸಾರ ದುಃಖದ ಸಂಪೂರ್ಣನಾಶವು **ಭವತಿ** = ಆಗುತ್ತದೆ.

**೪೫.** ಉಪನಿಷದ್-ವಾಕ್ಯಾರ್ಥದ ವಿಮರ್ಶೆಯಿಂದ ಉತ್ತಮಜ್ಞಾನವು[೧] ಉತ್ಪನ್ನವಾಗುತ್ತದೆ. ಕೂಡಲೇ ಆ ಜ್ಞಾನದಿಂದ ಸಂಸಾರದುಃಖದ ಸಂಪೂರ್ಣನಾಶವು ಉಂಟಾಗುತ್ತದೆ.

[[೧] ಬ್ರಹ್ಮ-ಆತ್ಮ ಇವರ ಐಕ್ಯಜ್ಞಾನವು.]

**ಶ್ರದ್ಧಾಭಕ್ತಿ-ಧ್ಯಾನಯೋಗಾನ್ ಮುಮುಕ್ಷೋ-**
**ರ್ಮುಕ್ತೇರ್ಹೇತೂನ್ ವಕ್ತಿ ಸಾಕ್ಷಾಚ್ಛ್ರುತೇರ್ಗೀಃ ।**
**ಯೋ ವಾ ಏತೇಷ್ವೇವ ತಿಷ್ಠತ್ಯಮುಷ್ಯ**
**ಮೋಕ್ಷೋಽವಿದ್ಯಾಕಲ್ಪಿತಾದ್ ದೇಹ-**
**ಬಂಧಾತ್ ॥ ೪೬ ॥**

**ಶ್ರುತೇಃ** = ಉಪನಿಷತ್ತಿನ **ಗೀಃ** = ವಾಕ್ಯವು **ಮುಮುಕ್ಷೋಃ** = ಮುಮುಕ್ಷುವಿಗೆ **ಶ್ರದ್ಧಾಭಕ್ತಿ-ಧ್ಯಾನಯೋಗಾನ್** = ಶ್ರದ್ಧೆ ಭಕ್ತಿ ಧ್ಯಾನಯೋಗ ಇವುಗಳನ್ನು, **ಮುಕ್ತೇಃ** = ಮುಕ್ತಿಯ **ಹೇತೂನ್** = ಕಾರಣಗಳನ್ನಾಗಿ **ಸಾಕ್ಷಾತ್** = ಪ್ರತ್ಯಕ್ಷವಾಗಿ **ವಕ್ತಿ** = ಹೇಳುತ್ತದೆ; **ಯಃ ವೈ** = ಯಾವನು **ಏತೇಷು ಏವ** = ಇವುಗಳಲ್ಲಿಯೇ **ತಿಷ್ಠತಿ** = ನೆಲೆಗೊಂಡಿರುವನೊ **ಅಮುಷ್ಯ** = ಅವನಿಗೆ **ಅವಿದ್ಯಾಕಲ್ಪಿತಾತ್** = ಅವಿದ್ಯೆಯಿಂದ ಕಲ್ಪಿತವಾಗಿರುವ **ದೇಹಬಂಧಾತ್** = ದೇಹಬಂಧದಿಂದ **ಮೋಕ್ಷಃ** = ಬಿಡುಗಡೆಯು [ಉಂಟಾಗುತ್ತದೆ].

**೪೬.** ಶ್ರದ್ಧೆ[೧] ಭಕ್ತಿ[೨] ಧ್ಯಾನಯೋಗ[೩]—ಇವುಗಳೇ ಮುಮುಕ್ಷುವಿನ ಮುಕ್ತಿಗೆ ಕಾರಣಗಳೆಂದು ಶ್ರುತಿವಾಕ್ಯವೇ[೪] ಪ್ರತ್ಯಕ್ಷವಾಗಿ ಹೇಳುತ್ತಲಿದೆ. ಯಾವನು ಇವುಗಳಲ್ಲಿ ನೆಲೆಗೊಂಡಿರುವನೊ ಅವನಿಗೆ ಅವಿದ್ಯೆಯಿಂದ ಕಲ್ಪಿತವಾಗಿರುವ ದೇಹಬಂಧದಿಂದ[೫] ಬಿಡುಗಡೆಯಾಗುವುದು.

[[೧] ೨೫ನೆಯ ಶ್ಲೋಕವನ್ನು ನೋಡಿ.
[೨] ೩೧ನೆಯ ಶ್ಲೋಕವನ್ನು ನೋಡಿ.
[೩] ಯಾವ ವಿಧವಾದ ಭಿನ್ನಪ್ರತ್ಯಯವಿಲ್ಲದೆ ಧ್ಯೇಯವಸ್ತುವಿನಲ್ಲಿ ಅವಲಂಬಿಸಿರುವ ಪ್ರತ್ಯಯವು ಅವಿಚ್ಛಿನ್ನವಾಗಿ ಹರಿಯುತ್ತಿದ್ದರೆ ಧ್ಯಾನವಾಗುತ್ತದೆ, **ತತ್ರ ಪ್ರತ್ಯಯೈಕತಾನತಾ ಧ್ಯಾನಮ್** (ಯೋಗಸೂತ್ರ ೩. ೨).
[೪] **ಶ್ರದ್ಧಾಭಕ್ತಿಧ್ಯಾನಯೋಗಾದವೇಹಿ** (ಕೈವಲ್ಯೋಪನಿಷತ್ ೧. ೨).
[೫] ದೇಹಾಭಿಮಾನದಿಂದ.]

**ಅಜ್ಞಾನಯೋಗಾತ್ ಪರಮಾತ್ಮನಸ್ತವ**
**ಹ್ಯನಾತ್ಮಬಂಧಸ್ತತ ಏವ ಸಂಸೃತಿಃ ।**
**ತಯೋರ್ವಿವೇಕೋದಿತ-ಬೋಧವಹ್ನಿ-**
**ರಜ್ಞಾನಕಾರ್ಯಂ ಪ್ರದಹೇತ್ ಸಮೂಲಮ್॥ ೪೭ ॥**

**ಪರಮಾತ್ಮನಃ** = ಪರಮಾತ್ಮನಾದ **ತವ** ಹಿ = ನಿನಗೂ **ಅಜ್ಞಾನಯೋಗಾತ್** = ಅಜ್ಞಾನಸಂಬಂಧದಿಂದ **ಅನಾತ್ಮಬಂಧಃ** = ದೇಹಾಭಿಮಾನವು [ಉಂಟಾಗಿದೆ]; **ತತಃ ಏವ** = ಅದರಿಂದಲೇ **ಸಂಸೃತಿಃ** = ಸಂಸಾರವು; **ತಯೋಃ** = ಅವೆರಡರ **ವಿವೇಕೋದಿತ-ಬೋಧವಹ್ನಿಃ** – ವಿಚಾರದಿಂದ ಉತ್ಪನ್ನವಾದ ಜ್ಞಾನಾಗ್ನಿಯು **ಅಜ್ಞಾನ-ಕಾರ್ಯಂ** = ಅವಿದ್ಯೆಯ ಕಾರ್ಯವಾದ [ಬಂಧವೆಂಬ ಮರವನ್ನು] **ಸಮೂಲಂ ಪ್ರದಹೇತ್** = ಬೇರಿನೊಡನೆ ದಹಿಸುವುದು.

**೪೭.** ಪರಮಾತ್ಮನಾದ ನಿನಗೂ ಅವಿದ್ಯಾಸಂಬಂಧದಿಂದಲೇ ದೇಹಾಭಿಮಾನವು ಉಂಟಾಗಿದೆ; ಅದರಿಂದಲೇ ಜನನಮರಣರೂಪವಾದ ಸಂಸಾರ; ಆತ್ಮ ಅನಾತ್ಮ— ಈ ಎರಡರ ವಿಚಾರದಿಂದ ಉತ್ಪನ್ನವಾದ ಜ್ಞಾನಾಗ್ನಿಯು ಅವಿದ್ಯೆಯ ಕಾರ್ಯವಾದ (ಬಂಧವೆಂಬ ಮರವನ್ನು) ಬೇರಿನೊಡನೆ ದಹಿಸುವುದು.

**ಶಿಷ್ಯ ಉವಾಚ**

**ಕೃಪಯಾ ಶ್ರೂಯತಾಂ ಸ್ವಾಮಿನ್**
**ಪ್ರಶ್ನೋಽಯಂ ಕ್ರಿಯತೇ ಮಯಾ ।**
**ಯದುತ್ತರಮಹಂ ಶ್ರುತ್ವಾ**
**ಕೃತಾರ್ಥಃ ಸ್ಯಾಂ ಭವನ್ಮುಖಾತ್ ॥ ೪೮ ॥**

**ಶಿಷ್ಯಃ ಉವಾಚ** = ಶಿಷ್ಯನು ಹೇಳಿದನು—**ಸ್ವಾಮಿನ್, ಮಯಾ** = ನನ್ನಿಂದ **ಅಯಂ ಪ್ರಶ್ನಃ** = ಈ ಪ್ರಶ್ನೆಯು **ಕ್ರಿಯತೇ** = ಮಾಡಲ್ಪಡುತ್ತದೆ; **ಕೃಪಯಾ** – ಕೃಪೆಯಿಂದ **ಶ್ರೂಯತಾಂ** = ಕೇಳೋಣವಾಗಲಿ; **ಅಹಂ** = ನಾನು **ಭವನ್ಮುಖಾತ್** = ನಿಮ್ಮ ಬಾಯಿಂದ **ಯದುತ್ತರಂ** = ಯಾವ ಉತ್ತರವನ್ನು **ಶ್ರುತ್ವಾ** = ಕೇಳಿ **ಕೃತಾರ್ಥಃ ಸ್ಯಾಂ** = ಕೃತಕೃತ್ಯನಾಗುವೆನೊ.

**೪೮.** ಶಿಷ್ಯನು ಹೇಳಿದನು: ಹೇ ಸ್ವಾಮಿನ್, ನಾನು ಕೇಳುವ ಪ್ರಶ್ನೆಯನ್ನು ಕೃಪೆಯಿಂದ ಲಾಲಿಸಿರಿ. ನಿಮ್ಮ ಬಾಯಿಂದ ಈ ಪ್ರಶ್ನೆಗೆ ಉತ್ತರವನ್ನು ಕೇಳಿ ನಾನು ಕೃತಾರ್ಥನಾಗುತ್ತೇನೆ.

**ಕೋ ನಾಮ ಬಂಧಃ ಕಥಮೇಷ ಆಗತಃ**
**ಕಥಂ ಪ್ರತಿಷ್ಠಾಸ್ಯ ಕಥಂ ವಿಮೋಕ್ಷಃ ।**
**ಕೋಽಸಾವನಾತ್ಮಾ ಪರಮಃ ಕ ಆತ್ಮಾ**
**ತಯೋರ್ವಿವೇಕಃ ಕಥಮೇತದುಚ್ಯತಾಮ್ ॥ ೪೯ ॥**

**ಬಂಧಃ** = ಬಂಧವೆಂಬುದು **ಕಃ ನಾಮ** = ಯಾವುದು? **ಏಷಃ** = ಇದು **ಕಥಂ** = ಹೇಗೆ **ಆಗತಃ** = ಬಂದಿರುವುದು? **ಅಸ್ಯ** = ಇದರ **ಪ್ರತಿಷ್ಠಾ** = ನೆಲೆಯು **ಕಥಂ** = ಹೇಗೆ? **ವಿಮೋಕ್ಷಃ** = ಬಿಡುಗಡೆಯು **ಕಥಂ** = ಹೇಗೆ? **ಅನಾತ್ಮಾ** = ಅನಾತ್ಮವು **ಕಃ ಅಸೌ** = ಯಾವುದು? **ಪರಮಃ ಆತ್ಮಾ** = ಪರಮಾತ್ಮನು **ಕಃ** = ಯಾರು? **ತಯೋಃ** = ಇವರಿಬ್ಬರ **ವಿವೇಕಃ** = ವಿವೇಚನೆಯು **ಕಥಂ** = ಹೇಗೆ? **ಏತತ್** = ಇದು **ಉಚ್ಯತಾಂ** = ಹೇಳಲ್ಪಡಲಿ.

**೪೯.** ಬಂಧವೆಂಬುದು ಯಾವುದು? ಇದು ಹೇಗೆ ಬಂದಿರುತ್ತದೆ? ಇದು ನೆಲೆಗೊಂಡಿರುವುದು ಹೇಗೆ? ಇದರಿಂದ ಬಿಡುಗಡೆಯಾಗುವುದು ಹೇಗೆ? ಅನಾತ್ಮವಸ್ತುವು ಯಾವುದು? ಪರಮಾತ್ಮನು ಯಾರು? ಆತ್ಮಾನಾತ್ಮರನ್ನು ವಿವೇಚಿಸುವುದು ಹೇಗೆ? ಈ ವಿಷಯವನ್ನು ಹೇಳಬೇಕು.

ಶ್ರೀಗುರುರುವಾಚ

**ಧನ್ಯೋಽಸಿ ಕೃತಕೃತ್ಯೋಽಸಿ ಪಾವಿತಂ ತೇ ಕುಲಂ ತ್ವಯಾ ।**
**ಯದವಿದ್ಯಾಬಂಧಮುಕ್ತ್ಯಾ ಬ್ರಹ್ಮೀಭವಿತುಮಿಚ್ಛಸಿ ॥ ೫೦ ॥**

**ಶ್ರೀಗುರುಃ ಉವಾಚ** = ಗುರುವು ಹೇಳಿದನು—**ಧನ್ಯಃ ಅಸಿ** = ನೀನು ಧನ್ಯನಾಗಿರುವೆ; **ಕೃತಕೃತ್ಯಃ ಅಸಿ** = ಕೃತಾರ್ಥನಾಗಿರುವೆ; **ತ್ವಯಾ** = ನಿನ್ನಿಂದ **ತೇ** = ನಿನ್ನ **ಕುಲಂ** = ಕುಲವು **ಪಾವಿತಂ** = ಪವಿತ್ರ ಮಾಡಲ್ಪಟ್ಟಿತು, **ಯತ್** = ಯಾವ ಕಾರಣದಿಂದ **ಅವಿದ್ಯಾಬಂಧಮುಕ್ತ್ಯಾ** = ಅವಿಧ್ಯಾಬಂಧದ ಬಿಡುಗಡೆಯ ಮೂಲಕ **ಬ್ರಹ್ಮೀಭವಿತುಂ** = ಬ್ರಹ್ಮವಾಗಲು **ಇಚ್ಛಸಿ** = ಇಚ್ಛಿಸುತ್ತಿರುವೆಯೊ.

**೫೦.** ಗುರುವು ಹೇಳಿದನು: ನೀನು ಧನ್ಯನು, ಕೃತಕೃತ್ಯನು. ನಿನ್ನ ಕುಲವು ನಿನ್ನಿಂದ ಪವಿತ್ರಮಾಡಲ್ಪಟ್ಟಿತು;[೧] ಏಕೆಂದರೆ ಅವಿದ್ಯಾಬಂಧದಿಂದ ಬಿಡಿಸಿಕೊಂಡು ಬ್ರಹ್ಮಭಾವವನ್ನು ಪಡೆಯಲು ಬಯಸುತ್ತಿರುವ.

[೧ 'ಯಾರ ಮನಸ್ಸು ಅಪಾರವಾದ ಸಚ್ಚಿದಾನಂದ-ಸಮುದ್ರವೆಂಬ ಪರಬ್ರಹ್ಮದಲ್ಲಿ ಲೀನವಾಗಿದೆಯೋ ಅವನಿಂದ ಕುಲವು ಪವಿತ್ರವಾಯಿತು, ತಾಯಿಯು ಕೃತಾರ್ಥಳಾದಳು, ಭೂಮಿಯು ಪುಣ್ಯವತಿಯಾದಳು' **ಕುಲಂ ಪವಿತ್ರಂ ಜನನೀ ಕೃತಾರ್ಥಾ ವಿಶ್ವಂಭರಾ ಪುಣ್ಯವತೀ ಚ ತೇನ । ಅಪಾರ-ಸಚ್ಚಿತ್-ಸುಖ-ಸಾಗರೇಽಸ್ಮಿನ್ ಲೀನಂ ಪರೇ ಬ್ರಹ್ಮಣಿ ಯಸ್ಯ ಚೇತಃ ॥** ]

**ಋಣಮೋಚನ-ಕರ್ತಾರಃ ಪಿತುಃ ಸಂತಿ ಸುತಾದಯಃ ।**
**ಬಂಧಮೋಚನ-ಕರ್ತಾ ತು ಸ್ವಸ್ಮಾದನ್ಯೋ ನ ಕಶ್ಚನ ॥ ೫೧ ॥**

**ಸುತಾದಯಃ**=ಮಗನೇ ಮೊದಲಾದವರು **ಪಿತುಃ**=ತಂದೆಗೆ **ಋಣಮೋಚನ-ಕರ್ತಾರಃ**=ಋಣದಿಂದ ಬಿಡುಗಡೆಮಾಡಲು ಕರ್ತೃಗಳಾಗಿದ್ದಾರೆ; **ತು**=ಆದರೆ **ಬಂಧಮೋಚನ-ಕರ್ತಾ**=ಅವಿದ್ಯಾಬಂಧದಿಂದ ಬಿಡುಗಡೆಮಾಡುವವನು **ಸ್ವಸ್ಮಾತ್** ತನಗಿಂತಲೂ **ಅನ್ಯಃ**=ಬೇರೆಯಾದವನು **ಕಶ್ಚನ ನ**=ಯಾವನೊಬ್ಬನೂ ಇಲ್ಲ.

**೫೧.** ತಂದೆಯನ್ನು ಸಾಲದಿಂದ[೧] ಬಿಡಿಸಲು ಮಗನೇ ಮೊದಲಾದವರು ಇದ್ದಾರೆ, ಆದರೆ ಅವಿದ್ಯಾಬಂಧದಿಂದ ಬಿಡುಗಡೆಮಾಡಲು ತನ್ನನ್ನು ಬಿಟ್ಟರೆ ಬೇರೆ ಯಾವನೂ ಇಲ್ಲ.

[೧ ಶಾಸ್ತ್ರೀಯ-ಋಣವಾದರೂ ಆಗಬಹುದು.]

**ಮಸ್ತಕನ್ಯಸ್ತ-ಭಾರಾದೇರ್ದುಃಖಮನ್ಯೈರ್ನಿವಾರ್ಯತೇ ।**
**ಕ್ಷುಧಾದಿಕೃತ-ದುಃಖಂ ತು ವಿನಾ ಸ್ವೇನ ನ ಕೇನಚಿತ್ ॥ ೫೨ ॥**

**ಮಸ್ತಕನ್ಯಸ್ತ-ಭಾರಾದೇಃ**=ತಲೆಯ ಮೇಲಿರುವ ಹೊರೆ ಮೊದಲಾದುವುಗಳ **ದುಃಖಂ**=ಕಷ್ಟವು **ಅನ್ಯೈಃ**=ಇತರರಿಂದ **ನಿವಾರ್ಯತೇ**=ಹೋಗಲಾಡಿಸಲ್ಪಡುತ್ತದೆ; **ತು**=ಆದರೆ **ಕ್ಷುಧಾದಿಕೃತ-ದುಃಖಂ**=ಹಸಿವು ಮೊದಲಾದವುಗಳಿಂದ ಉಂಟಾದ ಕಷ್ಟವು **ಸ್ವೇನ ವಿನಾ**=ತನ್ನಿಂದಲ್ಲದೆ **ಕೇನಚಿತ್ ನ**=ಮತ್ತೆ ಯಾರಿಂದಲೂ [ಹೋಗಲಾಡಿಸಲ್ಪಡುವುದಿಲ್ಲ].

**೫೨.** ತನ್ನ ತಲೆಯ ಮೇಲಿರುವ ಹೇರಿನಿಂದ ಉಂಟಾದ ಕಷ್ಟವನ್ನು ಇತರರಿಂದ ಹೋಗಲಾಡಿಸಿಕೊಳ್ಳಬಹುದು. ಆದರೆ ಹಸಿವು ಮೊದಲಾದುವುಗಳಿಂದ ಉಂಟಾದ ಕಷ್ಟವನ್ನು ತನ್ನಿಂದಲ್ಲದೆ ಬೇರೆ ಯಾರಿಂದಲೂ ಪರಿಹರಿಸಿಕೊಳ್ಳಲು ಸಾಧ್ಯವಿಲ್ಲ.

**ಪಥ್ಯಮೌಷಧಸೇವಾ ಚ ಕ್ರಿಯತೇ ಯೇನ ರೋಗಿಣಾ ।**
**ಆರೋಗ್ಯಸಿದ್ಧಿರ್ದೃಷ್ಟಾಸ್ಯ ನಾನ್ಯಾನುಷ್ಠಿತ-ಕರ್ಮಣಾ ॥ ೫೩ ॥**

**ಯೇನ ರೋಗಿಣಾ**=ಯಾವ ರೋಗಿಯಿಂದ **ಪಥ್ಯಂ**=ಪಥ್ಯವು **ಔಷಧಸೇವಾ ಚ**=ಮತ್ತು ಔಷಧಸೇವನೆ **ಕ್ರಿಯತೇ**=ಮಾಡಲ್ಪಡುತ್ತದೆಯೊ **ಅಸ್ಯ**=ಇವನಿಗೇ **ಆರೋಗ್ಯಸಿದ್ಧಿಃ ದೃಷ್ಟಾ**=ಆರೋಗ್ಯಲಾಭವು ಕಂಡುಬರುತ್ತದೆ, **ಅನ್ಯ-ಅನುಷ್ಠಿತ-ಕರ್ಮಣಾ ನ**=ಇತರರಿಂದ ಆಚರಿಸಲ್ಪಟ್ಟ ಕರ್ಮದಿಂದಲ್ಲ.

೫೩. ಯಾವ ರೋಗಿಯು ಔಷಧಸೇವನೆ ಪಥ್ಯ ಇವುಗಳನ್ನು ಮಾಡುತ್ತಾನೆಯೊ ಅವನಿಗೇ ಆರೋಗ್ಯಲಾಭವು ಕಂಡುಬರುತ್ತದೆ, ಇತರರು ಮಾಡಿದ ಕೆಲಸದಿಂದಲ್ಲ.

**ವಸ್ತುಸ್ವರೂಪಂ ಸ್ಫುಟಬೋಧಚಕ್ಷುಷಾ**
**ಸ್ವೇನೈವ ವೇದ್ಯಂ ನ ತು ಪಂಡಿತೇನ ।**
**ಚಂದ್ರಸ್ವರೂಪಂ ನಿಜಚಕ್ಷುಷೈವ**
**ಜ್ಞಾತವ್ಯಮನ್ಯೈರವಗಮ್ಯತೇ ಕಿಮ್ ॥ ೫೪ ॥**

**ವಸ್ತುಸ್ವರೂಪಂ** = ವಸ್ತುವಿನ ಯಾಥಾತ್ಮ್ಯವು **ಸ್ಫುಟಬೋಧಚಕ್ಷುಷಾ** = ಸ್ಪಷ್ಟವಾದ ಜ್ಞಾನಚಕ್ಷುಸ್ಸಿನ ಮೂಲಕ **ಸ್ವೇನ ಏವ** = ತನ್ನಿಂದಲೇ **ವೇದ್ಯಂ** = ತಿಳಿಯಲ್ಪಡತಕ್ಕದ್ದು, **ನ ತು ಪಂಡಿತೇನ** = [ಮತ್ತೊಬ್ಬ] ಪಂಡಿತನಿಂದ ತಿಳಿಯಲಾಗುವುದಿಲ್ಲ; **ಚಂದ್ರಸ್ವರೂಪಂ** = ಚಂದ್ರನ ಸ್ವರೂಪವು **ನಿಜ-ಚಕ್ಷುಷಾ ಏವ** = ತನ್ನ ಕಣ್ಣಿನಿಂದಲೇ **ಜ್ಞಾತವ್ಯಂ** = ತಿಳಿಯಲ್ಪಡತಕ್ಕದ್ದು, **ಅನ್ಯೈಃ** = ಇತರರಿಂದ **ಅವಗಮ್ಯತೇ ಕಿಮ್** = ತಿಳಿಯಲ್ಪಡುತ್ತದೆಯೇ?

**೫೪.** ವಸ್ತುವಿನ ನಿಜವಾದ ಸ್ಥಿತಿಯನ್ನು ತಾನೇ ತನ್ನ ಶುದ್ಧವಾದ ಜ್ಞಾನಚಕ್ಷುಸ್ಸಿನಿಂದ[1] ಅರಿತುಕೊಳ್ಳಬೇಕು, ಮತ್ತೊಬ್ಬ ಪಂಡಿತನ ಮೂಲಕ ತಿಳಿಯಲಾಗುವುದಿಲ್ಲ. ಚಂದ್ರನ ಆಕಾರವನ್ನು ತನ್ನ ಕಣ್ಣಿನಿಂದಲೇ ತಿಳಿದುಕೊಳ್ಳಬೇಕು; ಇತರರ ಸಹಾಯದಿಂದ ತಿಳಿದುಕೊಳ್ಳಲು ಸಾಧ್ಯವೆ?

[[1] '.... ಯಾರು ಜ್ಞಾನಚಕ್ಷುಸ್ಸಿನಿಂದ ತಿಳಿದುಕೊಳ್ಳುತ್ತಾರೆಯೊ ಅವರು ಬ್ರಹ್ಮವನ್ನು ಹೊಂದುತ್ತಾರೆ' **ಕ್ಷೇತ್ರಕ್ಷೇತ್ರಜ್ಞಯೋರೇವಮಂತರಂ ಜ್ಞಾನ-ಚಕ್ಷುಷಾ । ಭೂತಪ್ರಕೃತಿಮೋಕ್ಷಂ ಚ ಯೇ ವಿದುರ್ಯಾಂತಿ ತೇ ಪರಮ್ ॥** ಎಂದು ಗೀತೆಯಲ್ಲಿ (೧೩. ೩೪) ಹೇಳಿದೆ. ಶಾಸ್ತ್ರಾಚಾರ್ಯರ ಉಪದೇಶದಿಂದ ತನ್ನ ಅನುಭವಕ್ಕೆ ಬಂದಿರುವ ಜ್ಞಾನವೇ ಚಕ್ಷುಸ್ಸು.]

**ಅವಿದ್ಯಾಕಾಮ-ಕರ್ಮಾದಿ-ಪಾಶಬಂಧಂ ವಿಮೋಚಿತುಮ್ ।**
**ಕಃ ಶಕ್ನುಯಾದ್ವಿನಾಽತ್ಮಾನಂ ಕಲ್ಪಕೋಟಿಶತೈರಪಿ ॥ ೫೫ ॥**

**ಆತ್ಮಾನಂ ವಿನಾ** = ತನ್ನನ್ನು ಬಿಟ್ಟರೆ **ಅವಿದ್ಯಾ-ಕಾಮ-ಕರ್ಮಾದಿ-ಪಾಶ-ಬಂಧಂ** = ಅವಿದ್ಯಾ-ಕಾಮ-ಕರ್ಮಗಳೇ ಮೊದಲಾದ ಪಾಶಗಳ ಬಂಧವನ್ನು **ವಿಮೋಚಿತುಂ** = ಬಿಡಿಸಿಕೊಳ್ಳುವುದಕ್ಕೆ **ಕಲ್ಪಕೋಟಿಶತೈರಪಿ** = ನೂರು ಕೋಟಿ ಕಲ್ಪಗಳಿಂದಲೂ **ಕಃ ಶಕ್ನುಯಾತ್** = ಯಾವನು ಶಕ್ತನಾದಾನು?

**೫೫.** ಅವಿದ್ಯಾ-ಕಾಮ-ಕರ್ಮಗಳೇ[೧] ಮೊದಲಾದ[೨] ಪಾಶಗಳ ಬಂಧದಿಂದ ಬಿಡಿಸಿಕೊಳ್ಳುವುದಕ್ಕೆ ತನ್ನನ್ನು ಬಿಟ್ಟರೆ ನೂರು ಕೋಟಿ ಕಲ್ಪಗಳ ಕಾಲದಲ್ಲಿಯೂ ಮತ್ತೆ ಯಾರಿಂದ ಸಾಧ್ಯವಾದೀತು?

[೧ ಆತ್ಮನನ್ನು ಅರಿಯದೆ ಇರುವುದರಿಂದ ಬಯಕೆಯುಂಟಾಗುತ್ತದೆ. ಬಯಕೆಯು ಕರ್ಮಕ್ಕೆ ಒಯ್ಯುತ್ತದೆ; ಹೀಗೆ ದುಃಖಗಳ ಪರಂಪರೆ ಅವಿದ್ಯಾ-ಕಾಮ-ಕರ್ಮಗಳ ಮೂಲಕ ಜೀವನಿಗೆ ಉಂಟಾಗುತ್ತದೆ.

೨ ಜನ್ಮ-ಜರಾ-ಮರಣ-ಸುಖ-ದುಃಖಾದಿಗಳು.]

**ನ ಯೋಗೇನ ನ ಸಾಂಖ್ಯೇನ ಕರ್ಮಣಾ ನೋ ನ ವಿದ್ಯಯಾ ।**
**ಬ್ರಹ್ಮಾತ್ಮೈಕತ್ವಬೋಧೇನ ಮೋಕ್ಷಃ ಸಿಧ್ಯತಿ ನಾನ್ಯಥಾ ॥ ೫೬ ॥**

**ಮೋಕ್ಷಃ** = ಮೋಕ್ಷವು **ಯೋಗೇನ ನ** = ಯೋಗದಿಂದ ಸಿದ್ಧಿಸುವುದಿಲ್ಲ, **ಸಾಂಖ್ಯೇನ** = ಸಾಂಖ್ಯದಿಂದ **ನ**, **ಕರ್ಮಣಾ** = ಕಾಮ್ಯಕರ್ಮದಿಂದ **ನ ಉ**, **ವಿದ್ಯಯಾ** = ವಿದ್ಯೆಯಿಂದ **ನ**; **ಬ್ರಹ್ಮ-ಆತ್ಮ-ಏಕತ್ವ-ಬೋಧೇನ** = ಜೀವಾತ್ಮ-ಪರಮಾತ್ಮರ ಅಭೇದಜ್ಞಾನದಿಂದಲೇ [ಮೋಕ್ಷವು] **ಸಿಧ್ಯತಿ** = ಸಿದ್ಧಿಸುವುದು, **ನ ಅನ್ಯಥಾ** = ಮತ್ತಾವುದರಿಂದಲೂ ಅಲ್ಲ.

**೫೬.** ಯೋಗದಿಂದಾಗಲಿ[೧] ಸಾಂಖ್ಯದಿಂದಾಗಲಿ[೨] ಕಾಮ್ಯಕರ್ಮದಿಂದಾಗಲಿ ವಿದ್ಯೆಯಿಂದಾಗಲಿ[೩] ಮೋಕ್ಷವು ಸಿದ್ಧಿಸುವುದಿಲ್ಲ; ಜೀವಾತ್ಮ-ಪರಮಾತ್ಮರ ಅಭೇದಜ್ಞಾನದಿಂದಲೇ ಮೋಕ್ಷವು ಸಿದ್ಧಿಸುವುದು, ಮತ್ತಾವುದರಿಂದಲೂ[೪] ಅಲ್ಲ.[೫]

[೧ ಹಠಯೋಗ ಮೊದಲಾದುವು.

೨ ಪ್ರಕೃತಿ-ಪುರುಷರು ಬೇರೆ ಬೇರೆ ಎಂಬ ವಿವೇಚನೆ.

೩ ಇತರರನ್ನು ಸೋಲಿಸಿ ತನ್ನ ಪಕ್ಷವನ್ನು ಸ್ಥಾಪಿಸುವುದು.

೪ ಉಪಾಸನಾದಿಗಳು.

೫ 'ಅವನನ್ನೇ ಅರಿತುಕೊಂಡು ಮೃತ್ಯುವನ್ನು ದಾಟುತ್ತಾನೆ. ಇದನ್ನು ದಾಟುವುದಕ್ಕೆ ಬೇರೆ ದಾರಿಯಿಲ್ಲ' **ತಮೇವ ವಿದಿತ್ವಾತಿಮೃತ್ಯುಮೇತಿ ನಾನ್ಯಃ ಪಂಥಾ ವಿದ್ಯತೇಽಯನಾಯ** ಎಂದು ಶ್ವೇತಾಶ್ವತರ-ಶ್ರುತಿಯು (೩. ೮) ಹೇಳುತ್ತದೆ.]

**ವೀಣಾಯಾ ರೂಪಸೌಂದರ್ಯಂ ತಂತ್ರೀವಾದನ-ಸೌಷ್ಠವಮ್ ।**
**ಪ್ರಜಾರಂಜನಮಾತ್ರಂ ತನ್ನ ಸಾಮ್ರಾಜ್ಯಾಯ ಕಲ್ಪತೇ ॥ ೫೭ ॥**

**ವೀಣಾಯಾಃ** = ವೀಣೆಯ **ರೂಪಸೌಂದರ್ಯಂ** = ರೂಪದ ಸೌಂದರ್ಯ, **ತಂತ್ರೀವಾದನ-ಸೌಷ್ಠವಮ್** = ತಂತಿಗಳ ವಾದನದ ಸೌಷ್ಠವ **ಪ್ರಜಾರಂಜನ-**

**ಮಾತ್ರಂ** = ಜನರ ಮನೋರಂಜನೆಗೆ ಮಾತ್ರವೇ, **ತತ್** = ಅದು **ಸಾಮ್ರಾಜ್ಯಾಯ** = ಸಾಮ್ರಾಜ್ಯಕ್ಕೆ **ನ ಕಲ್ಪತೇ** = ಯೋಗ್ಯವಾಗಲಾರದು.

**೫೭.** ಒಂದು ವೀಣೆಯ ರೂಪಸೌಂದರ್ಯ ಮತ್ತು ಅದರ ತಂತಿಗಳ ವಾದನದಿಂದ ಉಂಟಾಗುವ ಸೌಷ್ಠವ— ಇವುಗಳಿಂದ ಜನರ ಮನೋರಂಜನೆಗೆ ಅನುಕೂಲವಾಗುತ್ತದೆಯೇ ವಿನಾ ಸಾಮ್ರಾಜ್ಯಕ್ಕೆ[1] ಸಾಧನವಾಗುವುದಿಲ್ಲ.

[ಬ್ರಹ್ಮಾತ್ಮೈಕತ್ವ-ವಿಜ್ಞಾನದಿಂದ ಮೋಕ್ಷವು ಸಿದ್ಧಿಸುವುದೇ ವಿನಾ ಯೋಗವೇ ಮೊದಲಾದವುಗಳಿಂದಲ್ಲ ಎಂಬುದಕ್ಕೆ ಇಲ್ಲಿ ದೃಷ್ಟಾಂತವನ್ನು ಹೇಳಿದೆ.

[1] ಸಮ್ರಾಡ್-ಭಾವ ಅಥವಾ ಮೋಕ್ಷ.]

**ವಾಗ್ವೈಖರೀ ಶಬ್ದಝರೀ ಶಾಸ್ತ್ರವ್ಯಾಖ್ಯಾನ-ಕೌಶಲಮ್ ।**
**ವೈದುಷ್ಯಂ ವಿದುಷಾಂ ತದ್ವದ್ ಭುಕ್ತಯೇ ನ ತು**
**ಮುಕ್ತಯೇ ॥ ೫೮ ॥**

**ವಾಗ್ವೈಖರೀ** = ವಾಕ್ಕಿನ ವೈಖರಿ, **ಶಬ್ದಝರೀ** = ಶಬ್ದಗಳ ಪ್ರವಾಹ, **ಶಾಸ್ತ್ರ-ವ್ಯಾಖ್ಯಾನ-ಕೌಶಲಂ** = ಶಾಸ್ತ್ರಗಳ ವಿವರಣೆಯಲ್ಲಿ ಕೌಶಲ, **ತದ್ವತ್** = ಹಾಗೆಯೇ **ವಿದುಷಾಂ** = ವಿದ್ವಾಂಸರ **ವೈದುಷ್ಯಂ** = ಪಾಂಡಿತ್ಯ [ಇವು] **ಭುಕ್ತಯೇ** = ಭೋಗಕ್ಕಾಗಿ **ನ ತು ಮುಕ್ತಯೇ** = ಮುಕ್ತಿಗಾಗಿ ಅಲ್ಲ.

**೫೮.** ಪಂಡಿತರ ವಾಗ್ವೈಖರಿ, ಶಬ್ದಗಳ ಪ್ರವಾಹ, ಶಾಸ್ತ್ರವಿವರಣೆಯಲ್ಲಿ ಕೌಶಲ ಮತ್ತು ಪಾಂಡಿತ್ಯ— ಇವು ಭೋಗಕ್ಕೆ[1] ಸಾಧನವಾಗಬಲ್ಲವೇ ವಿನಾ ಮುಕ್ತಿಗೆ ಆಗಲಾರವು.

[ಹಿಂದೆ ಕೇವಲ ವೀಣಾಶ್ರವಣಮಾತ್ರದಿಂದ ಮನೋರಂಜನೆಯಾಗುವುದೇ ವಿನಾ ಮುಕ್ತಿಯು ಸಿದ್ಧಿಸುವುದಿಲ್ಲವೆಂದು ಹೇಳಿದ್ದಾಯಿತು. ಈಗ ಅರ್ಥದಿಂದಲೂ ಯಾವುದು ಮನೋರಂಜನೆಗೆ ಕಾರಣವಾಗಿದೆಯೊ ಅದು ಜ್ಞಾನವಿಲ್ಲದಿದ್ದರೆ ಮುಕ್ತಿಗೆ ಸಾಧನವಾಗಲಾರದು ಎಂದು ಹೇಳಿದೆ.

[1] ಕುಟುಂಬಭರಣ.]

**ಅವಿಜ್ಞಾತೇ ಪರೇ ತತ್ತ್ವೇ ಶಾಸ್ತ್ರಾಧೀತಿಸ್ತು ನಿಷ್ಫಲಾ ।**
**ವಿಜ್ಞಾತೇಽಪಿ ಪರೇ ತತ್ತ್ವೇ ಶಾಸ್ತ್ರಾಧೀತಿಸ್ತು ನಿಷ್ಫಲಾ ॥ ೫೯ ॥**

**ಪರೇ ತತ್ತ್ವೇ** = ಪರತತ್ತ್ವವು **ಅವಿಜ್ಞಾತೇ ತು** = ತಿಳಿಯಲ್ಪಡದೆ ಇರಲು **ಶಾಸ್ತ್ರಾಧೀತಿಃ** = ಶಾಸ್ತ್ರಾಧ್ಯಯನವು **ನಿಷ್ಫಲಾ** = ನಿಷ್ಫಲವು, **ಪರೇ ತತ್ತ್ವೇ** = ಪರತತ್ತ್ವವು **ವಿಜ್ಞಾತೇ ಅಪಿ** = ತಿಳಿಯಲ್ಪಟ್ಟರೂ **ಶಾಸ್ತ್ರಾಧೀತಿಃ ತು ನಿಷ್ಫಲಾ.**

**೫೯.** ಪರತತ್ತ್ವವನ್ನು ತಿಳಿದುಕೊಳ್ಳದಿದ್ದರೆ ಶಾಸ್ತ್ರಾಧ್ಯಯನವು ನಿಷ್ಫಲವು, ಪರತತ್ತ್ವವನ್ನು ತಿಳಿದುಕೊಂಡರೂ ಶಾಸ್ತ್ರಾಧ್ಯಯನವು ನಿಷ್ಫಲವು.

[ಅವಿದ್ಯೆಯಲ್ಲಿರುವಾಗ ಲೌಕಿಕ-ಪಂಡಿತನ ಶಾಸ್ತ್ರಾಧ್ಯಯನವು ನಿಷ್ಫಲವಾಗಿರುವಂತೆ ಜ್ಞಾನವನ್ನು ಪಡೆದ ಪಂಡಿತನ ಶಾಸ್ತ್ರಾಧ್ಯಯನವೂ ನಿಷ್ಫಲವೇ.]

**ಶಬ್ದಜಾಲಂ ಮಹಾರಣ್ಯಂ ಚಿತ್ತಭ್ರಮಣಕಾರಣಮ್ ।**
**ಅತಃ ಪ್ರಯತ್ನಾಜ್ಜ್ಞಾತವ್ಯಂ ತತ್ತ್ವಜ್ಞಾತ್ತತ್ತ್ವಮಾತ್ಮನಃ ॥ ೬೦ ॥**

**ಶಬ್ದಜಾಲಂ** = ಶಬ್ದಗಳ ಗುಂಪು **ಮಹಾರಣ್ಯಂ** = ಮಹಾರಣ್ಯದಂತಿರುವುದು, [ಆದುದರಿಂದಲೇ] **ಚಿತ್ತಭ್ರಮಣಕಾರಣಂ** = ಮನಸ್ಸಿನ ಭ್ರಾಂತಿಗೆ ಕಾರಣವು; **ಅತಃ** = ಆದುದರಿಂದ **ಪ್ರಯತ್ನಾತ್** = ಪ್ರಯತ್ನಪೂರ್ವಕವಾಗಿ **ತತ್ತ್ವಜ್ಞಾತ್** = ತತ್ತ್ವಜ್ಞಾನಿಯಿಂದ **ಆತ್ಮನಃ ತತ್ತ್ವಂ** = ಆತ್ಮತತ್ತ್ವವನ್ನು **ಜ್ಞಾತವ್ಯಂ** = ಅರಿತುಕೊಳ್ಳಬೇಕು.

**೬೦.** ಶಾಸ್ತ್ರಗಳ ಶಬ್ದಸಮೂಹವು ಒಂದು ದೊಡ್ಡ ಅರಣ್ಯದಂತಿರುವುದರಿಂದ ಮನಸ್ಸಿನ ಭ್ರಾಂತಿಗೆ ಕಾರಣವಾಗಿದೆ; ಆದುದರಿಂದ ಆತ್ಮಜ್ಞಾನಿಯಿಂದ ಆತ್ಮತತ್ತ್ವವನ್ನು ಪ್ರಯತ್ನಪೂರ್ವಕವಾಗಿ ಅರಿತುಕೊಳ್ಳಬೇಕು.

[ವಿಚಾರಮಾಡದ ಶಾಸ್ತ್ರಗಳ ಪದಗಳನ್ನೂ ಪದಾರ್ಥಗಳನ್ನೂ ಗ್ರಹಿಸಿದರೆ ಅದು ಒಂದು ಮಹಾರಣ್ಯದಂತಾಗಿ ಪುರುಷಾರ್ಥದಿಂದ ಭ್ರಷ್ಟನಾಗಲು ಕಾರಣವಾಗುತ್ತದೆ.]

**ಅಜ್ಞಾನಸರ್ಪ-ದಷ್ಟಸ್ಯ ಬ್ರಹ್ಮಜ್ಞಾನೌಷಧಂ ವಿನಾ ।**
**ಕಿಮು ವೇದೈಶ್ಚ ಶಾಸ್ತ್ರೈಶ್ಚ ಕಿಮು ಮಂತ್ರೈಃ ಕಿಮೌಷಧೈಃ ॥ ೬೧ ॥**

**ಅಜ್ಞಾನಸರ್ಪ-ದಷ್ಟಸ್ಯ** = ಅವಿದ್ಯೆಯೆಂಬ ಹಾವಿನಿಂದ ಕಚ್ಚಲ್ಪಟ್ಟವನಿಗೆ **ಬ್ರಹ್ಮಜ್ಞಾನ-ಔಷಧಂ ವಿನಾ** = ಬ್ರಹ್ಮಜ್ಞಾನವೆಂಬ ಔಷಧವಲ್ಲದೆ **ವೇದೈಃ ಚ ಕಿಮು** = ವೇದಗಳಿಂದೇನಾದೀತು? **ಶಾಸ್ತ್ರೈಃ ಚ ಕಿಮು** = ಶಾಸ್ತ್ರಗಳಿಂದೇನಾದೀತು? **ಮಂತ್ರೈಃ** [**ಕಿಮು**] = ಮಂತ್ರಗಳಿಂದೇನಾದೀತು? **ಔಷಧೈಃ ಕಿಂ** = ಔಷಧಗಳಿಂದೇನಾದೀತು?

**೬೧.** ಅವಿದ್ಯೆಯೆಂಬ ಹಾವಿನಿಂದ ಕಚ್ಚಲ್ಪಟ್ಟವನಿಗೆ ಬ್ರಹ್ಮಜ್ಞಾನವೆಂಬ ಔಷಧವನ್ನು ಬಿಟ್ಟರೆ ವೇದಗಳಿಂದಲೂ ಶಾಸ್ತ್ರಗಳಿಂದಲೂ ಏನು ಪ್ರಯೋಜನ? ಮಂತ್ರಗಳಿಂದಲೂ ಔಷಧಗಳಿಂದಲೂ ಏನು ಪ್ರಯೋಜನ?

[ಅವಿದ್ಯೆಯನ್ನು ತೊಲಗಿಸಲು ಜ್ಞಾನವೇ ಶಕ್ತವಾಗಿರುವುದಲ್ಲದೆ ಮತ್ತೆ ಯಾವುದೂ ಅಲ್ಲ ಎಂದರ್ಥ.]

**ನ ಗಚ್ಛತಿ ವಿನಾ ಪಾನಂ ವ್ಯಾಧಿರೌಷಧ-ಶಬ್ದತಃ ।**
**ವಿನಾಽಪರೋಕ್ಷಾನುಭವಂ ಬ್ರಹ್ಮಶಬ್ದೈರ್ನ ಮುಚ್ಯತೇ ॥ ೬೨ ॥**

**ವ್ಯಾಧಿಃ** = ರೋಗವು **ಪಾನಂ ವಿನಾ** = ಕುಡಿಯದಿದ್ದರೆ **ಔಷಧ-ಶಬ್ದತಃ** = ಔಷಧ ಎಂಬ ಹೆಸರಿನಿಂದ **ನ ಗಚ್ಛತಿ** = ಹೋಗುವುದಿಲ್ಲ; **ಅಪರೋಕ್ಷಾನುಭವಂ ವಿನಾ** = ಸಾಕ್ಷಾತ್ಕಾರವಿಲ್ಲದೆ **ಬ್ರಹ್ಮಶಬ್ದೈಃ** = ಬ್ರಹ್ಮ ಮೊದಲಾದ ಹೆಸರುಗಳಿಂದ **ನ ಮುಚ್ಯತೇ** = ಮುಕ್ತನಾಗುವುದಿಲ್ಲ.

**೬೨.** ಔಷಧವನ್ನು ಕುಡಿಯದೆ ಕೇವಲ 'ಔಷಧ' ಎಂಬ ಹೆಸರನ್ನು ಹೇಳಿದರೆ ರೋಗವು ಹೋಗದು; (ಹೀಗೆಯೇ) ಬ್ರಹ್ಮಸಾಕ್ಷಾತ್ಕಾರವಾಗದೆ 'ಬ್ರಹ್ಮ' ಮೊದಲಾದ ಹೆಸರುಗಳನ್ನು ಹೇಳಿದಮಾತ್ರದಿಂದ ಮುಕ್ತನಾಗುವುದಿಲ್ಲ.

[ಕೇವಲ ಶಬ್ದವು ಮೋಕ್ಷಕ್ಕೆ ಕಾರಣವಲ್ಲ ಎಂಬುದಕ್ಕೆ ದೃಷ್ಟಾಂತವನ್ನು ಹೇಳಿದೆ.]

**ಅಕೃತ್ವಾ ದೃಶ್ಯವಿಲಯಮಜ್ಞಾತ್ವಾ ತತ್ತ್ವಮಾತ್ಮನಃ ।**
**ಬಾಹ್ಯಶಬ್ದೈಃ ಕುತೋ ಮುಕ್ತಿರುಕ್ತಿಮಾತ್ರ**
**ಫಲೈರ್ನೃಣಾಮ್ ॥ ೬೩ ॥**

**ದೃಶ್ಯವಿಲಯಂ**=ದೃಶ್ಯವಸ್ತುಗಳ ಲಯವನ್ನು **ಅಕೃತ್ವಾ** = ಮಾಡದ **ಆತ್ಮನಃ ತತ್ತ್ವಂ** = ಆತ್ಮತತ್ತ್ವವನ್ನು **ಅಜ್ಞಾತ್ವಾ** = ತಿಳಿಯದ **ಉಕ್ತಿಮಾತ್ರಫಲೈಃ** = ಉಚ್ಚಾರಣಮಾತ್ರವೇ ಫಲವಾಗಿರುವ **ಬಾಹ್ಯಶಬ್ದೈಃ** = ಹೊರಗಿನ ಶಬ್ದಗಳಿಂದ **ನೃಣಾಂ** = ಮನುಷ್ಯರಿಗೆ **ಮುಕ್ತಿಃ ಕುತಃ** = ಮುಕ್ತಿಯು ಎಲ್ಲಿಂದ ಬರುವುದು?

**೬೩.** ದೃಶ್ಯವಸ್ತುಗಳ ಲಯವನ್ನು[೧] ಮಾಡದೆ, ಆತ್ಮತತ್ತ್ವವನ್ನು ತಿಳಿದುಕೊಳ್ಳದೆ ಉಚ್ಚಾರಣಮಾತ್ರವೇ ಫಲವಾಗಿರುವ[೨] ಹೊರಗಿನ ಶಬ್ದಗಳಿಂದ ಮುಕ್ತಿಯು ಹೇಗಾಗುವುದು?

[[೧] ಇಂದ್ರಿಯವೇದ್ಯವಾದ ಸಮಸ್ತ ವಿಷಯಗಳೂ ಅನಾತ್ಮವು ಎಂಬ ಭಾವನೆಯಿಂದ ಚಿತ್ತವೃತ್ತಿಗಳೆಲ್ಲವನ್ನೂ ಅಂತರಾತ್ಮನ ಕಡೆಗೆ ತಿರುಗಿಸಿ ದೃಗ್ರೂಪನಾದ ಆತ್ಮನೇ ಸತ್ಯನು, ದೃಶ್ಯಜಗತ್ತೆಲ್ಲವೂ ಮಿಥ್ಯೆ ಎಂಬ ಅನುಭವ.
[೨] ಸುಮ್ಮನೆ ಅಹಂ ಬ್ರಹ್ಮಾಸ್ಮಿ, ಅಹಂ ಬ್ರಹ್ಮಾಸ್ಮಿ ಎಂದು ಕಂಠಶೋಷಣೆ ಮಾಡಿಕೊಳ್ಳುವುದು.]

**ಅಕೃತ್ವಾ ಶತ್ರುಸಂಹಾರಮಗತ್ವಾಽಖಿಲಭೂಶ್ರಿಯಮ್ ।**
**ರಾಜಾಽಹಮಿತಿ ಶಬ್ದಾನ್ನೋ ರಾಜಾ ಭವಿತುಮರ್ಹತಿ ॥ ೬೪ ॥**

**ಶತ್ರುಸಂಹಾರಂ** = ಶತ್ರುಗಳ ಸಂಹಾರವನ್ನು **ಅಕೃತ್ವಾ** = ಮಾಡದೆ, **ಅಖಿಲ-ಭೂಶ್ರಿಯಂ** = ಸಮಸ್ತವಾದ ರಾಜ್ಯಲಕ್ಷ್ಮಿಯನ್ನು **ಅಗತ್ವಾ** = ಪಡೆಯದೆ, **ಅಹಂ ರಾಜಾ ಇತಿ** = ನಾನು ರಾಜನು ಎಂಬ **ಶಬ್ದಾತ್** = ಹೆಸರು ಮಾತ್ರದಿಂದ **ರಾಜಾ ಭವಿತುಂ** = ರಾಜನಾಗಲು **ನ ಉ ಅರ್ಹತಿ** = ಅರ್ಹನಾಗುವುದಿಲ್ಲ.

**೬೪.** ಶತ್ರುಗಳನ್ನು ಸಂಹರಿಸದೆ, ಸಮಸ್ತ ರಾಜ್ಯಲಕ್ಷ್ಮಿಯನ್ನು ಪಡೆಯದೆ 'ನಾನು ರಾಜನು' ಎಂದು ಹೇಳಿಕೊಳ್ಳುವುದರಿಂದಲೇ ಅವನು ರಾಜನಾಗಲು ಅರ್ಹನಾಗುವುದಿಲ್ಲ.

[ವಿಷಯಗಳೆಂಬ ಶತ್ರುಗಳನ್ನು ಗೆಲ್ಲದೆ ಬ್ರಹ್ಮಸಾಕ್ಷಾತ್ಕಾರವನ್ನು ಪಡೆಯದೆ **ಅಹಂ ಬ್ರಹ್ಮಾಸ್ಮಿ** ಎಂದು ಹೇಳಿಕೊಂಡಮಾತ್ರದಿಂದಲೇ ಬ್ರಹ್ಮಜ್ಞಾನಿಯಾಗಲಾರನು.]

**ಆಪ್ತೋಕ್ತಿಂ ಖನನಂ ತಥೋಪರಿಶಿಲಾದ್ಯುತ್ಕರ್ಷಣಂ ಸ್ವೀಕೃತಿಮ್ ।**
**ನಿಕ್ಷೇಪಃ ಸಮಪೇಕ್ಷತೇ ನ ಹಿ ಬಹಿಃ ಶಬ್ದೈಸ್ತು ನಿರ್ಗಚ್ಛತಿ ॥**
**ತದ್ವದ್ಬ್ರಹ್ಮವಿದೋಪದೇಶ-ಮನನ-ಧ್ಯಾನಾದಿಭಿರ್ಲಭ್ಯತೇ ।**
**ಮಾಯಾಕಾರ್ಯ-ತಿರೋಹಿತಂ ಸ್ವಮಮಲಂ ತತ್ತ್ವಂ ನ**
**ದುರ್ಯುಕ್ತಿಭಿಃ ॥ ೬೫ ॥**

**ನಿಕ್ಷೇಪಃ** = ಭೂಮಿಯಲ್ಲಿ ಹೂತಿಟ್ಟಿರುವ ಧನವು **ಆಪ್ತೋಕ್ತಿಂ** = ಆಪ್ತರ ವಾಕ್ಯವನ್ನೂ **ಖನನಂ** = ಅಗೆಯುವುದನ್ನೂ **ತಥಾ** = ಹಾಗೆಯೇ **ಉಪರಿ-ಶಿಲಾದಿ-ಉತ್ಕರ್ಷಣಂ** = ಮೇಲಿರುವ ಕಲ್ಲು ಮೊದಲಾದುವುಗಳ ತೆಗೆಯುವಿಕೆಯನ್ನೂ **ಸ್ವೀಕೃತಿಂ** = ಕೈಯಲ್ಲಿ ತೆಗೆದುಕೊಳ್ಳುವುದನ್ನೂ **ಸಮಪೇಕ್ಷತೇ** = ಅಪೇಕ್ಷಿಸುತ್ತದೆ; **ತು** = ಆದರೆ **ಶಬ್ದೈಃ** = ಶಬ್ದಗಳಿಂದಲೇ **ಬಹಿಃ ನ ಹಿ ನಿರ್ಗಚ್ಛತಿ** = ಹೊರಗೆ ಬರುವುದೇ ಇಲ್ಲ; **ತದ್ವತ್** = ಹಾಗೆಯೇ **ಬ್ರಹ್ಮವಿದೋಪದೇಶ-ಮನನ-ಧ್ಯಾನಾದಿಭಿಃ** = ಬ್ರಹ್ಮಜ್ಞಾನಿಯ ಉಪದೇಶ, ಮನನ ಧ್ಯಾನ ಮೊದಲಾದುವುಗಳಿಂದ **ಮಾಯಾಕಾರ್ಯ-ತಿರೋಹಿತಂ** = ಮಾಯೆಯ ಕಾರ್ಯದಿಂದ ಮುಚ್ಚಲ್ಪಟ್ಟ **ಸ್ವಂ** = ತನ್ನದಾದ **ಅಮಲಂ** = ವಿಮಲವಾದ **ತತ್ತ್ವಂ** = ತತ್ತ್ವವು **ಲಭ್ಯತೇ** = ಹೊಂದಲ್ಪಡುತ್ತದೆ, **ದುರ್ಯುಕ್ತಿಭಿಃ** = ಕುತರ್ಕಗಳಿಂದ **ನ** = ಅಲ್ಲ.

**೬೫.** ಆಪ್ತವಾಕ್ಯ, ಅಗೆಯುವುದು, ಮೇಲಿರುವ ಕಲ್ಲು ಮಣ್ಣು ಮೊದಲಾದುವನ್ನು ತೆಗೆಯುವುದು, ಕೈಯಲ್ಲಿ ತೆಗೆದುಕೊಳ್ಳುವುದು— ಇವುಗಳಿಂದ ನಿಧಿಯನ್ನು ಹೊರಕ್ಕೆ ತರಬಹುದು, ಬರಿಯ ಮಾತುಗಳಿಂದ ಹೊರಕ್ಕೆ ಬರುವುದಿಲ್ಲ.[೧] ಹೀಗೆಯೇ ಬ್ರಹ್ಮಜ್ಞಾನಿಯು ಮಾಡಿದ ಉಪದೇಶ, ಅದರ (ಶ್ರವಣ)-ಮನನ-ಧ್ಯಾನ ಮೊದಲಾದುವುಗಳಿಂದಲೇ[೨] ಮಾಯೆಯ ಕಾರ್ಯದಿಂದ ಮುಚ್ಚಲ್ಪಟ್ಟ ತನ್ನದೇ ಆಗಿರುವ ವಿಮಲವಾದ ತತ್ತ್ವವು ಪ್ರಾಪ್ತವಾಗುವುದಲ್ಲದೆ ಕುತರ್ಕಗಳಿಂದ ಪ್ರಾಪ್ತವಾಗಲಾರದು.

[[೧] ಮನುಷ್ಯನು ನಿಧಿಯಮೇಲೆ ನಡೆಯುತ್ತಿದ್ದರೂ ಅದು ಒಳಗಿರುವುದನ್ನು ಅರಿಯದಿರುವುದರಿಂದ ಅದನ್ನು ಅಗೆದು ತೆಗೆದುಕೊಳ್ಳಲು ಪ್ರವೃತ್ತಿಯಿರುವುದಿಲ್ಲ. 'ನಿಧಿಕ್ಷೇತ್ರ

2

ವನ್ನು ಅರಿಯದವರು ಪುನಃ ಪುನಃ ನೆಲದಲ್ಲಿ ಅಡಗಿರುವ ನಿಧಿಯ ಮೇಲೆಯೇ ನಡೆಯುತ್ತಿದ್ದರೂ ಅದನ್ನು ಹೇಗೆ ಪಡೆಯುವುದಿಲ್ಲವೊ . . . ' **ಯಥಾಽಪಿ ಹಿರಣ್ಯನಿಧಿಂ ನಿಹಿತಮಕ್ಷೇತ್ರಜ್ಞಾ ಉಪರ್ಯುಪರಿ ಸಂಚರಂತೋ ನ ವಿಂದೇಯುಃ** ಎಂದು ಛಾಂದೋಗ್ಯೋಪನಿಷತ್ತು (೮, ೩, ೨) ಹೇಳುತ್ತದೆ.

೨ 'ಆತ್ಮನನ್ನು ನೋಡಬೇಕು, ಶ್ರವಣಮಾಡಬೇಕು, ಮನನಮಾಡಬೇಕು, ನಿದಿಧ್ಯಾಸನಮಾಡಬೇಕು' **ಆತ್ಮಾ ವಾ ಅರೇ ದ್ರಷ್ಟವ್ಯಃ ಶ್ರೋತವ್ಯೋ ಮಂತವ್ಯೋ ನಿದಿಧ್ಯಾಸಿತವ್ಯಃ** (ಬೃಹದಾರಣ್ಯಕ ಉ. ೨. ೪. ೫).]

**ತಸ್ಮಾತ್ ಸರ್ವಪ್ರಯತ್ನೇನ ಭವಬಂಧ-ವಿಮುಕ್ತಯೇ ।**
**ಸ್ವೈರೇವ ಯತ್ನಃ ಕರ್ತವ್ಯೋ ರೋಗಾದಾವಿವ ಪಂಡಿತೈಃ ॥ ೬೬ ॥**

**ತಸ್ಮಾತ್** = ಆದುದರಿಂದ. **ಸರ್ವಪ್ರಯತ್ನೇನ** = ಸರ್ವಪ್ರಯತ್ನದಿಂದಲೂ **ಭವಬಂಧ-ವಿಮುಕ್ತಯೇ** = ಸಂಸಾರವೆಂಬ ಬಂಧದ ಬಿಡುಗಡೆಗಾಗಿ **ರೋಗಾದೌ ಇವ** = ರೋಗ ಮೊದಲಾದುವುಗಳಲ್ಲಿ ಹೇಗೋ ಹಾಗೆ **ಪಂಡಿತೈಃ ಸ್ವೈಃ ಏವ** = ಪಂಡಿತರಾದ ತಮ್ಮಿಂದಲೇ **ಯತ್ನಃ** = ಯತ್ನವು **ಕರ್ತವ್ಯಃ** = ಮಾಡಲ್ಪಡತಕ್ಕದ್ದು.

**೬೬.** ಆದಕಾರಣ ಪಂಡಿತರಾದವರು ರೋಗಾದಿಗಳು ಬಂದೊದಗಿದಾಗ ಹೇಗೆ ಬಿಡಿಸಿಕೊಳ್ಳಲು ಯತ್ನಿಸುವರೊ ಹಾಗೆಯೇ ಸರ್ವಪ್ರಯತ್ನದಿಂದಲೂ ಸಂಸಾರಬಂಧದಿಂದ ಬಿಡಿಸಿಕೊಳ್ಳಲು ತಾವೇ ಯತ್ನವನ್ನು ಮಾಡಬೇಕು.

**ಯಸ್ತ್ವಯಾಽದ್ಯ ಕೃತಃ ಪ್ರಶ್ನೋ ವರೀಯಾಂಛಾಸ್ತ್ರವಿನ್ಮತಃ।**
**ಸೂತ್ರಪ್ರಾಯೋ ನಿಗೂಢಾರ್ಥೋ ಜ್ಞಾತವ್ಯಶ್ಚ ಮುಮುಕ್ಷುಭಿಃ**
**॥ ೬೭ ॥**

**ಅದ್ಯ** = ಇಂದು **ತ್ವಯಾ** = ನಿನ್ನಿಂದ **ಯಃ** = ಯಾವ **ಪ್ರಶ್ನಃ** = ಪ್ರಶ್ನೆಯು **ಕೃತಃ** = ಮಾಡಲ್ಪಟ್ಟಿತೊ [ಅದು] **ವರೀಯಾನ್** = ಶ್ರೇಷ್ಠವಾದುದು, **ಶಾಸ್ತ್ರವಿತ್-ಮತಃ**=ಶಾಸ್ತ್ರಜ್ಞರಿಗೆ ಸಂಮತವಾದುದು, **ಸೂತ್ರಪ್ರಾಯಃ**=ಸೂತ್ರಸದೃಶವಾದುದು, **ನಿಗೂಢಾರ್ಥಃ** = ಗಂಭೀರವಾದ ಅರ್ಥವುಳ್ಳದ್ದು, **ಮುಮುಕ್ಷುಭಿಃ ಚ** = ಮತ್ತು ಮುಮುಕ್ಷುಗಳಿಂದ **ಜ್ಞಾತವ್ಯಃ** = ತಿಳಿಯಲ್ಪಡತಕ್ಕದ್ದು.

**೬೭.** ಎಲೈ ಶಿಷ್ಯನೆ, ಇಂದು ನೀನು ಮಾಡಿದ ಪ್ರಶ್ನೆಯು ಶ್ರೇಷ್ಠವಾದುದು, ಶಾಸ್ತ್ರಜ್ಞರಿಗೆ ಸಮ್ಮತವಾದುದು, ಸೂತ್ರಸದೃಶವಾದುದು, ಗಂಭೀರವಾದ ಅರ್ಥವುಳ್ಳದ್ದು ಮತ್ತು ಮುಮುಕ್ಷುಗಳಿಂದ ತಿಳಿಯಲ್ಪಡತಕ್ಕದ್ದು.

**ಶೃಣುಷ್ವಾವಹಿತೋ ವಿದ್ವನ್ ಯನ್ಮಯಾ ಸಮುದೀರ್ಯತೇ ।**
**ತದೇತಚ್ಛ್ರವಣಾತ್ ಸದ್ಯೋ ಭವಬಂಧಾದ್ವಿಮೋಕ್ಷ್ಯಸೇ ॥ ೬೮ ॥**

**ವಿದ್ವನ್, ಯತ್** = ಯಾವುದು **ಮಯಾ** = ನನ್ನಿಂದ **ಸಮುದೀರ್ಯತೇ** = ಹೇಳಲ್ಪಡುತ್ತದೆಯೊ **ತತ್** = ಅದನ್ನು **ಅವಹಿತಃ** = ಸಾವಧಾನಮನಸ್ಕನಾಗಿ **ಶೃಣುಷ್ವ** = ಕೇಳು; **ಏತತ್-ಶ್ರವಣಾತ್** = ಇದನ್ನು ಕೇಳುವುದರಿಂದ **ಭವಬಂಧಾತ್** = ಸಂಸಾರ ಬಂಧದಿಂದ **ಸದ್ಯಃ** = ಕೂಡಲೇ **ವಿಮೋಕ್ಷ್ಯಸೇ** = ಬಿಡುಗಡೆಯನ್ನು ಹೊಂದುತ್ತೀಯೆ.

**೬೮.** ಎಲೈ ಶಿಷ್ಯನೆ, ನಾನು ಯಾವುದನ್ನು ಹೇಳುತ್ತೇನೆಯೊ ಅದನ್ನು ಸಾವಧಾನಮನಸ್ಕನಾಗಿ ಕೇಳು. ಇದನ್ನು ಕೇಳಿದರೆ ಸಂಸಾರಬಂಧದಿಂದ ಕೂಡಲೇ ಬಿಡುಗಡೆಯನ್ನು ಹೊಂದುತ್ತೀಯೆ.

**ಮೋಕ್ಷಸ್ಯ ಹೇತುಃ ಪ್ರಥಮೋ ನಿಗದ್ಯತೇ**
**ವೈರಾಗ್ಯಮತ್ಯಂತಮನಿತ್ಯ-ವಸ್ತುಷು ।**
**ತತಃ ಶಮಶ್ಚಾಪಿ ದಮಸ್ತಿತಿಕ್ಷಾ**
**ನ್ಯಾಸಃ ಪ್ರಸಕ್ತಾಖಿಲಕರ್ಮಣಾಂ ಭೃಶಮ್ ॥ ೬೯ ॥**

**ಅನಿತ್ಯ-ವಸ್ತುಷು** = ಅಶಾಶ್ವತ ವಸ್ತುಗಳಲ್ಲಿ **ಅತ್ಯಂತಂ ವೈರಾಗ್ಯಂ** = ಅತ್ಯಂತ ವೈರಾಗ್ಯವೇ **ಮೋಕ್ಷಸ್ಯ** = ಮೋಕ್ಷಕ್ಕೆ **ಪ್ರಥಮಃ ಹೇತುಃ** = ಮೊದಲನೆಯ ಹೆಜ್ಜೆ ಯೆಂದು **ನಿಗದ್ಯತೇ** = ಹೇಳಲ್ಪಡುತ್ತದೆ; **ತತಃ** = ಅನಂತರ **ಶಮಃ** = ಶಮವು **ಅಪಿ ಚ ದಮಃ** = ಮತ್ತು ದಮವು **ತಿತಿಕ್ಷಾ** = ತಿತಿಕ್ಷೆಯು **ಪ್ರಸಕ್ತ-ಅಖಿಲ-ಕರ್ಮಣಾಂ** = ಪ್ರಾಪ್ತವಾದ ಸಮಸ್ತ ಕರ್ಮಗಳನ್ನು **ಭೃಶಮ್** = ಅತ್ಯಂತವಾಗಿ **ನ್ಯಾಸಃ** = ಬಿಡುವುದು.

**೬೯.** ಅಶಾಶ್ವತವಾದ ವಸ್ತುಗಳಲ್ಲಿ ಅತ್ಯಂತ ವೈರಾಗ್ಯವೇ ಮೋಕ್ಷಕ್ಕೆ ಮೊದಲನೆಯ ಹೆಜ್ಜೆ. ಶಮ, ದಮ, ತಿತಿಕ್ಷೆ[1] ಮತ್ತು ಪ್ರಾಪ್ತವಾಗಿರುವ ಸಮಸ್ತ ಕರ್ಮಗಳ[2] ಸಂಪೂರ್ಣತ್ಯಾಗ—ಇವು ಅನಂತರದ ಸಾಧನಗಳಾಗಿರುತ್ತವೆ.

[[1] ಈ ನಾಲ್ಕು ಸಾಧನಗಳ ಲಕ್ಷಣಗಳನ್ನು ೨೦–೨೪ ಶ್ಲೋಕಗಳಲ್ಲಿ ಹೇಳಿದೆ.
[2] ಶಾಸ್ತ್ರವಿಹಿತವಾದ ಶುಭಕರ್ಮಗಳ ಮತ್ತು ಸ್ವಭಾವತಃ ಪ್ರಾಪ್ತವಾದ ಅಶುಭ-ಕರ್ಮಗಳ.]

**ತತಃ ಶ್ರುತಿಸ್ತನ್ಮನನಂ ಸತತ್ತ್ವ-**
**ಧ್ಯಾನಂ ಚಿರಂ ನಿತ್ಯನಿರಂತರಂ ಮುನೇಃ ।**
**ತತೋಽವಿಕಲ್ಪಂ ಪರಮೇತ್ಯ ವಿದ್ವಾನ್**
**ಇಹೈವ ನಿರ್ವಾಣಸುಖಂ ಸಮೃಚ್ಛತಿ ॥ ೭೦ ॥**

**ತತಃ** = ಅನಂತರ **ಶ್ರುತಿಃ**=ವೇದಾಂತವಾಕ್ಯಶ್ರವಣ, **ತತ್-ಮನನಂ**=ಅದರ ಮನನ, **ಚಿರಂ**= ಸತತವಾದ **ನಿತ್ಯನಿರಂತರಂ**= ನಿತ್ಯವೂ ನಿರಂತರವೂ ಆದ **ಸತತ್ತ್ವ-ಧ್ಯಾನಂ**= ಆತ್ಮೈಕ್ಯಚಿಂತನ— **ಮುನೇಃ**= ಮುನಿಗೆ [ಸಾಧನಗಳಾಗಿವೆ]; **ತತಃ**= ಅನಂತರ **ಪರಮ್ ಅವಿಕಲ್ಪಂ**=ಪರಮ-ನಿರ್ವಿಕಲ್ಪ ಸಮಾಧಿಯನ್ನು **ಏತ್ಯ**=ಹೊಂದಿ **ವಿದ್ವಾನ್**= ವಿದ್ವಾಂಸನು **ಇಹ ಏವ**= ಇಲ್ಲಿಯೇ **ನಿರ್ವಾಣಸುಖಂ**= ನಿರ್ವಾಣ ಸುಖವನ್ನು **ಸಮೃಚ್ಛತಿ**= ಹೊಂದುತ್ತಾನೆ.

**೭೦.** ಅನಂತರ ವೇದಾಂತವಾಕ್ಯಗಳ ಶ್ರವಣ, ಆ ವಾಕ್ಯಾರ್ಥಗಳ ಮನನ ಮತ್ತು ನಿತ್ಯವೂ ನಿರಂತರವೂ ಮಾಡುವ ಸತತವಾದ ಆತ್ಮೈಕ್ಯ ಚಿಂತನ— ಇವು ಮುನಿಗೆ ಸಾಧನಗಳಾಗಿವೆ. ಅನಂತರ ವಿದ್ವಾಂಸನು ಪರಮ-ನಿರ್ವಿಕಲ್ಪಸಮಾಧಿಯನ್ನು ಪಡೆದು ಬದುಕಿರುವಾಗಲೇ[೧] ನಿರ್ವಾಣಸುಖ ವನ್ನು ಹೊಂದುತ್ತಾನೆ.

[೧'ಇಲ್ಲಿಯೇ ಬ್ರಹ್ಮವನ್ನು ಹೊಂದುತ್ತಾನೆ' **ಅತ್ರ ಬ್ರಹ್ಮ ಸಮಶ್ನುತೇ** ಎಂದು ಕಠ-ಶ್ರುತಿಯು (೨. ೬. ೧೪) ಹೇಳುತ್ತದೆ.]

**ಯದ್ಬೋದ್ಧವ್ಯಂ ತವೇದಾನೀಮಾತ್ಮಾನಾತ್ಮ-ವಿವೇಚನಮ್ ।**
**ತದುಚ್ಯತೇ ಮಯಾ ಸಮ್ಯಕ್ ಶ್ರುತ್ವಾಽಽತ್ಮನ್ಯವಧಾರಯ ॥ ೭೧ ॥**

**ಇದಾನೀಂ**= ಈಗ **ಯತ್**= ಯಾವ **ಆತ್ಮಾನಾತ್ಮವಿವೇಚನಂ**=ಆತ್ಮಾನಾತ್ಮ ಗಳ ವಿವೇಚನೆಯು **ತವ**= ನಿನಗೆ **ಬೋದ್ಧವ್ಯಂ**= ತಿಳಿಯಲ್ಪಡಬೇಕಾಗಿರುವುದೊ **ತತ್**= ಅದು **ಮಯಾ**= ನನ್ನಿಂದ **ಉಚ್ಯತೇ**= ಹೇಳಲ್ಪಡುತ್ತದೆ, **ಸಮ್ಯಕ್**= ಚೆನ್ನಾಗಿ **ಶ್ರುತ್ವಾ**= ಕೇಳಿ **ಆತ್ಮನಿ**=ಮನಸ್ಸಿನಲ್ಲಿ **ಅವಧಾರಯ**= ನಿಶ್ಚಯಿಸಿಕೊ.

**೭೧.** ಈಗ ಯಾವ ಆತ್ಮಾನಾತ್ಮ-ವಿವೇಚನೆಯನ್ನು ನೀನು ತಿಳಿದುಕೊಳ್ಳ ಬೇಕೊ ಅದನ್ನು ಹೇಳುತ್ತೇನೆ. ಅದನ್ನು ಚೆನ್ನಾಗಿ ಕೇಳಿ ಮನಸ್ಸಿನಲ್ಲಿ ನಿಶ್ಚಯಿಸಿಕೊ.

**ಮಜ್ಜಾಸ್ಥಿಮೇದಃ-ಪಲ-ರಕ್ತ-ಚರ್ಮ-**
**ತ್ವಗಾಹ್ವಯೈರ್ಧಾತುಭಿರೇಭಿರನ್ವಿತಮ್ ।**
**ಪಾದೋರುವಕ್ಷೋಭುಜ-ಪೃಷ್ಠ-ಮಸ್ತಕೈ-**
**ರಂಗೈರುಪಾಂಗೈರುಪಯುಕ್ತಮೇತತ್ ॥ ೭೨ ॥**

**ಏತತ್**= ಇದು **ಮಜ್ಜಾ-ಅಸ್ಥಿ-ಮೇದಃ-ಪಲ-ರಕ್ತ-ಚರ್ಮ-ತ್ವಕ್-ಆಹ್ವಯೈಃ**= ಮಜ್ಜೆ ಮೂಳೆ ಕೊಬ್ಬು ಮಾಂಸ ರಕ್ತ ಚರ್ಮ ಮತ್ತು ಹೊರಚರ್ಮ ಎಂಬ ಹೆಸರುಳ್ಳ **ಏಭಿಃ ಧಾತುಭಿಃ**= ಈ ಸಪ್ತಧಾತುಗಳಿಂದ **ಅನ್ವಿತಂ**= ಕೂಡಿ,

**ಪಾದ-ಊರು-ವಕ್ಷಃ-ಭುಜ-ಪೃಷ್ಠ-ಮಸ್ತಕೈಃ** = ಕಾಲು ತೊಡೆ ಎದೆ ತೋಳು ಬೆನ್ನು ಮತ್ತು ತಲೆ ಎಂಬ **ಅಂಗೈಃ ಉಪಾಂಗೈಃ** = ಅಂಗೋಪಾಂಗಗಳಿಂದ **ಉಪ-ಯುಕ್ತಂ** = ಕೂಡಿರುವ—

**೭೨.** ಮಜ್ಜೆ ಮೂಳೆ ಕೊಬ್ಬು ಮಾಂಸ ರಕ್ತ ಚರ್ಮ ಹೊರಚರ್ಮ ಎಂಬ ಈ ಸಪ್ತಧಾತುಗಳಿಂದ ಕೂಡಿ, ಕಾಲು ತೊಡೆ ಎದೆ ತೋಳು ಬೆನ್ನು ತಲೆ ಮೊದಲಾದ ಅಂಗಗಳಿಂದಲೂ ಉಪಾಂಗಗಳಿಂದಲೂ ಕೂಡಿ—

**ಅಹಂ ಮಮೇತಿ ಪ್ರಥಿತಂ ಶರೀರಂ**
**ಮೋಹಾಸ್ಪದಂ ಸ್ಥೂಲಮಿತೀರ್ಯತೇ ಬುಧೈಃ ।**
**ನಭೋನಭಸ್ವದ್ದಹನಾಂಬು-ಭೂಮಯಃ**
**ಸೂಕ್ಷ್ಮಾಣಿ ಭೂತಾನಿ ಭವಂತಿ ತಾನಿ ॥ ೭೩ ॥**

**ಅಹಂ ಮಮ ಇತಿ** = 'ನಾನು', 'ನನ್ನದು' ಎಂದು **ಪ್ರಥಿತಂ** = ಪ್ರಸಿದ್ಧವಾಗಿರುವ **ಮೋಹಾಸ್ಪದಂ** = ಮೋಹಕ್ಕೆ ಆಸ್ಪದವಾಗಿರುವ **ಶರೀರಂ** = ಶರೀರವು **ಸ್ಥೂಲಮ್ ಇತಿ** = ಸ್ಥೂಲವಾದುದೆಂದು **ಬುಧೈಃ** = ಪಂಡಿತರಿಂದ **ಈರ್ಯತೇ** = ಹೇಳಲ್ಪಡುತ್ತದೆ; **ನಭಃ-ನಭಸ್ವತ್-ದಹನ-ಅಂಬು-ಭೂಮಯಃ** = ಆಕಾಶವಾಯು ಅಗ್ನಿ ನೀರು ಭೂಮಿ—ಇವು **ತಾನಿ ಸೂಕ್ಷ್ಮಾಣಿ ಭೂತಾನಿ ಭವಂತಿ** = ಆ ಸೂಕ್ಷ್ಮ ಭೂತಗಳಾಗಿವೆ.

**೭೩.** 'ನಾನು', 'ನನ್ನದು' ಎಂದು ಪ್ರಸಿದ್ಧವಾಗಿ, ಮೋಹಕ್ಕೆ ಆಸ್ಪದವಾಗಿರುವ ಇದನ್ನು ಸ್ಥೂಲಶರೀರವೆಂದು ಪಂಡಿತರು ಹೇಳುತ್ತಾರೆ. ಆಕಾಶ ವಾಯು ಅಗ್ನಿ ನೀರು ಭೂಮಿ — ಇವು ಸೂಕ್ಷ್ಮಭೂತಗಳು.

[ಈ ಭೂತಪಂಚಕದಿಂದಲೇ ಸ್ಥೂಲಶರೀರವಾಗುತ್ತದೆ. ಸೂಕ್ಷ್ಮವಾಗಿರುವ ಭೂತ ಪಂಚಕವು ಮುಂದೆ ಸ್ಥೂಲವಾಗುತ್ತದೆ.]

**ಪರಸ್ಪರಾಂಶೈರ್ಮಿಲಿತಾನಿ ಭೂತ್ವಾ**
**ಸ್ಥೂಲಾನಿ ಚ ಸ್ಥೂಲಶರೀರ-ಹೇತವಃ ।**
**ಮಾತ್ರಾಸ್ತದೀಯಾ ವಿಷಯಾ ಭವಂತಿ**
**ಶಬ್ದಾದಯಃ ಪಂಚ ಸುಖಾಯ ಭೋಕ್ತುಃ ॥ ೭೪ ॥**

**ಪರಸ್ಪರ-ಅಂಶೈಃ** = ಪರಸ್ಪರ ಅಂಶಗಳಿಂದ **ಮಿಲಿತಾನಿ** = ಸೇರಿಕೊಂಡವುಗಳಾಗಿ **ಸ್ಥೂಲಾನಿ ಚ ಭೂತ್ವಾ** = ಸ್ಥೂಲಗಳಾಗಿ **ಸ್ಥೂಲಶರೀರ-ಹೇತವಃ [ಭವಂತಿ]** = ಸ್ಥೂಲ ಶರೀರಕ್ಕೆ ಕಾರಣಗಳಾಗುತ್ತವೆ; **ತದೀಯಾಃ ಮಾತ್ರಾಃ** = ಅವುಗಳ ಸೂಕ್ಷ್ಮಾಂಶ

ಗಳಾದ **ಶಬ್ದಾದಯಃ ಪಂಚ**=ಶಬ್ದವೇ ಮೊದಲಾದ ಐದು **ಭೋಕ್ತುಃ ಸುಖಾಯ**–ಜೀವನ ಸುಖಕ್ಕಾಗಿ **ವಿಷಯಾಃ ಭವಂತಿ**= ವಿಷಯುಗಳಾಗುತ್ತವೆ.

**೭೪.** ಈ ಸೂಕ್ಷ್ಮಭೂತಗಳು ಪರಸ್ಪರ ಅಂಶಗಳಲ್ಲಿ ಮಿಶ್ರವಾಗಿ[೧] ಸ್ಥೂಲಗಳಾಗಿ ಸ್ಥೂಲಶರೀರಕ್ಕೆ ಕಾರಣವಾಗುತ್ತವೆ. ಇವುಗಳ ಸೂಕ್ಷ್ಮಾಂಶಗಳಾದ ಅಥವಾ ಗುಣಗಳಾದ ಶಬ್ದವೇ ಮೊದಲಾದ ಐದು[೨] ಜೀವನ ಸುಖಕ್ಕೆ[೩] ವಿಷಯಗಳಾಗುತ್ತವೆ.

[೧ ಭೂತಗಳ ಪಂಚೀಕರಣವು ಹೀಗೆ: ಪಂಚಭೂತಗಳಲ್ಲಿ ಪ್ರತಿಯೊಂದು ಭೂತವೂ ಎರಡೆರಡು ಭಾಗಗಳಾಗುತ್ತದೆ. ಇದರಲ್ಲಿ ಒಂದು ಭಾಗವು ಪುನಃ ನಾಲ್ಕು ಭಾಗಗಳಾಗುತ್ತದೆ. ಅನಂತರ ಒಂದು ಭೂತದ $\frac{೧}{೨}$ ಭಾಗ ಉಳಿದ ನಾಲ್ಕು ಭೂತಗಳ $\frac{೧}{೮}$ ಭಾಗಗಳು ಸೇರಿಕೊಂಡು ಒಂದು ಸ್ಥೂಲಭೂತವಾಗುತ್ತದೆ ($\frac{೧}{೨}+\frac{೧}{೮}+\frac{೧}{೮}+\frac{೧}{೮}+\frac{೧}{೮}$).

೨ ಶಬ್ದ, ಸ್ಪರ್ಶ, ರೂಪ, ರಸ, ಗಂಧ.

೩ ಇಲ್ಲಿ ಸುಖವು ದುಃಖವನ್ನೂ ಒಳಕೊಂಡಿದೆ.]

ಯ ಏಷು ಮೂಢಾ ವಿಷಯೇಷು ಬದ್ಧಾ
ರಾಗೋರುಪಾಶೇನ ಸುದುರ್ದಮೇನ ।
ಆಯಾಂತಿ ನಿರ್ಯಾಂತ್ಯಧ ಊರ್ಧ್ವಮುಚ್ಚೈಃ
ಸ್ವಕರ್ಮದೂತೇನ ಜವೇನ ನೀತಾಃ ॥ ೭೫ ॥

**ಯೇ ಮೂಢಾಃ**= ಯಾವ ಮೂಢರು **ಏಷು ವಿಷಯೇಷು**= ಈ ವಿಷಯುಗಳಲ್ಲಿ **ಸುದುರ್ದಮೇನ**= ಪ್ರಬಲವಾದ **ರಾಗೋರುಪಾಶೇನ**= ರಾಗವೆಂಬ ದೃಢವಾದ ಪಾಶದಿಂದ **ಬದ್ಧಾಃ**= ಬದ್ಧರಾಗುತ್ತಾರೆಯೋ [ಅವರು] **ಸ್ವಕರ್ಮದೂತೇನ**= ತಮ್ಮ ಕರ್ಮವೆಂಬ ದೂತನಿಂದ **ಜವೇನ ನೀತಾಃ**= ವೇಗವಾಗಿ ಒಯ್ಯಲ್ಪಟ್ಟವರಾಗಿ **ಉಚ್ಚೈಃ**=ವಿಶೇಷವಾಗಿ **ಊರ್ಧ್ವಂ ನಿರ್ಯಾಂತಿ**=ಮೇಲಕ್ಕೆ ಹೋಗುತ್ತಾರೆ, **ಅಧಃ ಆಯಾಂತಿ**= ಕೆಳಕ್ಕೆ ಬರುತ್ತಾರೆ.

**೭೫.** ಯಾವ ಮೂಢರು ಈ ವಿಷಯಗಳಲ್ಲಿ ಪ್ರಬಲವಾದ ರಾಗವೆಂಬ ದೃಢವಾದ ಪಾಶದಿಂದ ಬದ್ಧರಾಗಿರುತ್ತಾರೆಯೊ ಅವರು ಸ್ವಕರ್ಮವೆಂಬ[೧] ದೂತನಿಂದ ವೇಗವಾಗಿ ಒಯ್ಯಲ್ಪಟ್ಟು ಮೇಲಕ್ಕೂ[೨] ಕೆಳಕ್ಕೂ[೩] ಹೋಗುತ್ತಲೂ ಬರುತ್ತಲೂ ಇರುತ್ತಾರೆ.

[೧ ಪಾಪಪುಣ್ಯಗಳೆಂಬ.

೨ ಸ್ವರ್ಗವೇ ಮೊದಲಾದ ಊರ್ಧ್ವಲೋಕಗಳಿಗೆ.

೩ ಅಧೋಗತಿಗೆ.]

**ಶಬ್ದಾದಿಭಿಃ ಪಂಚಭಿರೇವ ಪಂಚ**
**ಪಂಚತ್ವಮಾಪುಃ ಸ್ವಗುಣೇನ ಬದ್ಧಾಃ ।**
**ಕುರಂಗ-ಮಾತಂಗ-ಪತಂಗ-ಮೀನ-**
**ಭೃಂಗಾ ನರಃ ಪಂಚಭಿರಂಚಿತಃ ಕಿಮ್ ॥ ೭೬ ॥**

**ಕುರಂಗ-ಮಾತಂಗ-ಪತಂಗ-ಮೀನ-ಭೃಂಗಾಃ ಪಂಚ** = ಜಿಂಕೆ ಆನೆ ಮಿಡತೆ ಮೀನು ದುಂಬಿ—ಈ ಐದು **ಶಬ್ದಾದಿಭಿಃ ಪಂಚಭಿಃ** = ಶಬ್ದವೇ ಮೊದಲಾದ ಐದು ವಿಷಯಗಳಿಂದ **ಸ್ವಗುಣೇನ** = ತಮ್ಮ ವಿಷಯಾಭಿಲಾಷೆಯೆಂಬ ಪಾಶದಿಂದ **ಬದ್ಧಾಃ** = ಬದ್ಧವಾಗಿ **ಪಂಚತ್ವಂ** = ಮೃತ್ಯುವನ್ನು **ಆಪುಃ** = ಹೊಂದಿದುವು; **ಪಂಚಭಿಃ ಅಂಚಿತಃ ನರಃ ಕಿಂ** = ಪಂಚೇಂದ್ರಿಯಗಳಿಂದ ಕೂಡಿರುವ ನರನ ವಿಷಯದಲ್ಲಿ ಹೇಳತಕ್ಕದ್ದೇನು?

**೭೬.** ಜಿಂಕೆ ಆನೆ ಮಿಡತೆ ಮೀನು ದುಂಬಿ— ಈ ಐದು ಶಬ್ದವೇ ಮೊದಲಾದ ಪಂಚ-ವಿಷಯಗಳಲ್ಲಿ ತಮ್ಮ ತಮ್ಮ ಅಭಿಲಾಷೆಗೆ ಗೋಚರವಾಗಿರುವ ಯಾವುದೋ ಒಂದು ಗುಣಕ್ಕೆ ಬದ್ಧವಾಗಿ ಮೃತ್ಯುವನ್ನು ಹೊಂದುತ್ತವೆ. ಈ ಪಂಚೇಂದ್ರಿಯಗಳಿಂದಲೂ ಕೂಡಿರುವ ಮನುಷ್ಯನ ವಿಷಯದಲ್ಲಿ ಹೇಳತಕ್ಕದ್ದೇನು?[೧]

[[೧] ಜಿಂಕೆಯು ಬೇಟೆಗಾರನು ಮಾಡುವ ಶಬ್ದದಿಂದಲೂ ಆನೆಯು ಹೆಣ್ಣಾನೆಯ ಸ್ಪರ್ಶದಿಂದಲೂ ಮಿಡತೆಯು ದೀಪದ ರೂಪದಿಂದಲೂ ಮೀನು ಗಾಳದ ಹುಳುವಿನ ರುಚಿಯಿಂದಲೂ ದುಂಬಿಯು ಪುಷ್ಪದ ಪರಿಮಳದಿಂದಲೂ ನಾಶವಾಗುತ್ತವೆ. ಹೀಗೆ ಒಂದೊಂದು ಇಂದ್ರಿಯದ ವಶಕ್ಕೆ ಒಳಪಟ್ಟ ಜಂತುವಿನ ಅವಸ್ಥೆಯೇ ಹೀಗಾದರೆ ಪಂಚೇಂದ್ರಿಯಗಳ ಹೊಡೆತಕ್ಕೆ ಸಿಕ್ಕಿಬಿದ್ದಿರುವ ಮನುಷ್ಯನ ಗತಿಯೇನು?]

**ದೋಷೇಣ ತೀವ್ರೋ ವಿಷಯಃ ಕೃಷ್ಣಸರ್ಪವಿಷಾದಪಿ ।**
**ವಿಷಂ ನಿಹಂತಿ ಭೋಕ್ತಾರಂ ದ್ರಷ್ಟಾರಂ ಚಕ್ಷುಷಾಪ್ಯಯಮ್ ॥ ೭೭ ॥**

**ವಿಷಯಃ** = ವಿಷಯವು **ಕೃಷ್ಣಸರ್ಪವಿಷಾತ್ ಅಪಿ** = ಕಾಳಸರ್ಪದ ವಿಷಕ್ಕಿಂತಲೂ **ದೋಷೇಣ** = ದೋಷದಿಂದ **ತೀವ್ರಃ** = ತೀಕ್ಷ್ಣವಾಗಿರುವುದು; **ವಿಷಂ** = ವಿಷವು **ಭೋಕ್ತಾರಂ** = ತಿನ್ನುವವನನ್ನು **ನಿಹಂತಿ** = ಕೊಲ್ಲುತ್ತದೆ, **ಅಯಂ** = ಇದು **ಚಕ್ಷುಷಾ** = ಕಣ್ಣಿನಿಂದ **ದ್ರಷ್ಟಾರಮ್ ಅಪಿ** = ನೋಡುವವನನ್ನು ಕೂಡ [ಕೊಲ್ಲುತ್ತದೆ].

**೭೭.** ಇಂದ್ರಿಯದ ವಿಷಯವು ದೋಷದಲ್ಲಿ ಕಾಳಸರ್ಪದ ವಿಷಕ್ಕಿಂತಲೂ ತೀಕ್ಷ್ಣವಾಗಿರುವುದು. ವಿಷವಾದರೋ ತಿನ್ನುವವನನ್ನು ಮಾತ್ರ

ಕೊಲ್ಲುತ್ತದೆ; ಆದರೆ ಈ ವಿಷಯವು ಕಣ್ಣಿನಿಂದ ನೋಡುವವನನ್ನು ಕೂಡ ಕೊಲ್ಲುತ್ತದೆ.[೧]

[[೧] ಕಣ್ಣಿನಿಂದ ನೋಡುವುದು ಇತರ ಇಂದ್ರಿಯಗಳಿಗೂ ಉಪಲಕ್ಷಣವಾಗಿರುತ್ತದೆ. ಬಾಹ್ಯವಿಷಯಗಳೊಂದಿಗೆ ಯಾವುದಾದರೊಂದು ಇಂದ್ರಿಯದ ಸಂಯೋಗವಾದರೆ ಸಾಕು.]

**ವಿಷಯಾಶಾ-ಮಹಾಪಾಶಾದ್ಯೋ ವಿಮುಕ್ತಃ ಸುದುಸ್ತ್ಯಜಾತ್ ।**
**ಸ ಏವ ಕಲ್ಪತೇ ಮುಕ್ತ್ಯೈ ನಾನ್ಯಃ ಷಟ್-ಶಾಸ್ತ್ರವೇದ್ಯಪಿ ॥ ೭೮ ॥**

**ಸುದುಸ್ತ್ಯಜಾತ್** = ಬಿಡಿಸಿಕೊಳ್ಳುವುದಕ್ಕೆ ಅಶಕ್ಯವಾಗಿರುವ **ವಿಷಯಾಶಾ-ಮಹಾಪಾಶಾತ್** = ವಿಷಯಾಭಿಲಾಷೆಯೆಂಬ ಮಹಾಪಾಶದಿಂದ **ಯಃ** = ಯಾವನು **ವಿಮುಕ್ತಃ** = ಮುಕ್ತನಾಗುತ್ತಾನೆಯೊ **ಸಃ ಏವ** = ಅವನೇ **ಮುಕ್ತ್ಯೈ** = ಮುಕ್ತಿಗೆ **ಕಲ್ಪತೇ** = ಅರ್ಹನಾಗುತ್ತಾನೆ, **ಷಟ್‌ಶಾಸ್ತ್ರವೇದೀ ಅಪಿ** = ಆರು ಶಾಸ್ತ್ರಗಳನ್ನು ಬಲ್ಲವನಾದರೂ **ಅನ್ಯಃ** = ಇತರನು **ನ** = ಅರ್ಹನಾಗುವುದಿಲ್ಲ.

**೭೮.** ಬಿಡಿಸಿಕೊಳ್ಳುವುದಕ್ಕೆ ಅಶಕ್ಯವಾಗಿರುವ ವಿಷಯಾಭಿಲಾಷೆಯೆಂಬ ಮಹಾಪಾಶದಿಂದ ಯಾವನು ಮುಕ್ತನಾಗಿರುವನೊ ಅವನೇ ಮುಕ್ತಿಗೆ ಅರ್ಹನಾಗುತ್ತಾನೆ; ಇನ್ನೊಬ್ಬನು ಆರು ಶಾಸ್ತ್ರಗಳನ್ನೂ[೧] ಬಲ್ಲವನಾದರೂ (ಮುಕ್ತಿಗೆ) ಅರ್ಹನಾಗುವುದಿಲ್ಲ.

[[೧] ನ್ಯಾಯ, ವೈಶೇಷಿಕ, ಸಾಂಖ್ಯ, ಯೋಗ, ಮೀಮಾಂಸಾ, ವೇದಾಂತ.]

**ಆಪಾತ-ವೈರಾಗ್ಯವತೋ ಮುಮುಕ್ಷೂನ್**
**ಭವಾಬ್ಧಿಪಾರಂ ಪ್ರತಿಯಾತುಮುದ್ಯತಾನ್ ।**
**ಆಶಾ-ಗ್ರಹೋ ಮಜ್ಜಯತೇಽಂತರಾಲೇ**
**ನಿಗೃಹ್ಯ ಕಂಠೇ ವಿನಿವರ್ತ್ಯ ವೇಗಾತ್ ॥ ೭೯ ॥**

**ಭವಾಬ್ಧಿಪಾರಂ** = ಸಂಸಾರ ಸಮುದ್ರದ ತೀರವನ್ನು **ಪ್ರತಿಯಾತುಂ** = ಹೊಂದಲು **ಉದ್ಯತಾನ್** = ಪ್ರಯತ್ನಪಡುತ್ತಿರುವ **ಆಪಾತ-ವೈರಾಗ್ಯವತಃ** = ಮಂದ ವೈರಾಗ್ಯವುಳ್ಳ **ಮುಮುಕ್ಷೂನ್** = ಮುಮುಕ್ಷುಗಳನ್ನು **ಆಶಾ-ಗ್ರಹಃ** = ಆಶೆಯೆಂಬ ಮೊಸಳೆಯು **ಕಂಠೇ** = ಕೊರಳಿನಲ್ಲಿ **ನಿಗೃಹ್ಯ** = ಹಿಡಿದು **ವೇಗಾತ್** = ವೇಗದ ದೆಸೆಯಿಂದ **ವಿನಿವರ್ತ್ಯ** = ಹಿಂತಿರುಗಿಸಿ **ಅಂತರಾಲೇ** = ಮಧ್ಯದಲ್ಲಿ **ಮಜ್ಜಯತೇ** = ಮುಳುಗಿಸುತ್ತದೆ.

**೭೯.** ಸಂಸಾರಸಮುದ್ರದ ಆಚೆಯ ತೀರವನ್ನು ಹೊಂದಬೇಕೆಂದು ಪ್ರಯತ್ನಿಸುತ್ತಿರುವ ಮಂದವೈರಾಗ್ಯವುಳ್ಳ ಮುಮುಕ್ಷುಗಳನ್ನು ಆಶೆಯೆಂಬ

ಮೊಸಳೆಯು ಕೊರಳಿನಲ್ಲಿ ಹಿಡಿದು ವೇಗದ ದೆಸೆಯಿಂದ[೧] ಹಿಂತಿರುಗಿಸಿ ಮಧ್ಯದಲ್ಲಿ ಮುಳುಗಿಸುತ್ತದೆ.[೨]

[ವಿಷಯವಸ್ತುಗಳಲ್ಲಿ ತೀವ್ರವೈರಾಗ್ಯವಿಲ್ಲದಿದ್ದರೆ ಉಂಟಾಗತಕ್ಕ ಅನರ್ಥವನ್ನು ಇಲ್ಲಿ ಹೇಳಿದೆ.

[೧] ಸಂಸಾರಸಮುದ್ರವನ್ನು ದಾಟುವುದೆಂಬ ಕ್ರಿಯೆಯನ್ನು ನಿಲ್ಲಿಸಿ.

[೨] 'ಬ್ರಹ್ಮಮಾರ್ಗದಲ್ಲಿ ಮುಗ್ಧನೂ ಉಭಯಭ್ರಷ್ಟನೂ ಆಶ್ರಯವಿಲ್ಲದವನೂ (ಆದ ಮನುಷ್ಯನು) ತುಂಡಾದ ಮೇಘದಂತೆ ನಾಶವಾಗುವುದಿಲ್ಲವೆ?' **ಕಚ್ಚಿನ್ನೋಭಯ-ವಿಭ್ರಷ್ಟಶ್ಛಿನ್ನಾಭ್ರಮಿವ ನಶ್ಯತಿ। ಅಪ್ರತಿಷ್ಠೋ ಮಹಾಬಾಹೋ ವಿಮೂಢೋ ಬ್ರಹ್ಮಣಃ ಪಥಿ॥** ಎಂದು ಗೀತೆಯಲ್ಲಿ (೬. ೩೮) ಹೇಳಿದೆ.]

**ವಿಷಯಾಖ್ಯ-ಗ್ರಹೋ ಯೇನ ಸುವಿರಕ್ತ್ಯಸಿನಾ ಹತಃ ।**
**ಸ ಗಚ್ಛತಿ ಭವಾಂಭೋಧೇಃ ಪಾರಂ ಪ್ರತ್ಯೂಹ-ವರ್ಜಿತಃ ॥ ೮೦ ॥**

**ಯೇನ**=ಯಾವನಿಂದ **ವಿಷಯಗ್ರಹಃ**=ವಿಷಯಾಭಿಲಾಷೆಯೆಂಬ ಮೊಸಳೆಯು **ಸುವಿರಕ್ತಿ-ಅಸಿನಾ**=ದೃಢವೈರಾಗ್ಯವೆಂಬ ಕತ್ತಿಯಿಂದ **ಹತಃ**=ಕೊಲ್ಲಲ್ಪಡುತ್ತದೆಯೊ **ಸಃ**=ಅವನು **ಪ್ರತ್ಯೂಹ-ವರ್ಜಿತಃ**=ವಿಘ್ನಗಳಿಂದ ಬಿಡಲ್ಪಟ್ಟವನಾಗಿ **ಭವಾಂಭೋಧೇಃ**=ಸಂಸಾರಸಮುದ್ರದ **ಪಾರಂ**=ತೀರವನ್ನು **ಗಚ್ಛತಿ**=ಹೊಂದುತ್ತಾನೆ.

**೮೦.** ಯಾವನು ದೃಢವೈರಾಗ್ಯವೆಂಬ ಕತ್ತಿಯಿಂದ ವಿಷಯಾಭಿಲಾಷೆಯೆಂಬ ಮೊಸಳೆಯನ್ನು ಕೊಲ್ಲುತ್ತಾನೆಯೊ ಅವನೇ ವಿಘ್ನಶೂನ್ಯನಾಗಿ[೧] ಸಂಸಾರಸಮುದ್ರದ ಆಚೆಯ ತೀರವನ್ನು ಹೊಂದುತ್ತಾನೆ[೨].

[[೧] ಪರಮಾತ್ಮ-ಪ್ರಾಪ್ತಿಯ ಪ್ರಯತ್ನದಲ್ಲಿ ಬರುವ ನಾನಾ ವಿಧವಾದ ವಿಘ್ನಗಳಿಂದ ಬಿಡಲ್ಪಟ್ಟವನಾಗಿ.

[೨] 'ಅವನು ಸಂಸಾರಗತಿಯ ಕೊನೆಯನ್ನು ಹೊಂದುತ್ತಾನೆ; ಅದೇ ವಿಷ್ಣುವಿನ ಪರಮಪದ' **ಸೋಽಧ್ವನಃ ಪಾರಮಾಪ್ನೋತಿ ತದ್ವಿಷ್ಣೋಃ ಪರಮಂ ಪದಮ್** ಎಂದು ಕಠ-ಶ್ರುತಿಯಲ್ಲಿ (೧. ೩. ೯) ಹೇಳಿದೆ.]

**ವಿಷಮ-ವಿಷಯ-ಮಾರ್ಗೇ ಗಚ್ಛತೋಽನಚ್ಛಬುದ್ಧೇಃ**
**ಪ್ರತಿಪದಮಭಿಯಾತೋ ಮೃತ್ಯುರಪ್ಯೇಷ ವಿದ್ಧಿ ।**
**ಹಿತ-ಸುಜನ-ಗುರೂಕ್ತ್ಯಾ ಗಚ್ಛತಃ ಸ್ವಸ್ಯ ಯುಕ್ತ್ಯಾ**
**ಪ್ರಭವತಿ ಫಲಸಿದ್ಧಿಃ ಸತ್ಯಮಿತ್ಯೇವ ವಿದ್ಧಿ ॥ ೮೧ ॥**

**ವಿಷಮ-ವಿಷಯ-ಮಾರ್ಗೇ**=ಭಯಂಕರವಾದ ವಿಷಯಮಾರ್ಗದಲ್ಲಿ **ಗಚ್ಛತಃ**=ಹೋಗುತ್ತಿರುವ **ಅನಚ್ಛಬುದ್ಧೇಃ**=ಮಲಿನಬುದ್ಧಿಯುಳ್ಳವನ, **ಏಷಃ**

**ಮೃತ್ಯುಃ ಅಪಿ**=ಈ ಮೃತ್ಯುವೂ ಕೂಡ, **ಪ್ರತಿಪದಂ**=ಹೆಜ್ಜೆ ಹೆಜ್ಜೆಗೂ **ಅಭಿಯಾತಃ**=ಹಿಂಬಾಲಿಸುತ್ತಿರುವುದು [ಎಂದು] **ವಿದ್ಧಿ**=ತಿಳಿದುಕೊ; **ಹಿತ-ಸುಜನ-ಗುರು-ಉಕ್ತ್ಯಾ**=ಹಿತರು ಸಾಧುಗಳು ಗುರುಗಳು ಇವರ ಮಾತಿನಿಂದಲೂ **ಸ್ವಸ್ಯ ಯುಕ್ತ್ಯಾ**=ತನ್ನ ಯುಕ್ತಿಯಿಂದಲೂ **ಗಚ್ಛತಃ**=ನಡೆಯುತ್ತಿರುವವನಿಗೆ **ಫಲಸಿದ್ಧಿಃ**=ಮೋಕ್ಷ ಲಾಭವು **ಪ್ರಭವತಿ**=ಸಿದ್ಧಿಸುತ್ತದೆ; **ಸತ್ಯಂ**=ಸತ್ಯವು **ಇತಿ ಏವ**=ಹೀಗೆಂದೇ **ವಿದ್ಧಿ**=ತಿಳಿದುಕೊ.

**೮೧.** ಭಯಂಕರವಾದ ವಿಷಯಮಾರ್ಗದಲ್ಲಿ ಹೋಗುತ್ತಿರುವ ಮಲಿನ ಬುದ್ಧಿಯುಳ್ಳವನನ್ನು ಮೃತ್ಯುವು ಹೆಜ್ಜೆ ಹೆಜ್ಜೆಗೂ ಹಿಂಬಾಲಿಸುತ್ತಿರುವುದೆಂದು ತಿಳಿದುಕೊ. ಹಿತರು ಸಾಧುಗಳು ಗುರುಗಳು—ಇವರ ಮಾತಿಗೆ ಮತ್ತು ತನ್ನ ಯುಕ್ತಿಗೆ ಅನುಸಾರವಾಗಿ ನಡೆಯುತ್ತಿರುವವನಿಗೆ ಮೋಕ್ಷಲಾಭವು ಸಿದ್ಧಿಸುತ್ತದೆ; ಇದು ಸತ್ಯವೆಂದೇ ತಿಳಿದುಕೊ.

[ಕಠೋಪನಿಷತ್ ೧. ೩. ೭–೮ ನೋಡಿ.]

**ಮೋಕ್ಷಸ್ಯ ಕಾಂಕ್ಷಾ ಯದಿ ವೈ ತವಾಸ್ತಿ**
**ತ್ಯಜಾತಿದೂರಾದ್ವಿಷಯಾನ್ ವಿಷಂ ಯಥಾ ।**
**ಪೀಯೂಷವತ್ತೋಷ-ದಯಾ-ಕ್ಷಮಾರ್ಜವ-**
**ಪ್ರಶಾಂತಿ-ದಾಂತೀರ್ಭಜ ನಿತ್ಯಮಾದರಾತ್ ॥ ೮೨ ॥**

**ತವ**=ನಿನಗೆ **ಮೋಕ್ಷಸ್ಯ**=ಮೋಕ್ಷದ **ಕಾಂಕ್ಷಾ**=ಅಭಿಲಾಷೆಯು **ಯದಿ ಅಸ್ತಿ ವೈ**=ಇದ್ದರೆ **ವಿಷಯಾನ್**=ವಿಷಯಗಳನ್ನು **ವಿಷಂ ಯಥಾ**=ವಿಷದಂತೆ **ಅತಿದೂರಾತ್**=ಅತಿ ದೂರದಿಂದ **ತ್ಯಜ**=ಬಿಟ್ಟುಬಿಡು; **ತೋಷ-ದಯಾ-ಕ್ಷಮಾ-ಆರ್ಜವ-ಪ್ರಶಾಂತಿ-ದಾಂತೀಃ**=ಸಂತೋಷ ದಯೆ ಕ್ಷಮೆ ಸರಳತೆ ಶಮ ದಮೆ–ಇವುಗಳನ್ನು **ಪೀಯೂಷವತ್**=ಅಮೃತದಂತೆ **ನಿತ್ಯಂ**=ನಿತ್ಯವೂ **ಆದರಾತ್**=ಪ್ರೀತಿಯಿಂದ **ಭಜ**=ಸೇವಿಸು.

**೮೨.** ನಿನಗೆ ಮೋಕ್ಷದ ಅಭಿಲಾಷೆಯು ಇದ್ದದ್ದೇ ಆದರೆ ವಿಷಯಗಳನ್ನು ವಿಷದಂತೆ ಅತಿದೂರದಲ್ಲಿಯೇ ತ್ಯಜಿಸು; ಸಂತೋಷ, ದಯೆ, ಕ್ಷಮೆ, ಸರಳತೆ, ಶಮ, ದಮ—ಇವುಗಳನ್ನು ಅಮೃತದಂತೆ ನಿತ್ಯವೂ ಪ್ರೀತಿಯಿಂದ ಸೇವಿಸು.

**ಅನುಕ್ಷಣಂ ಯತ್ಪರಿಹೃತ್ಯ ಕೃತ್ಯಂ**
**ಅನಾದ್ಯವಿದ್ಯಾಕೃತ-ಬಂಧಮೋಕ್ಷಣಮ್ ।**
**ದೇಹಃ ಪರಾರ್ಥೋಽಯಮಮುಷ್ಯ ಪೋಷಣೇ**
**ಯಃ ಸಜ್ಜತೇ ಸ ಸ್ವಮನೇನ ಹಂತಿ ॥ ೮೩ ॥**

**ಯತ್** = ಯಾವ **ಅನುಕ್ಷಣಂ** = ಪ್ರತಿಕ್ಷಣವೂ **ಕೃತ್ಯಂ** = ಮಾಡಬೇಕಾಗಿರುವ **ಅನಾದಿ-ಅವಿದ್ಯಾಕೃತ-ಬಂಧಮೋಕ್ಷಣಂ** = ಅನಾದಿಯಾದ ಅವಿದ್ಯೆಯಿಂದ ಮಾಡಲ್ಪಟ್ಟ ಸಂಸಾರಬಂಧದ ಬಿಡುಗಡೆಯನ್ನು **ಪರಿಹೃತ್ಯ** = ಬಿಟ್ಟು, **ಅಯಂ ದೇಹಃ** = ಈ ದೇಹವು **ಪರಾರ್ಥಃ** = ಪರಪ್ರಯೋಜನವಾದ್ದು ; **ಯಃ** = ಯಾವನು **ಅಮುಷ್ಯ** = ಇದರ **ಪೋಷಣೇ** = ಪೋಷಣದಲ್ಲಿ **ಸಜ್ಜತೇ** = ಆಸಕ್ತನಾಗುತ್ತಾನೆಯೊ **ಸಃ** = ಅವನು **ಅನೇನ** = ಇದರಿಂದ **ಸ್ವಂ** = ತನ್ನನ್ನು **ಹಂತಿ** = ಕೊಂದುಕೊಳ್ಳುತ್ತಾನೆ.

**೮೩.** ಯಾವುದನ್ನು ಪ್ರತಿಕ್ಷಣವೂ ಮಾಡಬೇಕೊ ಅಂಥ, ಅನಾದಿಯಾದ ಅವಿದ್ಯೆಯಿಂದ ಮಾಡಲ್ಪಟ್ಟ ಸಂಸಾರಬಂಧದ ಬಿಡುಗಡೆಯನ್ನು ತ್ಯಜಿಸಿ, ಪರರಿಗೆ ಪ್ರಯೋಜನವಾಗಿರುವ[೧] ಈ ಶರೀರದ ಪೋಷಣದಲ್ಲಿಯೇ ಯಾವನು ಆಸಕ್ತನಾಗಿರುವನೊ ಅವನು ಈ ಶರೀರಪೋಷಣದಿಂದಲೇ ತನ್ನನ್ನು ಕೊಂದುಕೊಳ್ಳುತ್ತಾನೆ.[೨]

[೧ 'ಈ ಶರೀರವು ತಾಯಿತಂದೆಗಳ ಸ್ವತ್ತೊ? ಪತ್ನಿಯದೊ? ತನ್ನ ಒಡೆಯನದೊ? ಅಥವಾ ಅಗ್ನಿಯದೊ? ನಾಯಿಹದ್ದುಗಳದೊ? ತನ್ನದೊ? ಅಥವಾ ಸ್ನೇಹಿತನದೊ? ಎಂದು ನಿರ್ಧರಿಸಲ್ಪಟ್ಟಿಲ್ಲ' **ಪಿತ್ರೋಃ ಕಿಂ ಸ್ವಂ ನು ಭಾರ್ಯಾಯಾಃ ಸ್ವಾಮಿನೋಽಗ್ನೇಃ ಶ್ವಗೃಧ್ರಯೋಃ । ಕಿಮಾತ್ಮನಃ ಕಿಂ ಸುಹೃದಾಮಿತಿ ಯೋ ನಾವಸೀಯತೇ ॥** (ಶ್ರೀಮದ್ಭಾಗವತ ೧೧. ೨೬. ೧೯)

೨ 'ಆತ್ಮಘಾತಿಗಳಾದ ಜನರು ಮೃತರಾದಮೇಲೆ ಅಸುರಸಂಬಂಧವುಳ್ಳ ಲೋಕಗಳನ್ನು ಪಡೆಯುತ್ತಾರೆ' **ಅಸುರ್ಯಾ ನಾಮ ತೇ ಲೋಕಾಃ . . . ತಾಂಸ್ತೇ ಪ್ರೇತ್ಯಾಭಿಗಚ್ಛಂತಿ ಯೇ ಕೇ ಚಾತ್ಮಹನೋ ಜನಾಃ ॥** (ಈಶಾವಾಸ್ಯ ಉ. ೩)

**ಶರೀರಪೋಷಣಾರ್ಥೀ ಸನ್ ಯ ಆತ್ಮಾನಂ ದಿದೃಕ್ಷತಿ ।**
**ಗ್ರಾಹಂ ದಾರು-ಧಿಯಾ ಧೃತ್ವಾ ನದೀಂ ತರ್ತುಂ ಸ ಗಚ್ಛತಿ ॥ ೮೪ ॥**

**ಯಃ** = ಯಾವನು **ಶರೀರಪೋಷಣಾರ್ಥೀ ಸನ್** = ಶರೀರಪೋಷಣವನ್ನು ಬಯಸುವವನಾಗಿ **ಆತ್ಮಾನಂ** = ಆತ್ಮನನ್ನೂ **ದಿದೃಕ್ಷತಿ** = ನೋಡಲು ಬಯಸುತ್ತಾನೆಯೊ **ಸಃ** = ಅವನು **ಗ್ರಾಹಂ** = ಮೊಸಳೆಯನ್ನು **ದಾರು-ಧಿಯಾ** = ಮರವೆಂಬ ಬುದ್ಧಿಯಿಂದ **ಧೃತ್ವಾ** = ಹಿಡಿದುಕೊಂಡು **ನದೀಂ** = ನದಿಯನ್ನು **ತರ್ತುಂ** = ದಾಟಲು **ಗಚ್ಛತಿ** = ಹೋಗುತ್ತಾನೆ.

**೮೪.** ಯಾವನು ಶರೀರಪೋಷಣವನ್ನೇ ಬಯಸುವವನಾಗಿ ಆತ್ಮನನ್ನೂ ಸಾಕ್ಷಾತ್ಕರಿಸಲು ಬಯಸುತ್ತಾನೆಯೊ ಅವನು ಮೊಸಳೆಯನ್ನು ಮರವೆಂಬ ಬುದ್ಧಿಯಿಂದ ಹಿಡಿದುಕೊಂಡು ನದಿಯನ್ನು ದಾಟುವುದಕ್ಕೆ ಹೋಗುತ್ತಾನೆ.

[ಶರೀರಪೋಷಣವನ್ನು ಮಾಡಿದರೆ ಶರೀರದಲ್ಲಿರುವ ಆತ್ಮನೂ ಕೂಡ ಪೋಷಿತನಾಗುವನು ಎಂಬ ಬುದ್ಧಿಯುಳ್ಳವರು ಸ್ವಸ್ವರೂಪವನ್ನು ಅನುಸಂಧಾನಮಾಡಲು ಶಕ್ತರಾಗುವುದಿಲ್ಲ; ಏಕೆಂದರೆ ದೇಹಪೋಷಣದಿಂದ ಆತ್ಮನು ಪೋಷಿತನಾಗುವುದಿಲ್ಲ.]

**ಮೋಹ ಏವ ಮಹಾಮೃತ್ಯುರ್ಮುಮುಕ್ಷೋರ್ವಪುರಾದಿಷು ।**
**ಮೋಹೋ ವಿನಿರ್ಜಿತೋ ಯೇನ ಸ ಮುಕ್ತಿಪದಮರ್ಹತಿ ॥ ೮೫ ॥**

**ಮುಮುಕ್ಷೋಃ** = ಮುಮುಕ್ಷುವಿಗೆ **ವಪುರಾದಿಷು** = ಶರೀರವೇ ಮೊದಲಾದುವುಗಳಲ್ಲಿ **ಮೋಹಃ ಏವ** = ಮೋಹವೇ **ಮಹಾಮೃತ್ಯುಃ** = ಮಹಾಮೃತ್ಯುವು; **ಯೇನ** = ಯಾವನಿಂದ **ಮೋಹಃ** = ಮೋಹವು **ವಿನಿರ್ಜಿತಃ** = ಜಯಿಸಲ್ಪಟ್ಟಿದೆಯೊ **ಸಃ** = ಅವನು **ಮುಕ್ತಿಪದಂ** = ಮೋಕ್ಷಸ್ವರೂಪವನ್ನು **ಅರ್ಹತಿ** = ಹೊಂದಲು ಯೋಗ್ಯನಾಗುತ್ತಾನೆ.

**೮೫.** ಮುಮುಕ್ಷುವಿಗೆ ಶರೀರವೇ ಮೊದಲಾದುವುಗಳಲ್ಲಿರುವ ಮೋಹವೇ ಮಹಾಮೃತ್ಯುವು. ಯಾವನು ಮೋಹವನ್ನು ಜಯಿಸಿರುತ್ತಾನೆಯೊ ಅವನು ಮೋಕ್ಷಸ್ವರೂಪವನ್ನು ಹೊಂದಲು ಯೋಗ್ಯನಾಗುತ್ತಾನೆ.

**ಮೋಹಂ ಜಹಿ ಮಹಾಮೃತ್ಯುಂ ದೇಹ-ದಾರ-ಸುತಾದಿಷು ।**
**ಯಂ ಜಿತ್ವಾ ಮುನಯೋ ಯಾಂತಿ ತದ್ವಿಷ್ಣೋಃ ಪರಮಂ ಪದಮ್**
**॥ ೮೬ ॥**

**ದೇಹ-ದಾರ-ಸುತಾದಿಷು** = ಶರೀರ ಹೆಂಡತಿ ಮಕ್ಕಳು ಮೊದಲಾದುವುಗಳಲ್ಲಿ **ಮೋಹಂ ಮಹಾಮೃತ್ಯುಂ** = ಮೋಹವೆಂಬ ಮಹಾಮೃತ್ಯುವನ್ನು **ಜಹಿ** = ನಾಶಮಾಡು, **ಯಂ** = ಯಾವುದನ್ನು **ಜಿತ್ವಾ** = ಜಯಿಸಿ **ಮುನಯಃ** = ಮುನಿಗಳು **ತತ್** = ಶ್ರುತಿಪ್ರಸಿದ್ಧವಾದ **ವಿಷ್ಣೋಃ** = ವಿಷ್ಣುವಿನ **ಪರಮಂ ಪದಂ** = ಪರಮಪದವನ್ನು **ಯಾಂತಿ** = ಹೊಂದುತ್ತಾರೆಯೊ.

**೮೬.** ಶರೀರ ಹೆಂಡತಿ ಮಕ್ಕಳು ಮೊದಲಾದುವುಗಳಲ್ಲಿರುವ ಮೋಹವೆಂಬ ಮಹಾಮೃತ್ಯುವನ್ನು ನಾಶಮಾಡು, ಮೋಹವನ್ನು ಜಯಿಸಿದ ಮುನಿಗಳು ಶ್ರುತಿಪ್ರಸಿದ್ಧವಾದ ವಿಷ್ಣುವಿನ ಪರಮಪದವನ್ನು ಹೊಂದುತ್ತಾರೆ.

[ಕಠೋಪನಿಷತ್ ೧. ೩. ೯ ನೋಡಿ.]

**ತ್ವಙ್ಮಾಂಸ-ರುಧಿರ-ಸ್ನಾಯು-ಮೇದೋ-ಮಜ್ಜಾಸ್ಥಿ-ಸಂಕುಲಮ್ ।**
**ಪೂರ್ಣಂ ಮೂತ್ರಪುರೀಷಾಭ್ಯಾಂ ಸ್ಥೂಲಂ ನಿಂದ್ಯಮಿದಂ ವಪುಃ**
**॥ ೮೭ ॥**

**ತ್ವಕ್-ಮಾಂಸ-ರುಧಿರ-ಸ್ನಾಯು-ಮೇದಃ-ಮಜ್ಜಾ-ಅಸ್ಥಿ-ಸಂಕುಲಂ**= ಚರ್ಮ ಮಾಂಸ ರಕ್ತ ಸ್ನಾಯು ಕೊಬ್ಬು ಮಜ್ಜೆ ಮೂಳೆ—ಇವುಗಳಿಂದ ಕೂಡಿರುವ **ಮೂತ್ರ-ಪುರೀಷಾಭ್ಯಾಂ**=ಮಲಮೂತ್ರಗಳಿಂದ **ಪೂರ್ಣಂ**=ತುಂಬಿರುವ **ನಿಂದ್ಯಂ**= ನಿಂದ್ಯವಾದ **ಇದಂ ವಪುಃ** = ಈ ಶರೀರವು **ಸ್ಥೂಲಂ** = ಸ್ಥೂಲವು.

**೮೭.** ಚರ್ಮ ಮಾಂಸ ರಕ್ತ ಸ್ನಾಯು ಕೊಬ್ಬು ಮಜ್ಜೆ ಮೂಳೆ— ಇವುಗಳಿಂದ ಕೂಡಿರುವ, ಮಲಮೂತ್ರಗಳಿಂದ ತುಂಬಿರುವ, ನಿಂದ್ಯವಾದ ಈ ದೇಹವೇ ಸ್ಥೂಲಶರೀರವು.

**ಪಂಚೀಕೃತೇಭ್ಯೋ ಭೂತೇಭ್ಯಃ ಸ್ಥೂಲೇಭ್ಯಃ ಪೂರ್ವಕರ್ಮಣಾ ।**
**ಸಮುತ್ಪನ್ನಮಿದಂ ಸ್ಥೂಲಂ ಭೋಗಾಯತನಮಾತ್ಮನಃ ॥**
**ಅವಸ್ಥಾ ಜಾಗರಸ್ತಸ್ಯ ಸ್ಥೂಲಾರ್ಥಾನುಭವೋ ಯತಃ ॥ ೮೮ ॥**

**ಪಂಚೀಕೃತೇಭ್ಯಃ** = ಪಂಚೀಕೃತವಾದ **ಸ್ಥೂಲೇಭ್ಯಃ** = ಸ್ಥೂಲವಾದ **ಭೂತೇಭ್ಯಃ** = ಭೂತಗಳಿಂದಲೂ **ಪೂರ್ವಕರ್ಮಣಾ**=ಪೂರ್ವಕರ್ಮದಿಂದಲೂ **ಸಮುತ್ಪನ್ನಂ** = ಉತ್ಪನ್ನವಾದ **ಇದಂ ಸ್ಥೂಲಂ** = ಈ ಸ್ಥೂಲಶರೀರವು **ಆತ್ಮನಃ** = ಆತ್ಮನ **ಭೋಗಾಯತನಂ** = ಅನುಭವಕ್ಕೆ ಆಶ್ರಯುವಾಗಿದೆ; **ತಸ್ಯ** = ಅದಕ್ಕೆ **ಜಾಗರಃ** = ಜಾಗ್ರತ್ತು **ಅವಸ್ಥಾ** = ಅವಸ್ಥೆಯಾಗಿದೆ; **ಯತಃ** = ಏಕೆಂದರೆ **ಸ್ಥೂಲ-ಅರ್ಥ-ಅನುಭವಃ** = ಸ್ಥೂಲ ವಸ್ತುಗಳ ಅನುಭವವು (ಉಂಟಾಗುತ್ತದೆ).

**೮೮.** ಪೂರ್ವಕರ್ಮದಿಂದಲೂ ಮತ್ತು ಪಂಚೀಕೃತವೂ[೧] ಸ್ಥೂಲವೂ ಆದ (ಪೃಥಿವ್ಯಾದಿ) ಭೂತಗಳ ಮೂಲಕವೂ ಉತ್ಪನ್ನವಾದ ಈ ಸ್ಥೂಲ ಶರೀರವು ಆತ್ಮನ ಅನುಭವಕ್ಕೆ ಆಶ್ರಯವಾಗಿದೆ. ಈ ಶರೀರಕ್ಕೆ ಜಾಗ್ರತ್ತು ಒಂದು ಅವಸ್ಥೆಯಾಗಿದೆ; ಏಕೆಂದರೆ (ಈ ಅವಸ್ಥೆಯಿಂದಲೇ) ಸ್ಥೂಲವಸ್ತುಗಳ ಅನುಭವವುಂಟಾಗುತ್ತದೆ.

[೧ ೭೪ನೆಯ ಶ್ಲೋಕದ ೧ನೆಯ ಟಿಪ್ಪಣಿಯನ್ನು ನೋಡಿ.]

**ಬಾಹ್ಯೇಂದ್ರಿಯೈಃ ಸ್ಥೂಲಪದಾರ್ಥ-ಸೇವಾಂ**
**ಸ್ರಕ್-ಚಂದನ-ಸ್ತ್ರ್ಯಾದಿ-ವಿಚಿತ್ರರೂಪಾಮ್ ।**
**ಕರೋತಿ ಜೀವಃ ಸ್ವಯಮೇತದಾತ್ಮನಾ**
**ತಸ್ಮಾತ್ ಪ್ರಶಸ್ತಿರ್ವಪುಷೋಽಸ್ಯ ಜಾಗರೇ ॥ ೮೯ ॥**

**ಜೀವಃ** = ಜೀವಾತ್ಮನು **ಬಾಹ್ಯೇಂದ್ರಿಯೈಃ** = ಹೊರಗಿನ ಇಂದ್ರಿಯುಗಳಿಂದ **ಸ್ರಕ್-ಚಂದನ-ಸ್ತ್ರೀ-ಆದಿ-ವಿಚಿತ್ರರೂಪಾಂ** = ಹೂವಿನ ಮಾಲೆ ಚಂದನ ಮೊದಲಾದ

ವಿಚಿತ್ರರೂಪವುಳ್ಳ **ಸ್ಥೂಲಪದಾರ್ಥ-ಸೇವಾಂ**=ಸ್ಥೂಲಪದಾರ್ಥಗಳ ಸೇವನೆಯನ್ನು **ಏತದಾತ್ಮನಾ**=ಸ್ವ-ತಾದಾತ್ಮ್ಯವನ್ನು ಪಡೆದ ಈ ಸ್ಥೂಲಶರೀರದಿಂದಲೇ **ಸ್ವಯಂ**=ತಾನೇ **ಕರೋತಿ**=ಮಾಡುತ್ತಾನೆ; **ತಸ್ಮಾತ್**=ಆದುದರಿಂದ **ಅಸ್ಯ ವಪುಷಃ**=ಈ ಶರೀರಕ್ಕೆ **ಜಾಗರೇ**=ಜಾಗ್ರದವಸ್ಥೆಯಲ್ಲಿ **ಪ್ರಶಸ್ತಿಃ**=ಪ್ರಾಶಸ್ತ್ಯ.

**೮೯.** ಜೀವಾತ್ಮನು[೧] ಈ ದೇಹಾಭಿಮಾನವನ್ನು ಪಡೆದು ತಾನೇ ಹೊರಗಿನ ಇಂದ್ರಿಯಗಳಿಂದ ಹೂವಿನ ಮಾಲೆ ಚಂದನ ಮೊದಲಾದ ವಿಚಿತ್ರರೂಪವುಳ್ಳ ಸ್ಥೂಲಪದಾರ್ಥಗಳ ಸೇವನೆಯನ್ನು ಮಾಡುತ್ತಾನೆ; ಆದುದರಿಂದ ಈ ಶರೀರಕ್ಕೆ ಜಾಗ್ರದವಸ್ಥೆಯಲ್ಲಿ ಪ್ರಾಶಸ್ತ್ಯವಿರುತ್ತದೆ.

[೧ ಪ್ರಾಣಗಳೇ ಮೊದಲಾದ ಗುಂಪಿನಲ್ಲಿ ಅಭಿಮಾನವನ್ನು ಪಡೆದಿರುವ ಚೇತನನು.]

**ಸರ್ವೋಽಪಿ ಬಾಹ್ಯಸಂಸಾರಃ ಪುರುಷಸ್ಯ ಯದಾಶ್ರಯಃ**
**ವಿದ್ಧಿ ದೇಹಮಿದಂ ಸ್ಥೂಲಂ ಗೃಹವದ್ಗೃಹಮೇಧಿನಃ ॥ ೯೦ ॥**

**ಪುರುಷಸ್ಯ**-ಮನುಷ್ಯನಿಗೆ **ಸರ್ವಃ ಅಪಿ ಬಾಹ್ಯಸಂಸಾರಃ**=ಸಮಸ್ತ ಬಾಹ್ಯಸಂಸಾರವೂ **ಯದಾಶ್ರಯಃ**=ಯಾವುದನ್ನು ಆಶ್ರಯಿಸಿಕೊಂಡಿರುವುದೊ **ಇದಂ ಸ್ಥೂಲಂ ದೇಹಂ**=[ಅಂಥ] ಈ ಸ್ಥೂಲಶರೀರವನ್ನು **ಗೃಹಮೇಧಿನಃ**=ಗೃಹಸ್ಥನ **ಗೃಹವತ್**=ಮನೆಯಂತೆ **ವಿದ್ಧಿ**=ತಿಳಿ.

**೯೦.** ಮನುಷ್ಯನ ಬಾಹ್ಯ ಸಂಸಾರವೆಲ್ಲವೂ ಯಾವುದನ್ನು ಆಶ್ರಯಿಸಿಕೊಂಡಿರುವುದೊ ಅಂಥ ಈ ಸ್ಥೂಲಶರೀರವನ್ನು ಗೃಹಸ್ಥನ ಮನೆಯಂತೆ ಎಂದು ತಿಳಿ.

[ಜಗತ್ತಿನಲ್ಲಿ ಯಾವನೂ ತಾನು ವಾಸಿಸುತ್ತಿರುವ ಮನೆಯನ್ನು ತನ್ನ ಆತ್ಮನೆಂದು ಹೇಗೆ ತಿಳಿಯುವುದಿಲ್ಲವೊ ಹಾಗೆಯೇ ಸ್ಥೂಲದೇಹದಲ್ಲಿ 'ನಾನು' ಎಂಬ ಅಭಿಮಾನವನ್ನು ಎಂದಿಗೂ ಮಾಡಕೂಡದು ಎಂದರ್ಥ.]

**ಸ್ಥೂಲಸ್ಯ ಸಂಭವ-ಜರಾ-ಮರಣಾನಿ ಧರ್ಮಾಃ**
**ಸ್ಥೌಲ್ಯಾದಯೋ ಬಹುವಿಧಾಃ ಶಿಶುತಾದ್ಯವಸ್ಥಾಃ ।**
**ವರ್ಣಾಶ್ರಮಾದಿ-ನಿಯಮಾ ಬಹುಧಾಽಮಯಾಃ ಸ್ಯುಃ**
**ಪೂಜಾವಮಾನ-ಬಹುಮಾನ-ಮುಖಾ ವಿಶೇಷಾಃ**
**॥ ೯೧ ॥**

**ಸ್ಥೂಲಸ್ಯ**=ಸ್ಥೂಲಶರೀರಕ್ಕೆ **ಸಂಭವ-ಜರಾ-ಮರಣಾನಿ**=ಹುಟ್ಟು ಮುಪ್ಪು ಸಾವು—ಇವುಗಳು, **ಸ್ಥೌಲ್ಯಾದಯಃ**=ಸ್ಥೂಲತ್ವ ಮೊದಲಾದುವು **ಬಹುವಿಧಾಃ**=

ಬಹುವಿಧವಾದ **ಧರ್ಮಾಃ** = ಲಕ್ಷಣಗಳು; **ಶಿಶುತಾದಿ-ಅವಸ್ಥಾಃ** = ಶಿಶುತ್ವ ಮೊದಲಾದ ಅವಸ್ಥೆಗಳು, **ವರ್ಣಾಶ್ರಮಾದಿ-ನಿಯಮಾಃ** = ವರ್ಣಾಶ್ರಮಗಳೇ ಮೊದಲಾದ ನಿಯಮಗಳು, **ಬಹುಧಾ-ಆಮಯಾಃ** - ನಾನಾವಿಧವಾದ ರೋಗಗಳು, **ಪೂಜಾ-ಅವಮಾನ-ಬಹುಮಾನ-ಮುಖಾಃ** = ಪೂಜೆ ಅವಮಾನ ಬಹುಮಾನ ಮೊದಲಾದ **ವಿಶೇಷಾಃ** = ವಿಶೇಷಗಳು **ಸ್ಯುಃ** = ಇವೆ.

**೯೧.** ಹುಟ್ಟು-ಮುಪ್ಪು-ಸಾವುಗಳು,[೧] ಸ್ಥೂಲತ್ವ ಮೊದಲಾದುವು ಸ್ಥೂಲ ಶರೀರದ ಬಹುವಿಧವಾದ ಲಕ್ಷಣಗಳು; ಶಿಶುತ್ವ ಮೊದಲಾದುವು ಅದರ ಅವಸ್ಥೆಗಳು; ಅದಕ್ಕೆ ವರ್ಣಾಶ್ರಮಾದಿ ನಿಯಮಗಳಿವೆ; ಅದು ನಾನಾವಿಧ ವಾದ ರೋಗಗಳನ್ನು ಪಡೆಯುತ್ತದೆ ಮತ್ತು ಪೂಜೆ, ಅವಮಾನ, ಬಹು ಮಾನ ಮೊದಲಾದ ವಿಶೇಷಗಳನ್ನು ಹೊಂದುತ್ತದೆ.

[[೧] ಹುಟ್ಟುವುದು, ಇರುವುದು, ವರ್ಧಿಸುವುದು, ಪರಿಣಮಿಸುವುದು, ಕ್ಷಯ ವಾಗುವುದು ಮತ್ತು ನಾಶವಾಗುವುದು—ಇವು ಶರೀರದ ಆರು ವಿಕಾರಗಳೆಂದು ಯಾಸ್ಕರು ಹೇಳಿದ್ದಾರೆ.]

**ಬುದ್ಧೀಂದ್ರಿಯಾಣಿ ಶ್ರವಣಂ ತ್ವಗಕ್ಷಿ**
**ಘ್ರಾಣಂ ಚ ಜಿಹ್ವಾ ವಿಷಯಾವಬೋಧನಾತ್ ।**
**ವಾಕ್ಪಾಣಿಪಾದಾ ಗುದಮಪ್ಯುಪಸ್ಥಃ**
**ಕರ್ಮೇಂದ್ರಿಯಾಣಿ ಪ್ರವಣೇನ ಕರ್ಮಸು ॥ ೯೨ ॥**

**ಶ್ರವಣಂ** = ಕಿವಿ **ತ್ವಕ್** = ಚರ್ಮ **ಅಕ್ಷಿ** = ಕಣ್ಣು **ಘ್ರಾಣಂ** = ಮೂಗು **ಜಿಹ್ವಾ ಚ** = ಮತ್ತು ನಾಲಗೆ—ಇವು **ವಿಷಯಾವಬೋಧನಾತ್** = ವಿಷಯಗಳನ್ನು ತಿಳಿಸುವುದರಿಂದ **ಬುದ್ಧೀಂದ್ರಿಯಾಣಿ** = ಜ್ಞಾನೇಂದ್ರಿಯಗಳು; **ವಾಕ್-ಪಾಣಿ-ಪಾದಾಃ** = ವಾಕ್ಕು ಕೈಕಾಲುಗಳು **ಗುದಮ್** = ಗುದ **ಉಪಸ್ಥಃ ಅಪಿ** = ಉಪಸ್ಥ—ಇವು **ಕರ್ಮಸು** = ಕರ್ಮಗಳಲ್ಲಿ **ಪ್ರವಣೇನ** = ಪ್ರವೃತ್ತವಾಗಿರುವುದರಿಂದ **ಕರ್ಮೇಂದ್ರಿಯಾಣಿ** = ಕರ್ಮೇಂದ್ರಿಯಗಳು.

**೯೨.** ಕಿವಿಗಳು, ಚರ್ಮ, ಕಣ್ಣುಗಳು, ಮೂಗು, ನಾಲಗೆ—ಇವು ವಿಷಯಗಳನ್ನು ತಿಳಿಸುವುದರಿಂದ ಜ್ಞಾನೇಂದ್ರಿಯಗಳು ಎನಿಸುವುವು; ವಾಕ್ಕು, ಕೈಕಾಲುಗಳು, ಗುದೋಪಸ್ಥಗಳು—ಇವು ಕರ್ಮಗಳಲ್ಲಿ ಪ್ರವೃತ್ತವಾಗಿರು ವುದರಿಂದ ಕರ್ಮೇಂದ್ರಿಯಗಳು ಎನಿಸಿವೆ.

[ಸ್ಥೂಲಶರೀರವನ್ನು ವಿವರಿಸಿದಮೇಲೆ ಸೂಕ್ಷ್ಮಶರೀರವನ್ನು ನಿರೂಪಿಸಲು ಈ ಶ್ಲೋಕವು ಪ್ರಾರಂಭವಾಗಿದೆ.]

**ನಿಗದ್ಯತೇಽಂತಃಕರಣಂ ಮನೋಧೀ-**
**ರಹಂಕೃತಿಶ್ಚಿತ್ತಮಿತಿ ಸ್ವವೃತ್ತಿಭಿಃ ।**
**ಮನಸ್ತು ಸಂಕಲ್ಪ-ವಿಕಲ್ಪನಾದಿಭಿ-**
**ರ್ಬುದ್ಧಿಃ ಪದಾರ್ಥಾಧ್ಯವಸಾಯಧರ್ಮತಃ ॥ ೯೩ ॥**

**ಅತ್ರಾಭಿಮಾನಾದಹಮಿತ್ಯಹಂಕೃತಿಃ ।**
**ಸ್ವಾರ್ಥಾನುಸಂಧಾನ-ಗುಣೇನ ಚಿತ್ತಮ್ ॥ ೯೪ ॥**

**ಅಂತಃಕರಣಂ**-ಅಂತಃಕರಣವು **ಸ್ವ-ವೃತ್ತಿಭಿಃ**=ತನ್ನ ವೃತ್ತಿಗಳಿಗೆ ಅನುಸಾರವಾಗಿ **ಮನಃ**-ಮನಸ್ಸು **ಧೀಃ**-ಬುದ್ಧಿ **ಅಹಂಕೃತಿಃ**=ಅಹಂಕಾರ **ಚಿತ್ತಂ**=ಚಿತ್ತ **ಇತಿ**=ಎಂದು **ನಿಗದ್ಯತೇ**=ಹೇಳಲ್ಪಡುತ್ತದೆ; **ಸಂಕಲ್ಪ-ವಿಕಲ್ಪನಾದಿಭಿಃ ತು**=ಸಂಕಲ್ಪ ವಿಕಲ್ಪ ಮೊದಲಾದುವುಗಳಿಂದ **ಮನಃ**=ಮನಸ್ಸೆಂದೂ **ಪದಾರ್ಥ-ಅಧ್ಯವಸಾಯ-ಧರ್ಮತಃ**=ವಸ್ತುಗಳನ್ನು ನಿಶ್ಚಯಿಸುವ ಧರ್ಮವುಳ್ಳದ್ದರಿಂದ **ಬುದ್ಧಿಃ**-ಬುದ್ಧಿಯೆಂದೂ **ಅತ್ರ**-ಈ ಶರೀರದಲ್ಲಿ **ಅಹಂ**=ನಾನು **ಇತಿ**=ಎಂದು **ಅಭಿಮಾನಾತ್**-ಅಭಿಮಾನವಿರುವುದರಿಂದ **ಅಹಂಕೃತಿಃ**=ಅಹಂಕಾರವೆಂದೂ **ಸ್ವಾರ್ಥಾನುಸಂಧಾನ-ಗುಣೇನ**=ಸ್ವಸುಖಸಾಧನಗಳನ್ನು ಕುರಿತು ಚಿಂತಿಸುವುದರಿಂದ **ಚಿತ್ತಂ**=ಚಿತ್ತವೆಂದೂ [ಹೇಳಲ್ಪಡುತ್ತದೆ].

**೯೩-೯೪.** ಅಂತಃಕರಣವೇ ತನ್ನ ವೃತ್ತಿಗಳಿಗೆ ಅನುಸಾರವಾಗಿ ಮನಸ್ಸು ಬುದ್ಧಿ ಅಹಂಕಾರ ಚಿತ್ತ ಎಂದು ಹೇಳಲ್ಪಡುತ್ತದೆ. ಸಂಕಲ್ಪ-ವಿಕಲ್ಪಾದಿಗಳನ್ನು ಮಾಡುವುದರಿಂದ **ಮನಸ್ಸೆಂದೂ,** ವಸ್ತುವನ್ನು ನಿಶ್ಚಯಿಸುವ ಧರ್ಮವುಳ್ಳದ್ದರಿಂದ **ಬುದ್ಧಿಯೆಂದೂ,** ಶರೀರದಲ್ಲಿ 'ನಾನು' ಎಂಬ ಅಭಿಮಾನವನ್ನು ಮಾಡುವುದರಿಂದ **ಅಹಂಕಾರವೆಂದೂ,** ಸ್ವಸುಖಸಾಧನಗಳನ್ನು ಕುರಿತು ಚಿಂತಿಸುವುದರಿಂದ **ಚಿತ್ತವೆಂದೂ** ಹೇಳಲ್ಪಡುತ್ತದೆ.

[ಹಿಂದೆ ಬಾಹ್ಯಕರಣಗಳನ್ನು ಹೇಳಿದಮೇಲೆ ಈಗ ಅಂತಃಕರಣವನ್ನು ವಿಭಾಗಶಃ ನಿರೂಪಿಸಿದೆ.]

**ಪ್ರಾಣಾಪಾನ-ವ್ಯಾನೋದಾನ-ಸಮಾನಾ ಭವತ್ಯಸೌ ಪ್ರಾಣಃ ।**
**ಸ್ವಯಮೇವ ವೃತ್ತಿಭೇದಾದ್ವಿಕೃತೇರ್ಭೇದಾತ್ ಸುವರ್ಣ-**
**ಸಲಿಲವತ್ ॥ ೯೫ ॥**

**ವಿಕೃತೇಃ ಭೇದಾತ್**=ವಿಕಾರಭೇದದಿಂದ **ಸುವರ್ಣ-ಸಲಿಲವತ್**=ಸುವರ್ಣ ನೀರು ಇವುಗಳಂತೆ **ಅಸೌ ಪ್ರಾಣಃ**=ಈ ಪ್ರಾಣವು **ವೃತ್ತಿಭೇದಾತ್**=ವೃತ್ತಿಭೇದದಿಂದ **ಸ್ವಯಮ್ ಏವ**=ತಾನೇ **ಪ್ರಾಣ-ಅಪಾನ-ವ್ಯಾನ-ಉದಾನ-ಸಮಾನಾಃ**=ಪ್ರಾಣ ಅಪಾನ ವ್ಯಾನ ಉದಾನ ಸಮಾನ [ಎಂದು] **ಭವತಿ**=ಆಗುತ್ತದೆ.

**೯೫.** ಸುವರ್ಣ ನೀರು ಇವು ವಿಕಾರಭೇದದಿಂದ (ವಿವಿಧವಾದ ಹೆಸರುಗಳನ್ನು ಪಡೆಯುವಂತೆ)[೧] ಈ ಪ್ರಾಣವು ತಾನೊಂದೇ ಆಗಿದ್ದರೂ ಕ್ರಿಯಾಭೇದದಿಂದ ಪ್ರಾಣ ಅಪಾನ ವ್ಯಾನ ಉದಾನ ಸಮಾನ ಎಂಬ ನಾಮಗಳನ್ನು ಪಡೆಯುತ್ತದೆ.[೨]

[[೧] ಸುವರ್ಣವು ಕಟಕ ಕೇಯೂರ ಕುಂಡಲ ಮೊದಲಾದ ಹೆಸರುಗಳನ್ನು ಪಡೆಯುತ್ತದೆ; ನೀರು ತರಂಗ ನೊರೆ ಮೊದಲಾದ ಹೆಸರುಗಳನ್ನು ಪಡೆಯುತ್ತದೆ.

[೨] ಉಚ್ಛ್ವಾಸಾದಿಕರ್ಮಗಳುಳ್ಳ ಮುಂದುವರಿಯುವ ವೃತ್ತಿಯು ಪ್ರಾಣವೆನಿಸಿದೆ; ನಿಃಶ್ವಾಸಾದಿಕರ್ಮಗಳುಳ್ಳ ಹಿಂದಕ್ಕೆ ಹೋಗುವ ವೃತ್ತಿಯು ಅಪಾನ; ಪ್ರಾಣಾಪಾನಗಳ ಮಧ್ಯೆಯಿದ್ದು ವೀರ್ಯವತ್ಕರ್ಮವನ್ನು ಮಾಡಲು ಕಾರಣವಾಗಿರುವ ವೃತ್ತಿಯು ವ್ಯಾನವು; ಉತ್ಕ್ರಾಂತ್ಯಾದಿಕರ್ಮಕ್ಕೆ ಕಾರಣವಾಗಿ ಮೇಲಕ್ಕೇರುವ ಪ್ರಾಣವು ಉದಾನ; ಎಲ್ಲಾ ಅಂಗಗಳಿಗೂ ಸಮಾನವಾಗಿ ಅನ್ನರಸವನ್ನು ಒಯ್ಯುವ ವೃತ್ತಿಯು ಸಮಾನ (ಸೂತ್ರಭಾಷ್ಯ ೨. ೪. ೧೨).]

**ವಾಗಾದಿ ಪಂಚ ಶ್ರವಣಾದಿ ಪಂಚ**
**ಪ್ರಾಣಾದಿ ಪಂಚಾಭ್ರಮುಖಾನಿ ಪಂಚ।**
**ಬುದ್ಧ್ಯಾದ್ಯವಿದ್ಯಾಪಿ ಚ ಕಾಮ-ಕರ್ಮಣೀ**
**ಪುರ್ಯಷ್ಟಕಂ ಸೂಕ್ಷ್ಮಶರೀರಮಾಹುಃ ॥ ೯೬ ॥**

**ವಾಗಾದಿ ಪಂಚ** = ವಾಗಾದಿ ಪಂಚಕ **ಶ್ರವಣಾದಿ ಪಂಚ** = ಶ್ರವಣಾದಿ ಪಂಚಕ **ಪ್ರಾಣಾದಿ ಪಂಚ** = ಪ್ರಾಣಾದಿ ಪಂಚಕ **ಅಭ್ರಮುಖಾನಿ ಪಂಚ** = ಆಕಾಶಾದಿ ಭೂತಪಂಚಕ **ಬುದ್ಧ್ಯಾದಿ** = ಬುದ್ಧಿಯೇ ಮೊದಲಾದುವು **ಅವಿದ್ಯಾ** = ಅವಿದ್ಯೆ **ಅಪಿ ಚ** = ಮತ್ತು **ಕಾಮ-ಕರ್ಮಣೀ** = ಕಾಮ ಮತ್ತು ಕರ್ಮ—**ಪುರ್ಯಷ್ಟಕಂ** = ಈ ಎಂಟು ಪುರಗಳನ್ನು **ಸೂಕ್ಷ್ಮಶರೀರಂ** = ಸೂಕ್ಷ್ಮಶರೀರವೆಂದು **ಆಹುಃ** = ಹೇಳುತ್ತಾರೆ.

**೯೬.** ವಾಕ್ಕು ಮೊದಲಾದ ಐದು ಕರ್ಮೇಂದ್ರಿಯಗಳು, ಶ್ರವಣವೇ ಮೊದಲಾದ ಐದು ಜ್ಞಾನೇಂದ್ರಿಯಗಳು, ಪ್ರಾಣವೇ ಮೊದಲಾದ ಪಂಚ ಪ್ರಾಣಗಳು, ಆಕಾಶವೇ ಮೊದಲಾದ ಸೂಕ್ಷ್ಮಭೂತಗಳು, ಬುದ್ಧಿಯೇ ಮೊದಲಾದ ನಾಲ್ಕು, ಅವಿದ್ಯೆ, ಕಾಮ, ಕರ್ಮ— ಈ ಎಂಟು 'ಪುರಗಳನ್ನು' ಸೂಕ್ಷ್ಮಶರೀರವೆಂದು ಹೇಳುತ್ತಾರೆ.

[ಭಾಷ್ಯಕಾರರು ತಮ್ಮ ಸೂತ್ರಭಾಷ್ಯದಲ್ಲಿ (೨. ೪. ೭) ಈ ಸ್ಮೃತಿವಾಕ್ಯವನ್ನು ಉದ್ಧರಿಸಿರುತ್ತಾರೆ: 'ಪುರ್ಯಷ್ಟಕರೂಪವಾದ ಪ್ರಾಣಾದಿ ಸೂಕ್ಷ್ಮಶರೀರದಿಂದ ಅವನು ಕೂಡಿರುತ್ತಾನೆ; ಅದರಿಂದ ಬದ್ಧನಾಗಿರುವುದರಿಂದ ಅವನಿಗೆ ಬಂಧನ, ಅದರಿಂದ

ಮುಕ್ತನಾದಾಗ ಅವನಿಗೆ ಮೋಕ್ಷ' ಪುರ್ಯಷ್ಟಕೇನ ಲಿಂಗೇನ ಪ್ರಾಣಾದ್ಯೇನ ಸ ಯುಜ್ಯತೇ। ತೇನ ಬದ್ಧಸ್ಯ ವೈ ಬಂಧೋ ಮೋಕ್ಷೋ ಮುಕ್ತಸ್ಯ ತೇನ ಚ॥]

**ಇದಂ ಶರೀರಂ ಶೃಣು ಸೂಕ್ಷ್ಮಸಂಜ್ಞಿತಂ**
**ಲಿಂಗಂ ತ್ವಪಂಚೀಕೃತಭೂತ-ಸಂಭವಮ್ ।**
**ಸವಾಸನಂ ಕರ್ಮಫಲಾನುಭಾವಕಂ**
**ಸ್ವಾಜ್ಞಾನತೋಽನಾದಿರುಪಾಧಿರಾತ್ಮನಃ ॥ ೯೭ ॥**

**ಸೂಕ್ಷ್ಮಸಂಜ್ಞಿತಂ** = ಸೂಕ್ಷ್ಮವೆಂಬ ಹೆಸರುಳ್ಳ **ಅಪಂಚೀಕೃತಭೂತ-ಸಂಭವಂ** = ಪಂಚೀಕೃತವಾಗದ ಭೂತಗಳಿಂದ ಉತ್ಪನ್ನವಾದ **ಸವಾಸನಂ** = ವಾಸನೆಯಿಂದ ಕೂಡಿರುವ **ಕರ್ಮಫಲಾನುಭಾವಕಂ** = ಕರ್ಮಫಲಗಳ ಅನುಭವವನ್ನುಂಟು ಮಾಡುವ **ಇದಂ ಲಿಂಗಂ ಶರೀರಂ ತು**= ಈ ಲಿಂಗಶರೀರದ ವಿಷಯವನ್ನು **ಶೃಣು**= ಕೇಳು: [**ಅಯಂ** = ಇದು] **ಸ್ವ-ಅಜ್ಞಾನತಃ** = ತನ್ನ ಸ್ವರೂಪವನ್ನು ತಿಳಿಯದಿರುವುದರಿಂದ **ಆತ್ಮನಃ** = ಆತ್ಮನಿಗೆ **ಅನಾದಿಃ** = ಅನಾದಿಯಾದ **ಉಪಾಧಿಃ** = ಉಪಾಧಿಯು.

**೯೭.** ಸೂಕ್ಷ್ಮಶರೀರವೆಂಬ ಹೆಸರುಳ್ಳ, ಪಂಚೀಕೃತವಾಗದ ಭೂತಗಳಿಂದ ಉತ್ಪನ್ನವಾದ, ವಾಸನೆಯಿಂದ[೧] ಕೂಡಿರುವ ಮತ್ತು ಕರ್ಮಫಲಗಳ ಅನುಭವವನ್ನುಂಟುಮಾಡುವ[೨] ಈ ಲಿಂಗಶರೀರದ ವಿಷಯವನ್ನು ಕೇಳು: ತನ್ನ ಸ್ವರೂಪವನ್ನು ತಿಳಿಯದೆ ಇರುವುದರಿಂದ ಇದು ಆತ್ಮನಿಗೆ ಅನಾದಿಯಾದ ಉಪಾಧಿಯಾಗಿದೆ.

[ಇಲ್ಲಿ ಸೂಕ್ಷ್ಮಶರೀರದ ಅಥವಾ ಲಿಂಗದೇಹದ ಸ್ವರೂಪವನ್ನು ಹೇಳಿದೆ.
[೧] ಅನುಭವದಿಂದ ಉತ್ಪನ್ನವಾದ ಸಂಸ್ಕಾರಗಳಿಂದ.
[೨] ಕರ್ಮವು ಅದೃಷ್ಟರೂಪದಿಂದ ಲಿಂಗದೇಹದಲ್ಲಿ ಲಯವಾಗಿ ಸುಖದುಃಖ ರೂಪವಾದ ಫಲವನ್ನುಂಟುಮಾಡುತ್ತದೆ.]

**ಸ್ವಪ್ನೋ ಭವತ್ಯಸ್ಯ ವಿಭಕ್ತ್ಯವಸ್ಥಾ**
**ಸ್ವಮಾತ್ರಶೇಷೇಣ ವಿಭಾತಿ ಯತ್ರ ।**
**ಸ್ವಪ್ನೇ ತು ಬುದ್ಧಿಃ ಸ್ವಯಮೇವ ಜಾಗ್ರತ್-**
**ಕಾಲೀನ-ನಾನಾವಿಧ-ವಾಸನಾಭಿಃ ॥ ೯೮ ॥**

**ಕರ್ತ್ರಾದಿಭಾವಂ ಪ್ರತಿಪದ್ಯ ರಾಜತೇ**
**ಯತ್ರ ಸ್ವಯಂಜ್ಯೋತಿರಯಂ ಪರಾತ್ಮಾ ।**

**ಧೀಮಾತ್ರಕೋಪಾಧಿರಶೇಷಸಾಕ್ಷೀ**
**ನ ಲಿಪ್ಯತೇ ತತ್ಕೃತ-ಕರ್ಮಲೇಶೈಃ ।**
**ಯಸ್ಮಾದಸಂಗಸ್ತತ ಏವ ಕರ್ಮಭಿ-**
**ರ್ನ ಲಿಪ್ಯತೇ ಕಿಂಚಿದುಪಾಧಿನಾ ಕೃತೈಃ ॥ ೯೯ ॥**

**ಅಸ್ಯ**=ಇವನ ವಿಭಕ್ತಿ-**ಅವಸ್ಥಾ**=ಬೇರೆ ಸ್ಥಿತಿಯು **ಸ್ವಪ್ನಃ ಭವತಿ**=ಸ್ವಪ್ನವೆನಿಸುತ್ತದೆ—**ಯತ್ರ**=ಎಲ್ಲಿ **ಸ್ವಮಾತ್ರಶೇಷೇಣ**=ತಾನೊಬ್ಬನೇ ಶೇಷವಾಗಿ **ವಿಭಾತಿ**=ಪ್ರಕಾಶಿಸುತ್ತಾನೆಯೊ; **ಸ್ವಪ್ನೇ ತು**=ಸ್ವಪ್ನದಲ್ಲಿ **ಬುದ್ಧಿಃ**=ಅಂತಃಕರಣವು **ಸ್ವಯಮೇವ** = ತಾನೊಂದೇ **ಜಾಗ್ರತ್‌ಕಾಲೀನ-ನಾನಾವಿಧ-ವಾಸನಾಭಿಃ** = ಜಾಗ್ರದವಸ್ಥೆಯ ನಾನಾ ವಿಧವಾದ [ಅನುಭವಗಳ] ವಾಸನೆಗಳಿಂದ **ಕರ್ತ್ರಾದಿಭಾವಂ**=ಕರ್ತೃವೇ ಮೊದಲಾದ ಭಾವವನ್ನು ಹೊಂದಿ **ರಾಜತೇ**=ಪ್ರಕಾಶಿಸುತ್ತದೆ; **ಯತ್ರ**=ಎಲ್ಲಿ **ಅಯಂ ಪರಾತ್ಮಾ**=ಈ ಪರಮಾತ್ಮನು **ಸ್ವಯಂಜ್ಯೋತಿಃ**=ಸ್ವಯಂಜ್ಯೋತಿಯು; **ಧೀಮಾತ್ರಕ-ಉಪಾಧಿಃ**=ಕೇವಲ ಅಂತಃಕರಣವೆಂಬ ಉಪಾಧಿಯನ್ನು ಹೊಂದಿದವನಾದ, **ಅಶೇಷಸಾಕ್ಷೀ**=ಎಲ್ಲಕ್ಕೂ ಸಾಕ್ಷಿಯಾದ [ಈ ಆತ್ಮನು] **ತತ್ಕೃತ-ಕರ್ಮಲೇಶೈಃ**=ಅಂತಃಕರಣದಿಂದಾದ ಕರ್ಮಲೇಶದಿಂದಲೂ **ನ ಲಿಪ್ಯತೇ**=ಲಿಪ್ತನಾಗುವುದಿಲ್ಲ; **ಯಸ್ಮಾತ್**=ಯಾವ ಕಾರಣದಿಂದ **ಅಸಂಗಃ**=ಸಂಗರಹಿತನೊ **ತತಃ ಏವ**=ಆ ಕಾರಣದಿಂದಲೇ **ಉಪಾಧಿನಾ**=ಉಪಾಧಿಯಿಂದ **ಕೃತೈಃ**=ಮಾಡಲ್ಪಟ್ಟ **ಕರ್ಮಭಿಃ**=ಕರ್ಮಗಳಿಂದ **ಕಿಂಚಿತ್**=ಸ್ವಲ್ಪವಾದರೂ **ನ ಲಿಪ್ಯತೇ**=ಲಿಪ್ತನಾಗುವುದಿಲ್ಲ.

**೯೮-೯೯.** ಈ (ಸೂಕ್ಷ್ಮಶರೀರಾಭಿಮಾನಿಯಾದ) ಜೀವನಿಗೆ ಸ್ವಪ್ನವು ಜಾಗ್ರತ್ತಿಗಿಂತ ಭಿನ್ನವಾದ ಅವಸ್ಥೆ; ಅಲ್ಲಿ ಅವನು ತಾನೊಬ್ಬನೇ ಉಳಿದುಕೊಂಡು[೧] ಪ್ರಕಾಶಿಸುತ್ತಾನೆ. ಸ್ವಪ್ನದಲ್ಲಿ ಅಂತಃಕರಣವು ತಾನೊಂದೇ ಜಾಗ್ರದವಸ್ಥೆಯ ನಾನಾ ವಿಧವಾದ ಅನುಭವಗಳ ವಾಸನೆಗಳಿಂದ ಕರ್ತೃವೇ ಮೊದಲಾದ ಭಾವವನ್ನು ಹೊಂದಿ ಪ್ರಕಾಶಿಸುತ್ತದೆ; ಆದರೆ ಅಲ್ಲಿ ಈ ಪರಮಾತ್ಮನು ಸ್ವಯಂಜ್ಯೋತಿಯಾಗಿರುತ್ತಾನೆ.[೨] ಕೇವಲ ಅಂತಃಕರಣವೆಂಬ ಉಪಾಧಿಯನ್ನು ಹೊಂದಿದವನಾಗಿ ಅಶೇಷಸಾಕ್ಷಿಯಾಗಿರುವ ಆತ್ಮನು ಅಂತಃಕರಣದಿಂದಾದ ಕರ್ಮಲೇಶದಿಂದಲೂ ಲಿಪ್ತನಾಗುವುದಿಲ್ಲ. ಇವನು ಅಸಂಗನಾಗಿರುವುದರಿಂದಲೇ ಉಪಾಧಿಯಿಂದಾದ ಕರ್ಮಗಳಿಂದ ಸ್ವಲ್ಪವೂ ಲಿಪ್ತನಾಗುವುದಿಲ್ಲ.

[ಇಲ್ಲಿ ಸೂಕ್ಷ್ಮಶರೀರದ ವಿಶೇಷಾವಸ್ಥೆಯನ್ನು ಹೇಳಿದೆ.

೧ ಬಾಹ್ಯೇಂದ್ರಿಯಗಳ ಸಹಾಯವಿಲ್ಲದೆ.

೨ 'ಸ್ವಪ್ನದಲ್ಲಿ ಈ ಪುರುಷನು ಸ್ವಯಂಜ್ಯೋತಿಯಾಗಿರುತ್ತಾನೆ' **ಅತ್ರಾಯಂ ಪುರುಷಃ ಸ್ವಯಂಜ್ಯೋತಿರ್ಭವತಿ** (ಬೃಹದಾರಣ್ಯಕ ಉ. ೪. ೩. ೧೪).]

**ಸರ್ವವ್ಯಾಪೃತಿ-ಕರಣಂ ಲಿಂಗಮಿದಂ ಸ್ಯಾಚ್ಚಿದಾತ್ಮನಃ ಪುಂಸಃ ।**
**ವಾಸ್ಯಾದಿಕಮಿವ ತಕ್ಷ್ಣಸ್ತೇನೈವಾತ್ಮಾ ಭವತ್ಯಸಂಗೋಽಯಮ್ ॥ ೧೦೦ ॥**

ತಕ್ಷ್ಣಃ = ಬಡಗಿಗೆ **ವಾಸ್ಯಾದಿಕಮ್ ಇವ** = ಉಳಿ ಮೊದಲಾದುವುಗಳಂತೆ **ಚಿದಾತ್ಮನಃ** = ಚಿತ್ಸ್ವರೂಪನಾದ **ಪುಂಸಃ** = ಮನುಷ್ಯನಿಗೆ **ಇದಂ ಲಿಂಗಂ** = ಈ ಸೂಕ್ಷ್ಮಶರೀರವು **ಸರ್ವವ್ಯಾಪೃತಿಕರಣಂ ಸ್ಯಾತ್** = ಸಮಸ್ತ ಪ್ರವೃತ್ತಿಗೆ ಕರಣವಾಗಿರುತ್ತದೆ; **ತೇನ ಏವ** = ಆದುದರಿಂದಲೇ **ಅಯಮ್ ಆತ್ಮಾ** = ಈ ಆತ್ಮನು **ಅಸಂಗಃ ಭವತಿ** = ನಿರ್ಲಿಪ್ತನಾಗಿರುತ್ತಾನೆ.

**೧೦೦.** ಚಿತ್ಸ್ವರೂಪನಾದ ಮನುಷ್ಯನಿಗೆ ಈ ಸೂಕ್ಷ್ಮಶರೀರವು—ಬಡಗಿಗೆ ಉಳಿಯೇ ಮೊದಲಾದ ಕರಣಗಳಂತೆ—ಸಮಸ್ತ ಪ್ರವೃತ್ತಿಗೂ ಕರಣವಾಗಿರುತ್ತದೆ. ಆದುದರಿಂದಲೇ ಈ ಆತ್ಮನು ನಿರ್ಲಿಪ್ತನಾಗಿರುತ್ತಾನೆ.

[ಬಡಗಿಗೆ ಉಳಿ ಮೊದಲಾದ ಕರಣಗಳಿದ್ದರೆ ದುಃಖಾದಿ ಅನುಭವಗಳು ಉಂಟಾಗುತ್ತವೆ. ಕರಣರಹಿತನಾದ ಬಡಗಿಗೆ ಯಾವ ಆಯಾಸವೂ ಇಲ್ಲದಿರುವುದರಿಂದ ಸುಖವುಂಟಾಗುತ್ತದೆ. ಹಾಗೆಯೇ ಆತ್ಮನು ಸ್ವಪ್ನಜಾಗ್ರತ್ತುಗಳಲ್ಲಿ ಕರ್ತೃವಾಗಿ ದುಃಖಿಯಾಗಿರುತ್ತಾನೆ. ಅವನು ತನ್ನ ಶ್ರಮಪರಿಹಾರಕ್ಕಾಗಿ ಕಾರ್ಯಕರಣಸಂಘಾತವನ್ನು ತ್ಯಜಿಸಿ ತನ್ನ ಆತ್ಮನಾದ ಪರಬ್ರಹ್ಮವನ್ನು ಪ್ರವೇಶಿಸಿ ಸುಷುಪ್ತ್ಯವಸ್ಥೆಯಲ್ಲಿ ಅಕರ್ತೃವೂ ಸುಖಿಯೂ ಆಗುತ್ತಾನೆ. ವೇದಾಂತಸೂತ್ರಗಳ **ತಕ್ಷಾಧಿಕರಣ**ವನ್ನು ನೋಡಿ (೨. ೩. ೪೦).]

**ಅಂಧತ್ವ-ಮಂದತ್ವ-ಪಟುತ್ವ-ಧರ್ಮಾಃ**
**ಸೌಗುಣ್ಯ-ವೈಗುಣ್ಯ-ವಶಾದ್ಧಿ ಚಕ್ಷುಷಃ ।**
**ಬಾಧಿರ್ಯ-ಮೂಕತ್ವ-ಮುಖಾಸ್ತಥೈವ**
**ಶ್ರೋತ್ರಾದಿಧರ್ಮಾ ನ ತು ವೇತ್ತುರಾತ್ಮನಃ ॥೧೦೧॥**

**ಅಂಧತ್ವ-ಮಂದತ್ವ-ಪಟುತ್ವ-ಧರ್ಮಾಃ** = ಕುರುಡುತನ ಮಂದದೃಷ್ಟಿ ತೀಕ್ಷ್ಣದೃಷ್ಟಿ—ಇವೇ ಮೊದಲಾದ ಧರ್ಮಗಳು **ಚಕ್ಷುಷಃ** = ಕಣ್ಣಿನ **ಸೌಗುಣ್ಯ-ವೈಗುಣ್ಯ-ವಶಾತ್ ಹಿ** = ಸೌಗುಣ್ಯ ವೈಗುಣ್ಯ ಇವುಗಳಿಂದಲೇ [ಉಂಟಾಗುತ್ತವೆ]; **ತಥಾ ಏವ** = ಹಾಗೆಯೇ **ಬಾಧಿರ್ಯ-ಮೂಕತ್ವ-ಮುಖಾಃ** = ಕಿವುಡುತನ ಮೂಕತನ ಮೊದಲಾದುವು **ಶ್ರೋತ್ರಾದಿಧರ್ಮಾಃ** = ಕಿವಿಯೇ ಮೊದಲಾದುವುಗಳ ಧರ್ಮಗಳು, **ವೇತ್ತುಃ** = ಜ್ಞಾತೃವಾದ **ಆತ್ಮನಃ** = ಆತ್ಮನ **ನ ತು** = ಧರ್ಮಗಳಲ್ಲ.

**೧೦೧.** ಕಣ್ಣಿನ ಸೌಗುಣ್ಯದಿಂದ ತೀಕ್ಷ್ಣತ್ವವೂ ವೈಗುಣ್ಯದಿಂದ ಕುರುಡುತನವೂ ಮಂದತ್ವವೂ ಉಂಟಾಗುತ್ತವೆ. ಹೀಗೆಯೇ ಕಿವುಡುತನ

ಮೂಕತನ ಮೊದಲಾದುವು ಕಿವಿಯೇ ಮೊದಲಾದುವುಗಳ ಧರ್ಮವೇ ಹೊರತು ಜ್ಞಾತೃವಾದ ಆತ್ಮನ ಧರ್ಮಗಳಲ್ಲ.[೧]

[[೧] ಸಾಕ್ಷಿಯಾದ ಚಿದಾತ್ಮನಿಗೆ ಈ ಧರ್ಮಗಳಿರುವುದಿಲ್ಲ. 'ಸರ್ವಲೋಕದ ಕಣ್ಣಾದ ಸೂರ್ಯನು ಹೇಗೆ ಕಣ್ಣಿಗೆ ಸಂಬಂಧಪಟ್ಟ ಮತ್ತು ಬಾಹ್ಯವಾದ ದೋಷಗಳಿಂದ ಲಿಪ್ತನಾಗುವುದಿಲ್ಲವೊ ಹಾಗೆಯೇ ಏಕನಾದ ಸರ್ವಪ್ರಾಣಿಗಳ ಅಂತರಾತ್ಮನು ಲೋಕದ ದುಃಖದಿಂದ ಲಿಪ್ತನಾಗುವುದಿಲ್ಲ' **ಸೂರ್ಯೋ ಯಥಾ ಸರ್ವಲೋಕಸ್ಯ ಚಕ್ಷುರ್ನ ಲಿಪ್ಯತೇ ಚಾಕ್ಷುಷೈರ್ಬಾಹ್ಯದೋಷೈಃ। ಏಕಸ್ತಥಾ ಸರ್ವಭೂತಾಂತರಾತ್ಮಾ ನ ಲಿಪ್ಯತೇ ಲೋಕದುಃಖೇನ ಬಾಹ್ಯಃ॥** (ಕಠ ಉ. ೨. ೫. ೧೧). ]

**ಉಚ್ಛ್ವಾಸ-ನಿಃಶ್ವಾಸ-ವಿಜೃಂಭಣ-ಕ್ಷುತ್-**
**ಪ್ರಸ್ಯಂದನಾದ್ಯುತ್ಕ್ರಮಣಾದಿಕಾಃ ಕ್ರಿಯಾಃ।**
**ಪ್ರಾಣಾದಿ-ಧರ್ಮಾಣಿ ವದಂತಿ ತಜ್ಞಾಃ**
**ಪ್ರಾಣಸ್ಯ ಧರ್ಮಾವಶನಾಪಿಪಾಸೇ ॥ ೧೦೨ ॥**

**ಉಚ್ಛ್ವಾಸ-ನಿಃಶ್ವಾಸ-ವಿಜೃಂಭಣ-ಕ್ಷುತ್-ಪ್ರಸ್ಯಂದನಾದಿ-ಉತ್ಕ್ರಮಣಾದಿಕಾಃ ಕ್ರಿಯಾಃ**=ಉಚ್ಛ್ವಾಸ ನಿಃಶ್ವಾಸ ಆಕಳಿಕೆ ಸೀನು ಸ್ರಾವ ಶರೀರವನ್ನು ಬಿಡುವುದು ಮೊದಲಾದ ಕರ್ಮಗಳನ್ನು **ತಜ್ಞಾಃ**=ಪ್ರಾಣವಿದರು **ಪ್ರಾಣಾದಿ-ಧರ್ಮಾಣಿ**=ಪ್ರಾಣವೇ ಮೊದಲಾದುವುಗಳ ಧರ್ಮಗಳೆಂದು **ವದಂತಿ**=ಹೇಳುತ್ತಾರೆ; **ಅಶನಾ-ಪಿಪಾಸೇ**=ಹಸಿವುಬಾಯಾರಿಕೆಗಳು **ಪ್ರಾಣಸ್ಯ**=ಪ್ರಾಣದ **ಧರ್ಮೌ**=ಧರ್ಮಗಳು.

**೧೦೨.** ಉಚ್ಛ್ವಾಸ ನಿಃಶ್ವಾಸ ಆಕಳಿಕೆ ಸೀನು ಸ್ರಾವ ಶರೀರತ್ಯಾಗ—ಇವೇ ಮೊದಲಾದ ಕ್ರಿಯೆಗಳನ್ನು ಪ್ರಾಣವಿದರು ಪ್ರಾಣವೇ ಮೊದಲಾದುವುಗಳ ಧರ್ಮಗಳೆಂದು ಹೇಳುತ್ತಾರೆ. ಹಸಿವುಬಾಯಾರಿಕೆಗಳೂ ಪ್ರಾಣದ ಧರ್ಮಗಳು.

**ಅಂತಃಕರಣಮೇತೇಷು ಚಕ್ಷುರಾದಿಷು ವರ್ಷ್ಮಣಿ।**
**ಅಹಮಿತ್ಯಭಿಮಾನೇನ ತಿಷ್ಠತ್ಯಾಭಾಸ-ತೇಜಸಾ ॥ ೧೦೩ ॥**

**ಅಂತಃಕರಣಂ**=ಅಂತಃಕರಣವು **ಏತೇಷು ಚಕ್ಷುರಾದಿಷು**=ಈ ಚಕ್ಷುಸ್ಸೇ ಮೊದಲಾದುವುಗಳಲ್ಲಿಯೂ **ವರ್ಷ್ಮಣಿ** [ಚ]=[ಮತ್ತು] ಶರೀರದಲ್ಲಿಯೂ **ಅಹಮ್ ಇತಿ**='ನಾನು' ಎಂಬ **ಅಭಿಮಾನೇನ**=ಅಭಿಮಾನದಿಂದ **ಆಭಾಸ-ತೇಜಸಾ**=ಆತ್ಮನ ಪ್ರತಿಚ್ಛಾಯೆಯೊಂದಿಗೆ **ತಿಷ್ಠತಿ**=ಇರುತ್ತದೆ.

**೧೦೩.** ಅಂತಃಕರಣವು ಈ ಚಕ್ಷುಸ್ಸೇ ಮೊದಲಾದುವುಗಳಲ್ಲಿಯೂ[೧] ಮತ್ತು ಶರೀರದಲ್ಲಿಯೂ 'ನಾನು' ಎಂಬ ಅಭಿಮಾನವನ್ನು ಪಡೆದು[೨] ಆತ್ಮನ ಪ್ರತಿಚ್ಛಾಯೆಯೊಂದಿಗೆ[೩] ಕೂಡಿ ಇರುತ್ತದೆ.

[[೧] ಜ್ಞಾನೇಂದ್ರಿಯ-ಕರ್ಮೇಂದ್ರಿಯಗಳಲ್ಲಿ.
[೨] 'ನಾನು ನೋಡುತ್ತೇನೆ' ಇತ್ಯಾದಿ.
[೩] ಚಿತ್-ವಸ್ತುವಿನ ಸಾನ್ನಿಧ್ಯದಲ್ಲಿ ಅದರ ಪ್ರಕಾಶದಂತಿರುವ ತೋರ್ಕೆಯನ್ನು **ಚಿದಾಭಾಸ** ಎಂದು ಹೇಳುತ್ತಾರೆ. ಇದು ನಿಜವಾದ ಚೈತನ್ಯವಲ್ಲ.]

**ಅಹಂಕಾರಃ ಸ ವಿಜ್ಞೇಯಃ ಕರ್ತಾ ಭೋಕ್ತಾಭಿಮಾನ್ಯಯಮ್ ।**
**ಸತ್ತ್ವಾದಿಗುಣಯೋಗೇನ ಚಾವಸ್ಥಾತ್ರಯಮಶ್ನುತೇ ॥ ೧೦೪ ॥**

**ಸಃ** = ಅದೇ **ಅಹಂಕಾರಃ** = ಅಹಂಕಾರವೆಂದು **ವಿಜ್ಞೇಯಃ** = ತಿಳಿಯತಕ್ಕದ್ದು **ಅಯಂ** = ಇದು **ಕರ್ತಾ** = ಕರ್ತೃವೆಂದೂ **ಭೋಕ್ತಾ** = ಭೋಕ್ತೃವೆಂದೂ **ಅಭಿಮಾನೀ** = ಅಭಿಮಾನಿಯೆಂದೂ [ತಿಳಿಯತಕ್ಕದ್ದು]; **ಸತ್ತ್ವಾದಿಗುಣಯೋಗೇನ** = ಸತ್ತ್ವವೇ ಮೊದಲಾದ ಗುಣಗಳ ಸಂಬಂಧದಿಂದ **ಅವಸ್ಥಾತ್ರಯಂ ಚ** = ಅವಸ್ಥಾತ್ರಯವನ್ನು **ಅಶ್ನುತೇ** = ಹೊಂದುತ್ತದೆ.

**೧೦೪.** ಯಾವುದು ಶರೀರದಲ್ಲಿ ಅಭಿಮಾನವನ್ನು ಪಡೆದು ಕರ್ತೃವೂ ಭೋಕ್ತೃವೂ ಆಗುತ್ತದೆಯೊ ಮತ್ತು ಸತ್ತ್ವವೇ ಮೊದಲಾದ ಗುಣಗಳ ಸಂಬಂಧದಿಂದ (ಜಾಗ್ರತ್-ಸ್ವಪ್ನ-ಸುಷುಪ್ತಿಗಳೆಂಬ) ಅವಸ್ಥಾತ್ರಯವನ್ನು[೧] ಪಡೆಯುತ್ತದೆಯೊ ಅದನ್ನೇ ಅಹಂಕಾರವೆಂದು ತಿಳಿಯಬೇಕು.

[[೧] ರಜೋಗುಣಸಂಬಂಧದಿಂದ ಜಾಗ್ರದವಸ್ಥೆಯೂ ಸತ್ತ್ವಸಂಬಂಧದಿಂದ ಸ್ವಪ್ನವೂ ತಮಃಸಂಬಂಧದಿಂದ ಸುಷುಪ್ತಿಯೂ ಉಂಟಾಗುತ್ತವೆ.]

**ವಿಷಯಾಣಾಮಾನುಕೂಲ್ಯೇ ಸುಖೀ ದುಃಖೀ ವಿಪರ್ಯಯೇ ।**
**ಸುಖಂ ದುಃಖಂ ಚ ತದ್ಧರ್ಮಃ ಸದಾನಂದಸ್ಯ ನಾತ್ಮನಃ ॥ ೧೦೫ ॥**

**ವಿಷಯಾಣಾಂ** = ವಿಷಯಗಳ **ಆನುಕೂಲ್ಯೇ** = ಅನುಕೂಲತೆಯಲ್ಲಿ **ಸುಖೀ** = ಸುಖಿಯೆಂದೂ **ವಿಪರ್ಯಯೇ** = ಅನನುಕೂಲತೆಯಲ್ಲಿ **ದುಃಖೀ** = ದುಃಖಿಯೆಂದೂ [ವ್ಯವಹರಿಸಲ್ಪಡುತ್ತದೆ]; **ಸುಖಂ ದುಃಖಂ ಚ** = ಸುಖವೂ ದುಃಖವೂ **ತತ್-ಧರ್ಮಃ** = ಅದರ ಧರ್ಮವು, **ಸದಾನಂದಸ್ಯ** = ನಿತ್ಯವೂ ಆನಂದಸ್ವರೂಪನಾದ **ಆತ್ಮನಃ** = ಆತ್ಮನ **ನ** = ಧರ್ಮವಲ್ಲ.

**೧೦೫.** ಇಂದ್ರಿಯವಿಷಯಗಳು ಅನುಕೂಲವಾಗಿರುವಾಗ ಅದು ಸುಖಿಯಾಗುತ್ತದೆ, ಅವು ವಿಪರೀತವಾದಾಗ ದುಃಖಿಯಾಗುತ್ತದೆ. ಹೀಗೆ ಸುಖ

ದುಃಖಗಳು ಅಹಂಕಾರದ ಧರ್ಮಗಳಾಗಿರುತ್ತವೆಯೇ ಹೊರತು ನಿತ್ಯಾನಂದ ಸ್ವರೂಪನಾದ ಆತ್ಮನ ಧರ್ಮಗಳಲ್ಲ.

**ಆತ್ಮಾರ್ಥತ್ವೇನ ಹಿ ಪ್ರೇಯಾನ್ ವಿಷಯೋ ನ ಸ್ವತಃ ಪ್ರಿಯಃ ।**
**ಸ್ವತ ಏವ ಹಿ ಸರ್ವೇಷಾಮಾತ್ಮಾ ಪ್ರಿಯತಮೋ ಯತಃ ।**
**ತತ ಆತ್ಮಾ ಸದಾನಂದೋ ನಾಸ್ಯ ದುಃಖಂ ಕದಾಚನ ॥ ೧೦೬ ॥**

**ವಿಷಯಃ** = ವಿಷಯವು **ಆತ್ಮಾರ್ಥತ್ವೇನ ಹಿ** = ಆತ್ಮನ ಪ್ರಯೋಜನಕ್ಕಾಗಿ **ಪ್ರೇಯಾನ್** = ಪ್ರಿಯವಾಗಿರುವುದು, **ಸ್ವತಃ** = ತಾನೇ **ನ ಪ್ರಿಯಃ** = ಪ್ರಿಯವಲ್ಲ; **ಯತಃ** = ಯಾವ ಕಾರಣದಿಂದ **ಆತ್ಮಾ**-ಆತ್ಮನು **ಸ್ವತಃ ಏವ**=ತಾನೇ **ಸರ್ವೇಷಾಂ**-ಎಲ್ಲರಿಗೂ **ಪ್ರಿಯತಮಃ** = ಪ್ರಿಯತಮನೊ **ತತಃ** = ಆ ಕಾರಣದಿಂದ **ಆತ್ಮಾ**= ಆತ್ಮನು **ಸದಾನಂದಃ** = ಸದಾನಂದನು. **ಅಸ್ಯ** = ಇವನಿಗೆ **ಕದಾಚನ** = ಎಂದಿಗೂ **ದುಃಖಂ** = ದುಃಖವು **ನ** = ಇಲ್ಲ.

**೧೦೬.** ಇಂದ್ರಿಯವಿಷಯವು ಆತ್ಮನ ಪ್ರಯೋಜನಕ್ಕಾಗಿ ಪ್ರಿಯವಾಗಿರುವುದು, ತನ್ನಷ್ಟಕ್ಕೆ ತಾನೇ ಪ್ರಿಯವಲ್ಲ; ಏಕೆಂದರೆ ಆತ್ಮನು ಎಲ್ಲರಿಗೂ ತಾನೇ ಪ್ರಿಯತಮನಾಗಿರುತ್ತಾನೆ. ಆದುದರಿಂದ ಆತ್ಮನು ನಿತ್ಯಾನಂದ ಸ್ವರೂಪನಾಗಿರುತ್ತಾನೆ, ಇವನಿಗೆ ಎಂದಿಗೂ ದುಃಖವಿಲ್ಲ.

[ಜಗತ್ತಿನಲ್ಲಿ ಯಾವ ವಸ್ತುವೂ ತನ್ನಷ್ಟಕ್ಕೆ ತಾನೇ ಪ್ರಿಯವಾಗಿರುವುದಿಲ್ಲ. ಆತ್ಮನ ಪ್ರಯೋಜನಕ್ಕಾಗಿ ಪ್ರಿಯವಾಗಿರುತ್ತದೆ ಎಂದು ಯಾಜ್ಞವಲ್ಕ್ಯನು ಬಹುವಿಧವಾಗಿ ಮೈತ್ರೇಯಿಗೆ ಉಪದೇಶಿಸುತ್ತಾನೆ. ಆತ್ಮಪ್ರೀತಿಯು ಮುಖ್ಯವೆಂದೂ ಆತ್ಮಪ್ರೀತಿಗೆ ಸಾಧನವಾಗಿರುವ ಇತರ ವಸ್ತುಗಳಲ್ಲಿರುವ ಪ್ರೀತಿಯು ಗೌಣವೆಂದೂ ಅರಿಯಬೇಕು. ಬೃಹದಾರಣ್ಯಕ ಉ. ೨. ೪. ೫ ನೋಡಿ.]

**ಯತ್ಸುಷುಪ್ತೌ ನಿರ್ವಿಷಯ ಆತ್ಮಾನಂದೋಽನುಭೂಯತೇ ।**
**ಶ್ರುತಿಃ ಪ್ರತ್ಯಕ್ಷಮೈತಿಹ್ಯಮನುಮಾನಂ ಚ ಜಾಗ್ರತಿ ॥ ೧೦೭ ॥**

**ಸುಷುಪ್ತೌ** = ಸುಷುಪ್ತಿಯಲ್ಲಿ **ನಿರ್ವಿಷಯಃ**=ವಿಷಯರಹಿತವಾದ **ಆತ್ಮಾನಂದಃ** = ಆತ್ಮಾನಂದವು **ಅನುಭೂಯತೇ ಯತ್** = ಅನುಭವಿಸಲ್ಪಡುತ್ತದೆ ಎಂಬುದನ್ನು **ಶ್ರುತಿಃ** = ಶ್ರುತಿ **ಪ್ರತ್ಯಕ್ಷಂ** = ಪ್ರತ್ಯಕ್ಷ **ಐತಿಹ್ಯಂ** = ಆಪ್ತೋಕ್ತಿ **ಅನುಮಾನಂ ಚ** = ಮತ್ತು ಅನುಮಾನ–[ಇವು] **ಜಾಗ್ರತಿ** = ಸಿದ್ಧಪಡಿಸುತ್ತವೆ.

**೧೦೭.** ಸುಷುಪ್ತಿಯಲ್ಲಿ ಯಾವ ವಿಷಯದ ಸಹಾಯವೂ ಇಲ್ಲದೆ ಆತ್ಮಾನಂದವು ಅನುಭವಿಸಲ್ಪಡುತ್ತದೆ. ಶ್ರುತಿಯೂ ಪ್ರತ್ಯಕ್ಷವೂ ಆಪ್ತೋಕ್ತಿಯೂ ಅನುಮಾನವೂ ಇದನ್ನು ಸಿದ್ಧಪಡಿಸುತ್ತವೆ.

[ಸುಷುಪ್ತಿಯಲ್ಲಿ ಉಂಟಾಗುವ ಅನುಭವವು ಪ್ರತ್ಯಕ್ಷವು. ಜೀವನ್ಮುಕ್ತರಿಂದ ಪರಂಪರೆಯಾಗಿ ಬಂದ ಮಾತು ಐತಿಹ್ಯ. 'ಆತ್ಮನು ಪರಮಾನಂದಸ್ವರೂಪನು, ಏಕೆಂದರೆ ಅವನು ಪರಮಪ್ರೇಮಕ್ಕೆ ಆಸ್ಪದನಾಗಿರುವನು' ಎಂಬುದು ಅನುಮಾನ. 'ಇದು ಇವನ ಪರಮಗತಿ, ಇದು ಇವನ ಪರಮಸಂಪತ್ತು, ಇದು ಇವನ ಪರಮ ಲೋಕ, ಇದು ಇವನ ಪರಮಾನಂದ' **ಏಷಾಽಸ್ಯ ಪರಮಾ ಗತಿಃ, ಏಷಾಽಸ್ಯ ಪರಮಾ ಸಂಪತ್, ಏಷೋಽಸ್ಯ ಪರಮೋ ಲೋಕಃ, ಏಷೋಽಸ್ಯ ಪರಮ ಆನಂದಃ** (ಬೃಹದಾರಣ್ಯಕ ಉ. ೪. ೩. ೩೨) ಎಂದು ಅನೇಕ ಶ್ರುತಿಗಳು ನಾವು ಸುಷುಪ್ತಿಯಲ್ಲಿ ಅನುಭವಿಸುವ ಪರಮಾನಂದವನ್ನು ಹೇಳುತ್ತವೆ.]

**ಅವ್ಯಕ್ತನಾಮ್ನೀ ಪರಮೇಶಶಕ್ತಿ-**
**ರನಾದ್ಯವಿದ್ಯಾ ತ್ರಿಗುಣಾತ್ಮಿಕಾ ಪರಾ ।**
**ಕಾರ್ಯಾನುಮೇಯಾ ಸುಧಿಯೈವ ಮಾಯಾ**
**ಯಯಾ ಜಗತ್ಸರ್ವಮಿದಂ ಪ್ರಸೂಯತೇ ॥ ೧೦೮ ॥**

**ಯಯಾ**=ಯಾವುದರಿಂದ **ಇದಂ ಸರ್ವಂ ಜಗತ್**=ಈ ಜಗತ್ತೆಲ್ಲ **ಪ್ರಸೂಯತೇ**=ಉತ್ಪನ್ನವಾಗುತ್ತದೆಯೊ [ಆ] **ಅವ್ಯಕ್ತನಾಮ್ನೀ**=ಅವ್ಯಕ್ತವೆಂಬ ಹೆಸರುಳ್ಳ **ಪರಮೇಶಶಕ್ತಿಃ**=ಈಶ್ವರಶಕ್ತಿಯಾದ **ಅನಾದ್ಯವಿದ್ಯಾ**=ಅನಾದಿಕಾಲದಿಂದ ಅವಿದ್ಯೆಯಾಗಿರುವ **ತ್ರಿಗುಣಾತ್ಮಿಕಾ**=ತ್ರಿಗುಣಸ್ವರೂಪವಾದ **ಪರಾ**=ಶ್ರೇಷ್ಠವಾದ **ಮಾಯಾ**=ಮಾಯೆಯು **ಸುಧಿಯಾ ಏವ**=ಧೀಮಂತನಿಂದಲೇ **ಕಾರ್ಯಾನುಮೇಯಾ**=ಕಾರ್ಯದಿಂದಲೇ ಅನುಮಾನಿಸಲು ಯೋಗ್ಯವಾಗಿದೆ.

**೧೦೮.** ಅವಿದ್ಯೆಗೆ ಅಥವಾ ಮಾಯೆಗೆ ಅವ್ಯಕ್ತವೆಂಬ ಹೆಸರಿದೆ.[೧] ಇದು ಅನಾದಿ, ಪರಮೇಶ್ವರನ ಶಕ್ತಿ,[೨] ಸತ್ತ್ವ-ರಜಸ್ತಮೋಗುಣಗಳನ್ನೊಳಕೊಂಡಿದೆ. ತನ್ನ ಕಾರ್ಯವರ್ಗಕ್ಕಿಂತ ಶ್ರೇಷ್ಠವಾದದ್ದು.[೩] ಇದನ್ನು ಧೀಮಂತನಾದವನು ಕಾರ್ಯದಿಂದ ಅನುಮಾನಿಸಬೇಕು.[೪] ಇದರಿಂದ ಈ ಜಗತ್ತೆಲ್ಲ ಉತ್ಪನ್ನವಾಗಿದೆ.[೫]

[ಇಲ್ಲಿ ಮಾಯೆಯ ಸ್ವರೂಪವನ್ನೂ ಕಾರ್ಯಗಳನ್ನೂ ಹೇಳಿದೆ.

[೧] 'ಮಹತ್ತಿಗಿಂತ ಅವ್ಯಕ್ತವು ಶ್ರೇಷ್ಠವಾದುದು' **ಮಹತಃ ಪರಮವ್ಯಕ್ತಮ್** (ಕಠ ಉ. ೧. ३. ೧೧).

[೨] 'ಪ್ರಕೃತಿಯನ್ನು ಮಾಯೆಯೆಂದು ಅರಿತುಕೊ; ಮಹೇಶ್ವರನು ಮಾಯೆಯ ಈಶನು' **ಮಾಯಾಂ ತು ಪ್ರಕೃತಿಂ ವಿದ್ಯಾನ್ಮಾಯಿನಂ ಚ ಮಹೇಶ್ವರಮ್** (ಶ್ವೇತಾಶ್ವತರ ಉ. ೪. ೧೦).

[೩] ಕಾರಣವು ಯಾವಾಗಲೂ ತನ್ನ ಕಾರ್ಯಕ್ಕಿಂತ ಶ್ರೇಷ್ಠವಾದದ್ದು.

[4] ಪ್ರತ್ಯಕ್ಷದಿಂದ ಅರಿತುಕೊಳ್ಳಲು ಆಗುವುದಿಲ್ಲ.
[5] 'ಅವ್ಯಕ್ತದಿಂದ ಎಲ್ಲಾ ಚರಾಚರವಸ್ತುಗಳೂ ಹುಟ್ಟುತ್ತವೆ' **ಅವ್ಯಕ್ತಾದ್-ವ್ಯಕ್ತಯಃ ಸರ್ವಾಃ ಪ್ರಭವಂತಿ** (ಗೀತಾ ೧೫. ೧೮). ]

**ಸನ್ನಾಪ್ಯಸನ್ನಾಪ್ಯುಭಯಾತ್ಮಿಕಾ ನೋ**
**ಭಿನ್ನಾಪ್ಯಭಿನ್ನಾಪ್ಯುಭಯಾತ್ಮಿಕಾ ನೋ ।**
**ಸಾಂಗಾಪ್ಯನಂಗಾಪ್ಯುಭಯಾತ್ಮಿಕಾ ನೋ**
**ಮಹಾದ್ಭುತಾऽನಿರ್ವಚನೀಯರೂಪಾ ॥ ೧೦೯ ॥**

[ಈ ಮಾಯೆಯು] **ಸತ್ ನ** = ಸತ್ ಅಲ್ಲ, **ಅಪಿ** = ಮತ್ತು **ಅಸತ್ ನ** - ಅಸತ್ ಅಲ್ಲ, **ಅಪಿ** - ಮತ್ತು **ಉಭಯಾತ್ಮಿಕಾ ನ ಉ** - ಈ ಎರಡೂ ಅಲ್ಲ; **ಭಿನ್ನಾ ಅಪಿ ಅಭಿನ್ನಾ ಅಪಿ ಉಭಯಾತ್ಮಿಕಾ ನ ಉ** = ಭಿನ್ನವೂ ಅಲ್ಲ, ಅಭಿನ್ನವೂ ಅಲ್ಲ, ಈ ಎರಡೂ ಅಲ್ಲ; **ಸಾಂಗಾ ಅಪಿ ಅನಂಗಾ ಅಪಿ ಉಭಯಾತ್ಮಿಕಾ ನ ಉ** = ಸಾವಯವವೂ ಅಲ್ಲ, ನಿರವಯವವೂ ಅಲ್ಲ, ಈ ಎರಡೂ ಅಲ್ಲ; **ಮಹಾದ್ಭುತಾ** = ಅತ್ಯಂತ ಅದ್ಭುತವಾದುದು. **ಅನಿರ್ವಚನೀಯರೂಪಾ** = ಸ್ವರೂಪವನ್ನು ಹೇಳಲು ಅಶಕ್ಯವಾದುದು.

**೧೦೯.** (ಪರಮೇಶ್ವರನ ಶಕ್ತಿಯಾದ ಮಾಯೆಯು) ಸದ್ರೂಪವಲ್ಲ,[1] ಅಸದ್ರೂಪವಲ್ಲ,[2] ಸತ್-ಅಸತ್-ರೂಪವೂ[3] ಅಲ್ಲ; (ಪರಮೇಶ್ವರನಿಗಿಂತ) ಭಿನ್ನವೂ[4] ಅಲ್ಲ, ಅಭಿನ್ನವೂ[5] ಅಲ್ಲ, ಭಿನ್ನ-ಅಭಿನ್ನವೂ ಅಲ್ಲ; (ಅದು) ಸಾವಯವವೂ[6] ಅಲ್ಲ, ನಿರವಯವವೂ[7] ಅಲ್ಲ, ಸಾವಯವ-ನಿರವಯವವೂ ಅಲ್ಲ; (ಅದು) ಅತ್ಯಂತ ಅದ್ಭುತವಾಗಿದೆ, ಅನಿರ್ವಚನೀಯರೂಪವಾಗಿದೆ.[8]

[[1] ಸದ್ರೂಪವಾಗಿದ್ದರೆ ಜ್ಞಾನವು ಅದನ್ನು ನಾಶಮಾಡಲು ಶಕ್ತವಾಗುತ್ತಿರಲಿಲ್ಲ.
[2] ಅಸದ್ರೂಪವಾಗಿದ್ದರೆ ಅದರಿಂದ ಯಾವ ಕಾರ್ಯವೂ ಉಂಟಾಗುತ್ತಿರಲಿಲ್ಲ.
[3] ಒಂದೇ ವಸ್ತುವಿಗೆ ವಿರುದ್ಧಧರ್ಮಗಳಿರುವುದಿಲ್ಲ.
[4] ಭಿನ್ನವಾಗಿದ್ದರೆ ಅದ್ವೈತಕ್ಕೆ ಹಾನಿಯಾಗುತ್ತಿತ್ತು.
[5] ಅಗ್ನಿ ಮತ್ತು ಅದರ ದಾಹಕಶಕ್ತಿ ಒಂದೇ ಆಗಿರಲಾರದು. ಹಾಗೆಯೇ ಪರಮೇಶ್ವರನಿಗಿಂತ ಭಿನ್ನವಾಗಿದೆ.
[6] ಏಕೆಂದರೆ ಇದರಲ್ಲಿ ಯಾವ ಅವಯವವೂ ಕಂಡುಬರುತ್ತಿಲ್ಲ. ಮತ್ತು ಅವಯವವುಳ್ಳದ್ದಕ್ಕೆ ಜನ್ಮವಿರುತ್ತದೆ.
[7] ತ್ರಿಗುಣಗಳಿರುವುದರಿಂದ. ನಿರವಯವವಾಗಿದ್ದರೆ ಪರಿಣಾಮವು ಸಂಭವಿಸುತ್ತಿರಲಿಲ್ಲ.
[8] ಯಾವ ಲಕ್ಷಣವನ್ನು ಹೇಳಲೂ ಅಸಾಧ್ಯವಾದುದರಿಂದ ಅನಿರ್ವಚನೀಯವು.]

**ಶುದ್ಧಾದ್ವಯಬ್ರಹ್ಮ-ವಿಬೋಧ-ನಾಶ್ಯಾ**
**ಸರ್ಪಭ್ರಮೋ ರಜ್ಜುವಿವೇಕತೋ ಯಥಾ ।**
**ರಜಸ್ತಮಃಸತ್ತ್ವಮಿತಿ ಪ್ರಸಿದ್ಧಾ**
**ಗುಣಾಸ್ತದೀಯಾಃ ಪ್ರಥಿತೈಃ ಸ್ವಕಾರ್ಯೈಃ ॥೧೧೦॥**

**ರಜ್ಜು-ವಿವೇಕತಃ**=ಹಗ್ಗವೆಂಬ ವಿವೇಕದಿಂದ **ಸರ್ಪಭ್ರಮಃ**=ಸರ್ಪಭ್ರಾಂತಿಯು **ಯಥಾ** [ನಶ್ಯತಿ]=ಹೇಗೆ [ನಾಶವಾಗುವುದೊ] [**ತಥಾ ಮಾಯಾ**=ಹಾಗೆಯೇ ಮಾಯೆಯು] **ಶುದ್ಧ-ಅದ್ವಯಬ್ರಹ್ಮ-ವಿಬೋಧ-ನಾಶ್ಯಾ**=ಶುದ್ಧವೂ ಅದ್ವಿತೀಯವೂ ಆದ ಪರಬ್ರಹ್ಮದ ಜ್ಞಾನದಿಂದ ನಾಶವಾಗತಕ್ಕದ್ದು; **ತದೀಯಾಃ**=ಆ ಮಾಯೆಯ ಸಂಬಂಧಿಗಳಾದ **ರಜಃ-ತಮಃ-ಸತ್ತ್ವಮಿತಿ**=ರಜಸ್ಸು ತಮಸ್ಸು ಸತ್ತ್ವ ಎಂಬ **ಗುಣಾಃ**=ಗುಣಗಳು **ಪ್ರಥಿತೈಃ**=ವ್ಯಕ್ತವಾಗಿರುವ **ಸ್ವಕಾರ್ಯೈಃ**=ತಮ್ಮ ಕಾರ್ಯಗಳಿಂದ **ಪ್ರಸಿದ್ಧಾಃ**=ಪ್ರಸಿದ್ಧವಾಗಿವೆ.

**೧೧೦.** 'ಇದು ಹಾವು' ಎಂಬ ಭ್ರಾಂತಿಯು 'ಇದು ಹಗ್ಗ' ಎಂಬ ವಿವೇಕದಿಂದ ಹೇಗೆ ನಾಶವಾಗುವುದೊ ಹಾಗೆ ಶುದ್ಧವೂ ಅದ್ವಿತೀಯವೂ ಆದ ಪರಬ್ರಹ್ಮದ ಜ್ಞಾನದಿಂದ ಈ (ಮಾಯೆಯು) ನಾಶವಾಗುವುದು. ಸತ್ತ್ವ ರಜಸ್ಸು ತಮಸ್ಸು ಎಂಬ ಆ ಮಾಯೆಯ ಸಂಬಂಧಿಗಳಾದ ಗುಣಗಳು ವ್ಯಕ್ತವಾಗಿರುವ ತಮ್ಮ ಕಾರ್ಯಗಳಿಂದಲೇ ಪ್ರಸಿದ್ಧವಾಗಿವೆ.[೧]

[[೧] ಗುಣಗಳು ನಮಗೆ ಪ್ರತ್ಯಕ್ಷವಲ್ಲದುದರಿಂದ ವ್ಯಕ್ತವಾಗಿರುವ ಕಾರ್ಯಗಳ ಮೂಲಕವೇ ಅವುಗಳನ್ನು ಅರಿತುಕೊಳ್ಳಬೇಕು.]

**ವಿಕ್ಷೇಪಶಕ್ತೀ ರಜಸಃ ಕ್ರಿಯಾತ್ಮಿಕಾ**
**ಯತಃ ಪ್ರವೃತ್ತಿಃ ಪ್ರಸೃತಾ ಪುರಾಣೀ ।**
**ರಾಗಾದಯೋಽಸ್ಯಾಃ ಪ್ರಭವಂತಿ ನಿತ್ಯಂ**
**ದುಃಖಾದಯೋ ಯೇ ಮನಸೋ ವಿಕಾರಾಃ ॥೧೧೧॥**

**ಕ್ರಿಯಾತ್ಮಿಕಾ**=ಕ್ರಿಯಾತ್ಮಕವಾದ **ವಿಕ್ಷೇಪಶಕ್ತಿಃ**=ವಿಕ್ಷೇಪಶಕ್ತಿಯು **ರಜಸಃ**=ರಜಸ್ಸಿಗೆ ಸೇರಿದ್ದು, **ಯತಃ**=ಯಾವುದರಿಂದ **ಪುರಾಣೀ**=ಪುರಾತನವಾದ **ಪ್ರವೃತ್ತಿಃ** ಪ್ರವೃತ್ತಿಯು **ಪ್ರಸೃತಾ**=ಹರಡಿಕೊಂಡಿರುವುದೊ; **ಮನಸಃ**=ಮನಸ್ಸಿನ **ರಾಗಾದಯಃ**=ರಾಗವೇ ಮೊದಲಾದ **ದುಃಖಾದಯಃ**=ದುಃಖವೇ ಮೊದಲಾದ **ಯೇ ವಿಕಾರಾಃ**=ಯಾವ ವಿಕಾರಗಳೊ [ಅವು] **ಅಸ್ಯಾಃ**=ಇದರಿಂದ **ನಿತ್ಯಂ**=ಯಾವಾಗಲೂ **ಪ್ರಭವಂತಿ**=ಉಂಟಾಗುತ್ತಿರುತ್ತವೆ.

**೧೧೧.** ಕ್ರಿಯಾತ್ಮಕವಾದ ವಿಕ್ಷೇಪಶಕ್ತಿಯು[೧] ರಜೋಗುಣಕ್ಕೆ ಸೇರಿದ್ದು. ಇದರಿಂದ ಬಹುಕಾಲದಿಂದಲೂ ಸಮಸ್ತ ಪ್ರವರ್ತನೆಯು ಹರಡಿಕೊಂಡಿದೆ. ಮನಸ್ಸಿಗೆ ಸೇರಿದ ರಾಗವೇ ಮೊದಲಾದುವೂ ದುಃಖವೇ ಮೊದಲಾದುವೂ ಈ ವಿಕ್ಷೇಪಶಕ್ತಿಯಿಂದ ಯಾವಾಗಲೂ ಉಂಟಾಗುತ್ತಿರುವುವು.

[೧ ಆವರಣಶಕ್ತಿಯು ವಸ್ತುವಿನ ಸ್ವರೂಪವನ್ನು ಮುಚ್ಚಿದಾಗ ವಿಕ್ಷೇಪಶಕ್ತಿಯು ಒಂದು ಹೊಸ ರೂಪವನ್ನು ಸೃಷ್ಟಿಸುತ್ತದೆ.]

**ಕಾಮಃ ಕ್ರೋಧೋ ಲೋಭ-ದಂಭಾದ್ಯಸೂಯಾ-**
**ಹಂಕಾರೇರ್ಷ್ಯಾ-ಮತ್ಸರಾದ್ಯಾಸ್ತು ಘೋರಾಃ ।**
**ಧರ್ಮಾ ಏತೇ ರಾಜಸಾಃ ಪುಂಪ್ರವೃತ್ತಿ-**
**ರ್ಯಸ್ಮಾದೇಷಾ ತದ್ರಜೋ ಬಂಧಹೇತುಃ ॥ ೧೧೨ ॥**

**ಕಾಮಃ** = ಕಾಮ **ಕ್ರೋಧಃ** = ಕ್ರೋಧ **ಲೋಭ-ದಂಭಾದಿ-ಅಸೂಯಾ-ಅಹಂಕಾರ-ಈರ್ಷ್ಯಾ-ಮತ್ಸರಾದ್ಯಾಃ ತು** = ಲೋಭ ದಂಭ ಮೊದಲಾದ, ಅಸೂಯೆ, ಅಹಂಕಾರ, ಈರ್ಷ್ಯೆ, ಮತ್ಸರ ಮೊದಲಾದ **ಏತೇ ಘೋರಾಃ ಧರ್ಮಾಃ** = ಈ ಘೋರವಾದ ಧರ್ಮಗಳು **ರಾಜಸಾಃ** = ರಜೋಗುಣಕ್ಕೆ ಸೇರಿದುವು, **ಯಸ್ಮಾತ್** = ಯಾವ ರಜೋಗುಣದಿಂದ **ಏಷಾ ಪುಂಪ್ರವೃತ್ತಿಃ** = ಈ ಪುರುಷಪ್ರವೃತ್ತಿಯು [ಉಂಟಾಗಿದೆಯೊ]; **ತತ್** = ಆದುದರಿಂದ **ರಜಃ** = ರಜಸ್ಸು **ಬಂಧಹೇತುಃ** - ಬಂಧಕ್ಕೆ ಕಾರಣ.

**೧೧೨.** ಕಾಮ ಕ್ರೋಧ ಲೋಭ ದಂಭ ಅಸೂಯೆ ಅಹಂಕಾರ ಈರ್ಷ್ಯೆ ಮತ್ಸರ, ಇವೇ ಮೊದಲಾದ ಘೋರಧರ್ಮಗಳು—ಯಾವುದರಿಂದ ಈ ಪುರುಷಪ್ರವೃತ್ತಿಯು ಉಂಟಾಗಿರುವುದೊ—ಆ ರಜೋಗುಣಕ್ಕೆ ಸಂಬಂಧಪಟ್ಟವು. ಆದುದರಿಂದ ರಜೋಗುಣವು ಬಂಧಕ್ಕೆ ಕಾರಣವಾಗಿದೆ.

**ಏಷಾಽಽವೃತಿರ್ನಾಮ ತಮೋಗುಣಸ್ಯ**
**ಶಕ್ತಿರ್ಯಯಾ ವಸ್ತ್ವವಭಾಸತೇಽನ್ಯಥಾ ।**
**ಸೈಷಾ ನಿದಾನಂ ಪುರುಷಸ್ಯ ಸಂಸೃತೇ-**
**ರ್ವಿಕ್ಷೇಪಶಕ್ತೇಃ ಪ್ರವಣಸ್ಯ ಹೇತುಃ ॥ ೧೧೩ ॥**

**ಯಯಾ** = ಯಾವುದರಿಂದ **ವಸ್ತು** = ವಸ್ತುವು **ಅನ್ಯಥಾ** = ಬೇರೆ ಬಗೆಯಾಗಿ **ಅವಭಾಸತೇ** = ತೋರುತ್ತದೆಯೊ **ಏಷಾ** = ಇದೇ **ತಮೋಗುಣಸ್ಯ** = ತಮೋಗುಣದ **ಆವೃತಿಃ ನಾಮ** = ಆವರಣ ಎಂಬ **ಶಕ್ತಿಃ** = ಶಕ್ತಿಯು; **ಸಾ ಏಷಾ** = ಆ ಇದೇ

**ಪುರುಷಸ್ಯ** = ಮನುಷ್ಯನ **ಸಂಸೃತೇಃ** = ಸಂಸಾರಕ್ಕೆ **ನಿದಾನಂ** = ಕಾರಣವು, [ಮತ್ತು] **ವಿಕ್ಷೇಪಶಕ್ತೇಃ** = ವಿಕ್ಷೇಪಶಕ್ತಿಯ **ಪ್ರವಣಸ್ಯ** = ಕಾರ್ಯೋನ್ಮುಖತ್ವಕ್ಕೆ **ಹೇತುಃ** = ಕಾರಣವು.

**೧೧೩.** ಯಾವುದರಿಂದ ವಸ್ತುವು ಬೇರೊಂದು ಬಗೆಯಾಗಿ ತೋರುತ್ತದೆಯೊ ಆ ಇದೇ ತಮೋಗುಣದ ಆವರಣವೆಂಬ ಪ್ರಸಿದ್ಧವಾದ ಶಕ್ತಿಯು. ಇದೇ ಮನುಷ್ಯನ ಸಂಸಾರಕ್ಕೂ ವಿಕ್ಷೇಪಶಕ್ತಿಯ ಕಾರ್ಯೋನ್ಮುಖತ್ವಕ್ಕೂ ಕಾರಣವಾಗಿದೆ.

**ಪ್ರಜ್ಞಾವಾನಪಿ ಪಂಡಿತೋಽಪಿ ಚತುರೋ-**
**ಽಪ್ಯತ್ಯಂತಸೂಕ್ಷ್ಮಾರ್ಥದೃಗ್**
**ವ್ಯಾಲೀಢಸ್ತಮಸಾ ನ ವೇತ್ತಿ ಬಹುಧಾ**
**ಸಂಬೋಧಿತೋಽಪಿ ಸ್ಫುಟಮ್ ।**
**ಭ್ರಾಂತ್ಯಾಽಽರೋಪಿತಮೇವ ಸಾಧು ಕಲಯ-**
**ತ್ಯಾಲಂಬತೇ ತದ್ಗುಣಾನ್**
**ಹಂತಾಸೌ ಪ್ರಬಲಾ ದುರಂತತಮಸಃ**
**ಶಕ್ತಿರ್ಮಹತ್ಯಾವೃತಿಃ ॥ ೧೧೪ ॥**

**ಪ್ರಜ್ಞಾವಾನ್ ಅಪಿ** = ಮೇಧಾವಿಯಾಗಿದ್ದರೂ **ಪಂಡಿತಃ ಅಪಿ** = ಶಾಸ್ತ್ರಜ್ಞನಾಗಿದ್ದರೂ **ಚತುರಃ ಅಪಿ** = ಚತುರನಾಗಿದ್ದರೂ **ಅತ್ಯಂತ-ಸೂಕ್ಷ್ಮ-ಅರ್ಥದೃಕ್** = ಅತ್ಯಂತ ಸೂಕ್ಷ್ಮವಾದ ವಿಷಯಗಳನ್ನು ನೋಡಿರುವವನಾದರೂ **ತಮಸಾ** = ತಮಸ್ಸಿನಿಂದ **ವ್ಯಾಲೀಢಃ** = ಮುಚ್ಚಲ್ಪಟ್ಟವನು **ಬಹುಧಾ** = ಅನೇಕ ವಿಧವಾಗಿ **ಸ್ಫುಟಂ ಸಂಬೋಧಿತಃ ಅಪಿ** = ಸ್ಫುಟವಾಗಿ ಉಪದೇಶಿಸಲ್ಪಟ್ಟರೂ **ನ ವೇತ್ತಿ** = ಅರಿಯುವುದಿಲ್ಲ; **ಭ್ರಾಂತ್ಯಾ** = ಭ್ರಾಂತಿಯಿಂದ **ಆರೋಪಿತಮ್ ಏವ** = ಆರೋಪಿಸಲ್ಪಟ್ಟಿರುವುದನ್ನೇ **ಸಾಧು ಕಲಯತಿ** = ಸರಿಯೆಂದು ಎಣಿಸುತ್ತಾನೆ, **ತದ್ಗುಣಾನ್** = ಅದರ ಕಾರ್ಯಗಳನ್ನು **ಆಲಂಬತೇ** = ಆಶ್ರಯಿಸುತ್ತಾನೆ; **ಹಂತ** = ಆಶ್ಚರ್ಯ! **ದುರಂತ-ತಮಸಃ** = ನಾಶಮಾಡಲು ದುಃಸಾಧ್ಯವಾದ ತಮಸ್ಸಿನ **ಅಸೌ** = ಈ **ಮಹತೀ** = ಮಹತ್ತಾದ **ಆವೃತಿಃ ಶಕ್ತಿಃ** = ಆವರಣಶಕ್ತಿಯು **ಪ್ರಬಲಾ** = ಪ್ರಬಲವಾದುದು.

**೧೧೪.** ಮನುಷ್ಯನು ಮೇಧಾವಿಯಾಗಿದ್ದರೂ[೧] ಶಾಸ್ತ್ರಜ್ಞನಾಗಿದ್ದರೂ[೨] (ಲೌಕಿಕ-ವ್ಯವಹಾರದಲ್ಲಿ) ಚತುರನಾಗಿದ್ದರೂ ಅತ್ಯಂತ ಸೂಕ್ಷ್ಮವಾದ ವಿಷಯಗಳನ್ನು[೩] ಅರಿತಿರುವವನಾಗಿದ್ದರೂ ತಮಸ್ಸಿನಿಂದ ಮುಚ್ಚಲ್ಪಟ್ಟರೆ,[೪] ಅನೇಕ ವಿಧದಿಂದ ಸ್ಫುಟವಾಗಿ ಬೋಧಿಸಲ್ಪಟ್ಟರೂ (ತತ್ತ್ವವನ್ನು) ಅರಿಯಲಾರನು;[೫]

ಭ್ರಾಂತಿಯಿಂದ ತಾನು ಆರೋಪಿಸಿರುವುದನ್ನೇ[೬] ಸರಿಯೆಂದು ಎಣಿಸುತ್ತಾನೆ, ಅದರ ಕಾರ್ಯಗಳನ್ನೇ ಆಶ್ರಯಿಸುತ್ತಾನೆ. ಆಶ್ಚರ್ಯ! ದುರಂತವಾದ ತಮಸ್ಸಿನ ಈ ಮಹಾ ಆವರಣಶಕ್ತಿಯು ಎಷ್ಟು ಪ್ರಬಲವಾದುದು!

[[೧] 'ಮೇಧಾಶಕ್ತಿಯಿಂದಲೂ ಬಹುಶ್ರವಣದಿಂದಲೂ ಲಭ್ಯನಲ್ಲ' **ನ ಮೇಧಯಾ ನ ಬಹುನಾ ಶ್ರುತೇನ** (ಕಠ ಉ. ೧. ೨. ೨೩).

[೨] 'ಇವನು ಶ್ರವಣಮಾಡಿದಮೇಲೂ ಇವನನ್ನು ಬಹುಜನರು ಅರಿಯರು' **ಶೃಣ್ವಂತೋಽಪಿ ಬಹವೋ ಯಂ ನ ವಿದ್ಯುಃ** (ಕಠ ಉ. ೧. ೨. ೭).

[೩] ಮನಸ್ಸು ಬುದ್ಧಿ ಮೊದಲಾದುವುಗಳನ್ನು.

[೪] ಆವರಣಶಕ್ತಿಯಿಂದ ಆಚ್ಛಾದಿತನಾದರೆ.

[೫] ದೃಷ್ಟಿಯು ಪಟುವಾಗಿದ್ದರೂ ಕಗ್ಗತ್ತಲಿನಲ್ಲಿ ಏನನ್ನು ನೋಡಲೂ ಸಾಧ್ಯವಿಲ್ಲ.

[೬] ಸ್ಥೂಲವಾದ ಶರೀರವೇ ಮೊದಲಾದುವುಗಳನ್ನು.]

**ಅಭಾವನಾ ವಾ ವಿಪರೀತಭಾವನಾಽ-**
**ಸಂಭಾವನಾ ವಿಪ್ರತಿಪತ್ತಿರಸ್ಯಾಃ ।**
**ಸಂಸರ್ಗಯುಕ್ತಂ ನ ವಿಮುಂಚತಿ ಧ್ರುವಂ**
**ವಿಕ್ಷೇಪಶಕ್ತಿಃ ಕ್ಷಪಯತ್ಯಜಸ್ರಮ್　　॥ ೧೧೫ ॥**

**ಅಭಾವನಾ**=ಅಭಾವನೆಯು **ವಿಪರೀತಭಾವನಾ ವಾ**=ವಿಪರೀತಭಾವನೆಯು **ಅಸಂಭಾವನಾ**=ಅಸಂಭಾವನೆಯು **ವಿಪ್ರತಿಪತ್ತಿಃ**=ಸಂದೇಹವು [ಇವು] **ಅಸ್ಯಾಃ**=ಇದರ **ಸಂಸರ್ಗಯುಕ್ತಂ**=ಸಂಬಂಧದಿಂದ ಕೂಡಿರುವವನನ್ನು **ಧ್ರುವಂ ನ ವಿಮುಂಚತಿ**=ಖಂಡಿತವಾಗಿ ಬಿಡುವುದಿಲ್ಲ; **ವಿಕ್ಷೇಪಶಕ್ತಿಃ**=ವಿಕ್ಷೇಪಶಕ್ತಿಯು **ಅಜಸ್ರಂ**=ಯಾವಾಗಲೂ **ಕ್ಷಪಯತಿ**=ಬಾಧಿಸುತ್ತದೆ.

**೧೧೫.** ಅಭಾವನೆ[೧] ವಿಪರೀತಭಾವನೆ[೨] ಅಸಂಭಾವನೆ[೩] ಸಂದೇಹ[೪]—(ಇವು) ಆವರಣಶಕ್ತಿಯ ಸಂಬಂಧದಿಂದ ಕೂಡಿರುವ ಮನುಷ್ಯನನ್ನು ಖಂಡಿತವಾಗಿ ಬಿಡುವುದಿಲ್ಲ; (ಅನಂತರ) ಅವನನ್ನು ವಿಕ್ಷೇಪಶಕ್ತಿಯು ಯಾವಾಗಲೂ ಬಾಧಿಸುವುದು.

[[೧] ವಸ್ತುವಿನ ಸ್ವರೂಪವನ್ನು ತಿಳಿಯದಿರುವುದು.

[೨] ವಸ್ತುವು ಒಂದು ವಿಧವಾಗಿದ್ದರೆ ಇನ್ನೊಂದು ವಿಧವಾಗಿರುವಂತೆ ಅರಿಯುವುದು.

[೩] ವಸ್ತುವು ಆ ವಿಧವಾಗಿ ಇಲ್ಲವೆಂಬ ಭಾವನೆ.

[೪] ವಸ್ತುವು ಆ ರೀತಿ ಇರುವುದೊ ಇಲ್ಲವೊ ಎಂಬುದು.]

ಅಜ್ಞಾನಮಾಲಸ್ಯ-ಜಡತ್ವನಿದ್ರಾ-
ಪ್ರಮಾದ-ಮೂಢತ್ವ-ಮುಖಾಸ್ತಮೋಗುಣಾಃ ।
ಏತೈಃ ಪ್ರಯುಕ್ತೋ ನಹಿ ವೇತ್ತಿ ಕಿಂಚಿ-
ನ್ನಿದ್ರಾಲುವತ್ ಸ್ತಂಭವದೇವ ತಿಷ್ಠತಿ ॥ ೧೧೬ ॥

**ಅಜ್ಞಾನಂ** = ಅಜ್ಞಾನವು **ಆಲಸ್ಯ-ಜಡತ್ವ-ನಿದ್ರಾ-ಪ್ರಮಾದ-ಮೂಢತ್ವ-ಮುಖಾಃ** = ಆಲಸ್ಯ ಜಡತ್ವ ನಿದ್ರೆ ಪ್ರಮಾದ ಮೂಢತ್ವ ಇವೇ ಮೊದಲಾದುವು **ತಮೋಗುಣಾಃ** = ತಮಸ್ಸಿನ ಗುಣಗಳು; **ಏತೈಃ** = ಇವುಗಳಿಂದ **ಪ್ರಯುಕ್ತಃ** = ಕೂಡಿರುವವನು **ನಿದ್ರಾಲುವತ್** = ನಿದ್ರಿಸುವವನಂತೆ **ಕಿಂಚಿತ್** = ಏನನ್ನೂ **ನ ಹಿ ವೇತ್ತಿ** = ಅರಿಯುವುದೇ ಇಲ್ಲ, **ಸ್ತಂಭವತ್ ಏವ** = ಕಂಬದಂತೆಯೇ **ತಿಷ್ಠತಿ** = ಇರುತ್ತಾನೆ.

**೧೧೬.** ಅಜ್ಞಾನ ಆಲಸ್ಯ ಜಡತ್ವ ನಿದ್ರೆ ಪ್ರಮಾದ ಮೂಢತ್ವ ಮೊದಲಾದುವು ತಮಸ್ಸಿನ ಗುಣಗಳು; ಇವುಗಳಿಂದ ಕೂಡಿರುವವನು ನಿದ್ರಿಸುವವನಂತೆ ಏನನ್ನೂ ಅರಿಯುವುದಿಲ್ಲ, ಕಂಬದಂತೆಯೇ ಇರುತ್ತಾನೆ.[೧]

[[೧] ಶ್ರೇಯಸ್ಸಿಗಾಗಿ ಪ್ರಯತ್ನಿಸುವುದಿಲ್ಲ ಎಂದರ್ಥ.]

ಸತ್ತ್ವಂ ವಿಶುದ್ಧಂ ಜಲವತ್ತಥಾಽಪಿ
ತಾಭ್ಯಾಂ ಮಿಲಿತ್ವಾ ಸರಣಾಯ ಕಲ್ಪತೇ ।
ಯತ್ರಾಽಽತ್ಮಬಿಂಬಃ ಪ್ರತಿಬಿಂಬಿತಃ ಸನ್
ಪ್ರಕಾಶಯತ್ಯರ್ಕ ಇವಾಖಿಲಂ ಜಡಮ್ ॥ ೧೧೭ ॥

**ಸತ್ತ್ವಂ** = ಸತ್ತ್ವವು **ಜಲವತ್** = ನೀರಿನ ಹಾಗೆ **ವಿಶುದ್ಧಂ** = ನಿರ್ಮಲವಾದುದು; **ತಥಾ ಅಪಿ** = ಆದರೂ **ತಾಭ್ಯಾಂ** = ಆ ರಜಸ್ತಮೋಗುಣಗಳೊಡನೆ **ಮಿಲಿತ್ವಾ** = ಬೆರೆತು **ಸರಣಾಯ** = ಸಂಸಾರಕ್ಕೆ **ಕಲ್ಪತೇ** = ಕಾರಣವಾಗುತ್ತದೆ; **ಯತ್ರ** = ಯಾವ ಸತ್ತ್ವಗುಣದಲ್ಲಿ **ಆತ್ಮಬಿಂಬಃ** = ಆತ್ಮಸ್ವರೂಪವು **ಪ್ರತಿಬಿಂಬಿತಃ ಸನ್** = ಪ್ರತಿಬಿಂಬಿಸಿ **ಅರ್ಕಃ ಇವ** = ಸೂರ್ಯನಂತೆ **ಅಖಿಲಂ** = ಅಖಿಲವಾದ **ಜಡಂ** = ಜಗತ್ತನ್ನು **ಪ್ರಕಾಶಯತಿ** = ಪ್ರಕಾಶಿಸುತ್ತದೆಯೊ.

**೧೧೭.** ಸತ್ತ್ವಗುಣವು ನೀರಿನಂತೆ ನಿರ್ಮಲವಾದದು. ಆದರೂ ರಜಸ್ತಮೋಗುಣಗಳೊಂದಿಗೆ ಬೆರೆತು ಸಂಸಾರಕ್ಕೆ ಕಾರಣವಾಗಿರುತ್ತದೆ. ಸತ್ತ್ವಗುಣದಲ್ಲಿ ಆತ್ಮಸ್ವರೂಪವು ಪ್ರತಿಬಿಂಬಿಸಿ ಸೂರ್ಯನಂತೆ ಜಡಜಗತ್ತೆಲ್ಲವನ್ನೂ ಪ್ರಕಾಶಿಸುತ್ತದೆ.[೧]

[೧ 'ಸತ್ತ್ವಗುಣದಿಂದ ಜ್ಞಾನವುಂಟಾಗುತ್ತದೆ' **ಸತ್ತ್ವಾತ್ ಸಂಜಾಯತೇ ಜ್ಞಾನಮ್** (ಗೀತಾ ೧೪. ೧೭). ಸತ್ತ್ವಗುಣವಿಲ್ಲದಿದ್ದರೆ ಆತ್ಮನು ಪ್ರತಿಬಿಂಬಿಸುವುದೂ ಇಲ್ಲ, ಮೋಕ್ಷಕ್ಕೆ ಕಾರಣವಾದ ಜ್ಞಾನವೂ ಉಂಟಾಗುವುದಿಲ್ಲ. ನೀರಿನಂತೆ ಸ್ವಚ್ಛವಾಗಿದ್ದರೂ ಸತ್ತ್ವವು ಇತರ ಗುಣಗಳೊಡನೆ ಕೂಡಿಕೊಂಡರೆ ಸಂಸಾರವನ್ನುಂಟುಮಾಡುವುದು.]

**ಮಿಶ್ರಸ್ಯ ಸತ್ತ್ವಸ್ಯ ಭವಂತಿ ಧರ್ಮಾ-**
**ಸ್ತ್ವಮಾನಿತಾದ್ಯಾ ನಿಯಮಾ ಯಮಾದ್ಯಾಃ ।**
**ಶ್ರದ್ಧಾ ಚ ಭಕ್ತಿಶ್ಚ ಮುಮುಕ್ಷುತಾ ಚ**
**ದೈವೀ ಚ ಸಂಪತ್ತಿರಸನ್ನಿವೃತ್ತಿಃ ॥ ೧೧೮ ॥**

**ಮಿಶ್ರಸ್ಯ ಸತ್ತ್ವಸ್ಯ** = ಮಿಶ್ರಸತ್ತ್ವಕ್ಕೆ **ಅಮಾನಿತಾದ್ಯಾಃ** = ಅಮಾನಿತ್ವ ಮೊದಲಾದುವು, **ನಿಯಮಾಃ** = ನಿಯಮಗಳು, **ಯಮಾದ್ಯಾಃ** = ಯಮವೇ ಮೊದಲಾದುವು, **ಶ್ರದ್ಧಾ ಚ** = ಶ್ರದ್ಧೆ **ಭಕ್ತಿಃ ಚ** = ಭಕ್ತಿ **ಮುಮುಕ್ಷುತಾ ಚ** = ಮುಮುಕ್ಷುತ್ವ **ದೈವೀ ಸಂಪತ್ತಿಃ ಚ** = ದೈವೀ ಸಂಪತ್ತಿ **ಅಸನ್ನಿವೃತ್ತಿಃ** = ಆಸುರ ಸಂಪತ್ತಿನಿಂದ ಹಿಂತಿರುಗುವುದು [ಎಂಬ] **ಧರ್ಮಾಃ** = ಧರ್ಮಗಳು **ಭವಂತಿ** = ಉಂಟಾಗುತ್ತವೆ.

**೧೧೮.** ಅಮಾನಿತ್ವವೇ ಮೊದಲಾದುವು,[೧] ಯಮ-ನಿಯಮಗಳೇ[೨] ಮೊದಲಾದುವು, ಶ್ರದ್ಧೆ ಭಕ್ತಿ ಮುಮುಕ್ಷುತ್ವ, ದೈವೀ-ಸಂಪತ್ತಿ ಆಸುರ ಸಂಪತ್ತಿಯನ್ನು[೩] ಬಿಡುವುದು—ಇವು ಮಿಶ್ರಸತ್ತ್ವದ ಧರ್ಮಗಳು.

[೧ ಗೀತಾ ೧೩. ೭ ನೋಡಿ.

೨ ಅಹಿಂಸೆ ಸತ್ಯ ಮೊದಲಾದುವು ಯಮಗಳು; ಶೌಚ ಸಂತೋಷ ಮೊದಲಾದುವು ನಿಯಮಗಳು.

೩ ಗೀತೆಯ ೧೬ನೆಯ ಅಧ್ಯಾಯವನ್ನು ನೋಡಿ.]

**ವಿಶುದ್ಧಸತ್ತ್ವಸ್ಯ ಗುಣಾಃ ಪ್ರಸಾದಃ**
**ಸ್ವಾತ್ಮಾನುಭೂತಿಃ ಪರಮಾ ಪ್ರಶಾಂತಿಃ ।**
**ತೃಪ್ತಿಃ ಪ್ರಹರ್ಷಃ ಪರಮಾತ್ಮನಿಷ್ಠಾ**
**ಯಯಾ ಸದಾನಂದರಸಂ ಸಮೃಚ್ಛತಿ ॥ ೧೧೯ ॥**

**ಪ್ರಸಾದಃ** = [ಮನಸ್ಸಿನ] ಪ್ರಸನ್ನತೆ, **ಸ್ವಾತ್ಮಾನುಭೂತಿಃ** = ಆತ್ಮಾನುಭವ **ಪರಮಾ ಪ್ರಶಾಂತಿಃ** = ಪರಮಶಾಂತಿ **ತೃಪ್ತಿಃ** = ತೃಪ್ತಿ **ಪ್ರಹರ್ಷಃ** = ಆಹ್ಲಾದ, **ಯಯಾ** = ಯಾವುದರಿಂದ **ಸದಾ** = ಯಾವಾಗಲೂ **ಆನಂದರಸಂ** = ಆನಂದರಸವನ್ನು

**ಸಮೃಚ್ಛತಿ** = ಹೊಂದುತ್ತಾನೆಯೊ [ಅ] **ಪರಮಾತ್ಮನಿಷ್ಠಾ** = ಪರಮಾತ್ಮನಿಷ್ಠೆ— [ಇವು] **ವಿಶುದ್ಧಸತ್ತ್ವಸ್ಯ** = ವಿಶುದ್ಧಸತ್ತ್ವದ **ಗುಣಾಃ** = ಗುಣಗಳು.

**೧೧೯.** (ಮನಸ್ಸಿನ) ಪ್ರಸನ್ನತೆ, ಆತ್ಮಾನುಭವ, ಪರಮಶಾಂತಿ, ತೃಪ್ತಿ, ಆಹ್ಲಾದ, ಯಾವಾಗಲೂ ಆನಂದರಸವನ್ನು ಹೊಂದಿಸುವ ಪರಮಾತ್ಮನಿಷ್ಠೆ– ಇವು ವಿಶುದ್ಧಸತ್ತ್ವದ[1] ಗುಣಗಳು.

[[1] ರಜಸ್ಸು ಮತ್ತು ತಮಸ್ಸು— ಇವುಗಳೊಂದಿಗೆ ಮಿಶ್ರವಾಗಿರದ ಸತ್ತ್ವಗುಣದ.]

**ಅವ್ಯಕ್ತಮೇತತ್ ತ್ರಿಗುಣೈರ್ನಿರುಕ್ತಂ**
**ತತ್ಕಾರಣಂ ನಾಮ ಶರೀರಮಾತ್ಮನಃ ।**
**ಸುಷುಪ್ತಿರೇತಸ್ಯ ವಿಭಕ್ತ್ಯವಸ್ಥಾ**
**ಪ್ರಲೀನ-ಸರ್ವೇಂದ್ರಿಯ-ಬುದ್ಧಿವೃತ್ತಿಃ ॥ ೧೨೦ ॥**

**ತ್ರಿಗುಣೈಃ** = ಮೂರು ಗುಣಗಳಿಂದ **ನಿರುಕ್ತಂ** = ವಿವರಿಸಿರುವ **ಏತತ್** = ಇದು **ಅವ್ಯಕ್ತಂ**=ಅವ್ಯಕ್ತವು; **ತತ್**=ಅದು **ಆತ್ಮನಃ**=ಆತ್ಮನಿಗೆ **ಕಾರಣಂ ಶರೀರಂ ನಾಮ** = ಕಾರಣಶರೀರವೆಂದು ಪ್ರಸಿದ್ಧವಾಗಿದೆ; **ಪ್ರಲೀನ-ಸರ್ವೇಂದ್ರಿಯ-ಬುದ್ಧಿ-ವೃತ್ತಿಃ** = ಲಯವಾದ ಸರ್ವೇಂದ್ರಿಯಗಳ ಮತ್ತು ಬುದ್ಧಿವೃತ್ತಿಯ **ಸುಷುಪ್ತಿಃ** = ತನಿನಿದ್ರೆಯು **ಏತಸ್ಯ** = ಇದರ **ವಿಭಕ್ತಿ-ಅವಸ್ಥಾ** = ವಿಶೇಷವಾದ ಅವಸ್ಥೆಯು.

**೧೨೦.** ಮೂರು ಗುಣಗಳಿಂದ ಕೂಡಿರುವುದೆಂದು ವಿವರಿಸಿರುವುದೇ ಈ ಅವ್ಯಕ್ತವು.[1] ಇದು ಆತ್ಮನ[2] ಕಾರಣಶರೀರವೆಂದು ಪ್ರಸಿದ್ಧವಾಗಿದೆ. ಎಲ್ಲ ಇಂದ್ರಿಯಗಳೂ ಬುದ್ಧಿಯ ವೃತ್ತಿಗಳೂ ಲಯವಾಗುವ ತನಿನಿದ್ರೆಯೇ ಇದರ ವಿಶೇಷವಾದ ಅವಸ್ಥೆಯು.

[[1] ಇದನ್ನು ೧೧೮ನೆಯ, ೧೧೯ನೆಯ ಶ್ಲೋಕಗಳಲ್ಲಿ ವಿವರಿಸಿದೆ.
[2] ಚಿದಾಭಾಸನಾದ ಆತ್ಮನ.]

**ಸರ್ವಪ್ರಕಾರ-ಪ್ರಮಿತಿ-ಪ್ರಶಾಂತಿ-**
**ರ್ಬೀಜಾತ್ಮನಾಽವಸ್ಥಿತಿರೇವ ಬುದ್ಧೇಃ ।**
**ಸುಷುಪ್ತಿರೇತಸ್ಯ ಕಿಲ ಪ್ರತೀತಿಃ**
**ಕಿಂಚಿನ್ನ ವೇದ್ಮೀತಿ ಜಗತ್ಪ್ರಸಿದ್ಧೇಃ ॥ ೧೨೧ ॥**

**ಸರ್ವಪ್ರಕಾರ-ಪ್ರಮಿತಿ-ಪ್ರಶಾಂತಿಃ** = ಎಲ್ಲಾ ವಿಧವಾದ ಜ್ಞಾನಗಳ ಪ್ರಶಾಂತಿಯು, **ಬುದ್ಧೇಃ** = ಬುದ್ಧಿಯ **ಬೀಜಾತ್ಮನಾ** = ಕಾರಣಸ್ವರೂಪದಿಂದ **ಅವ-ಸ್ಥಿತಿಃ ಏವ**=ಇರುವಿಕೆಯೇ **ಸುಷುಪ್ತಿಃ**=ಸುಷುಪ್ತಿಯು; **ಕಿಂಚಿತ್**=ಯಾವುದನ್ನೂ

ನ ವೇದ್ಮಿ = ಅರಿಯೆನು ಇತಿ = ಎಂಬ ಜಗತ್ಪ್ರಸಿದ್ಧೇಃ = ಲೋಕಪ್ರಸಿದ್ಧಿಯಿಂದ ಏತಸ್ಯ = ಇದರ ಪ್ರತೀತಿಃ ಕಿಲ = ಪ್ರತೀತಿಯು [ಉಂಟಾಗಿರುತ್ತದೆ].

೧೨೧. (ಪ್ರತ್ಯಕ್ಷ ಅನುಮಿತಿ ಮೊದಲಾದ) ಸರ್ವವಿಧಜ್ಞಾನಗಳ ಶಾಂತಿ, ಬುದ್ಧಿಯು ಕಾರಣಸ್ವರೂಪದಿಂದ ಇರುವುದು—ಎಂಬುದೇ ಸುಷುಪ್ತಿ. 'ನಾನು ಯಾವುದನ್ನೂ ಅರಿಯೆನು' ಎಂಬ ಲೋಕಪ್ರಸಿದ್ಧಿಯಿಂದ (ಆತ್ಮನ) ಕಾರಣಶರೀರವು ಅಥವಾ ಅಜ್ಞಾನರೂಪವಾದ ಬೀಜವು ನಮ್ಮ ಅನುಭವಕ್ಕೆ ಬರುತ್ತದೆ.

[ಸುಷುಪ್ತಿಯಲ್ಲಿ ಸಮಸ್ತವೃತ್ತಿಗಳೂ ಲಯವಾದರೆ ಅವ್ಯಕ್ತವೆಂಬ ಅಜ್ಞಾನವು ಇದೆ ಎಂಬುದಕ್ಕೆ ಪ್ರಮಾಣವೇನು? ತನಿನಿದ್ರೆಯಿಂದ ಎಚ್ಚೆತ್ತಿರುವವನ 'ನನಗೇನೂ ತಿಳಿಯಲಿಲ್ಲ' ಎಂಬ ಜ್ಞಾನದಿಂದಲೇ ಸುಷುಪ್ತಿಯಲ್ಲಿ ಅಜ್ಞಾನವಿದೆ ಎಂಬುದು ಸಿದ್ಧವಾಗುತ್ತದೆ.]

**ದೇಹೇಂದ್ರಿಯ-ಪ್ರಾಣ-ಮನೋಽಹಮಾದಯಃ**
**ಸರ್ವೇ ವಿಕಾರಾ ವಿಷಯಾಃ ಸುಖಾದಯಃ ।**
**ವ್ಯೋಮಾದಿ-ಭೂತಾನ್ಯಖಿಲಂ ಚ ವಿಶ್ವ-**
**ಮವ್ಯಕ್ತಪರ್ಯಂತಮಿದಂ ಹ್ಯನಾತ್ಮಾ ॥ ೧೨೨ ॥**

**ದೇಹ-ಇಂದ್ರಿಯ-ಪ್ರಾಣ-ಮನಃ-ಅಹಮ್-ಆದಯಃ** = ದೇಹ ಇಂದ್ರಿಯಗಳು ಪ್ರಾಣಗಳು ಮನಸ್ಸು ಅಹಂಕಾರ ಇವೇ ಮೊದಲಾದ **ಸರ್ವೇ ವಿಕಾರಾಃ** = ಎಲ್ಲ ವಿಕಾರಗಳು, **ವಿಷಯಾಃ** = ಶಬ್ದ ಸ್ಪರ್ಶಾದಿ-ವಿಷಯಗಳು, **ಸುಖಾದಯಃ** = ಸುಖವೇ ಮೊದಲಾದುವು, **ವ್ಯೋಮಾದಿಭೂತಾನಿ** = ಆಕಾಶಾದಿ ಭೂತಗಳು, **ಅವ್ಯಕ್ತಪರ್ಯಂತಂ** = ಅವ್ಯಕ್ತದ ವರೆಗಿರುವ **ಇದಮ್ ಅಖಿಲಂ ವಿಶ್ವಂ ಚ** = ಈ ಪ್ರಪಂಚವೆಲ್ಲವೂ **ಅನಾತ್ಮಾ ಹಿ** = ಅನಾತ್ಮವೇ.

೧೨೨. ದೇಹ ಇಂದ್ರಿಯಗಳು ಪ್ರಾಣಗಳು ಮನಸ್ಸು ಅಹಂಕಾರ ಇವೇ ಮೊದಲಾದ ಎಲ್ಲ ವಿಕಾರಗಳು, ಶಬ್ದ ಸ್ಪರ್ಶ ಮೊದಲಾದ ವಿಷಯಗಳು, ಸುಖವೇ ಮೊದಲಾದುವು, ಆಕಾಶವೇ ಮೊದಲಾದ ಪಂಚಭೂತಗಳು—ಅವ್ಯಕ್ತದ ವರೆಗಿನ ಈ ಪ್ರಪಂಚವೆಲ್ಲವೂ ಅನಾತ್ಮವೇ.

**ಮಾಯಾ ಮಾಯಾಕಾರ್ಯಂ ಸರ್ವಂ**
**ಮಹದಾದಿ-ದೇಹ-ಪರ್ಯಂತಮ್ ।**
**ಅಸದಿದಮನಾತ್ಮಕಂ ತ್ವಂ ವಿದ್ಧಿ**
**ಮರುಮರೀಚಿಕಾ-ಕಲ್ಪಮ್ ॥ ೧೨೩ ॥**

**ಮಾಯಾ**=ಮಾಯೆ, **ಮಹತ್-ಆದಿ-ದೇಹಪರ್ಯಂತಂ**=ಮಹತ್ತೇ ಮೊದಲಾಗಿ ದೇಹದ ವರೆಗಿರುವ **ಮಾಯಾಕಾರ್ಯಂ**=ಮಾಯೆಯ ಕಾರ್ಯ; **ತ್ವಂ**=ನೀನು **ಇದಂ ಸರ್ವಂ**=ಇದೆಲ್ಲವನ್ನೂ **ಮರುಮರೀಚಿಕಾ-ಕಲ್ಪಮ್**=ಬಿಸಿಲ್ಗುದುರೆಯಂತೆ **ಅಸತ್ ಅನಾತ್ಮಕಂ**=ಅಸತ್ತಾಗಿರುವ ಅನಾತ್ಮವೆಂದು **ವಿದ್ಧಿ**=ತಿಳಿದುಕೊ.

**೧೨೩.** ಮಾಯೆ[1], ಮಹತ್ತೇ[2] ಮೊದಲಾಗಿ ದೇಹದ ವರೆಗಿರುವ ಮಾಯೆಯ ಕಾರ್ಯ—ಇದೆಲ್ಲವನ್ನೂ ಬಿಸಿಲ್ಗುದುರೆಯಂತೆ ಅಸತ್ತಾಗಿರುವ ಅನಾತ್ಮವೆಂದು ತಿಳಿದುಕೊ.

[[1] ಮೂಲಪ್ರಕೃತಿ.
[2] ಮಹತ್ತತ್ತ್ವ. ಇದು ಮಾಯೆಯ ಮೊದಲನೆಯ ಕಾರ್ಯ.]

**ಅಥ ತೇ ಸಂಪ್ರವಕ್ಷ್ಯಾಮಿ ಸ್ವರೂಪಂ ಪರಮಾತ್ಮನಃ ।**
**ಯದ್ವಿಜ್ಞಾಯ ನರೋ ಬಂಧಾನ್ಮುಕ್ತಃ ಕೈವಲ್ಯಮಶ್ನುತೇ ॥ ೧೨೪ ॥**

**ಅಥ**=ಇನ್ನು **ತೇ**=ನಿನಗೆ **ಪರಮಾತ್ಮನಃ**=ಪರಮಾತ್ಮನ **ಸ್ವರೂಪಂ**=ಸ್ವರೂಪವನ್ನು **ಸಂಪ್ರವಕ್ಷ್ಯಾಮಿ**=ಹೇಳುವೆನು—**ನರಃ**=ಮನುಷ್ಯನು **ಯತ್**=ಯಾವುದನ್ನು **ವಿಜ್ಞಾಯ**=ತಿಳಿದುಕೊಂಡು **ಬಂಧಾತ್**=ಬಂಧದಿಂದ **ಮುಕ್ತಃ**=ಮುಕ್ತನಾಗಿ **ಕೈವಲ್ಯಂ**=ಕೈವಲ್ಯವನ್ನು **ಅಶ್ನುತೇ**=ಹೊಂದುತ್ತಾನೆಯೊ.

**೧೨೪.** ಇನ್ನು ನಿನಗೆ ಪರಮಾತ್ಮನ ಸ್ವರೂಪವನ್ನು ಹೇಳುವೆನು. ಮನುಷ್ಯನು ಇದನ್ನು ತಿಳಿದುಕೊಂಡು ಸಂಸಾರಬಂಧದಿಂದ ಮುಕ್ತನಾಗಿ ಕೈವಲ್ಯವನ್ನು ಹೊಂದುತ್ತಾನೆ.

[ಇಲ್ಲಿಂದ ಪ್ರಾರಂಭಿಸಿ ೧೩೬ನೆಯ ಶ್ಲೋಕದ ವರೆಗೆ ಆತ್ಮಸ್ವರೂಪವನ್ನು ವಿವರಿಸಿದೆ.]

**ಅಸ್ತಿ ಕಶ್ಚಿತ್ ಸ್ವಯಂ ನಿತ್ಯಮಹಂಪ್ರತ್ಯಯ-ಲಂಬನಃ ।**
**ಅವಸ್ಥಾತ್ರಯ-ಸಾಕ್ಷೀ ಸನ್ ಪಂಚಕೋಶ-ವಿಲಕ್ಷಣಃ ॥ ೧೨೫ ॥**

**ಸ್ವಯಂ**=ಸ್ವತಃಸಿದ್ಧನೂ, **ಅಹಂಪ್ರತ್ಯಯ-ಲಂಬನಃ**='ಅಹಂ' ಎಂಬ ಪ್ರತ್ಯಯಕ್ಕೆ ಆಶ್ರಯನೂ **ಅವಸ್ಥಾತ್ರಯ-ಸಾಕ್ಷೀ ಸನ್**=ಅವಸ್ಥಾತ್ರಯಕ್ಕೆ ಸಾಕ್ಷಿಯೂ **ಪಂಚಕೋಶ-ವಿಲಕ್ಷಣಃ**=ಪಂಚಕೋಶಗಳಿಗಿಂತ ಬೇರೆಯಾದವನೂ ಆದ **ಕಶ್ಚಿತ್**=ಆತ್ಮನೊಬ್ಬನು **ನಿತ್ಯಂ ಅಸ್ತಿ**=ಯಾವಾಗಲೂ ಇರುತ್ತಾನೆ.

**೧೨೫.** ಸ್ವತಃಸಿದ್ಧನೂ, 'ನಾನು' ಎಂಬ ಪ್ರತ್ಯಯಕ್ಕೆ ಆಶ್ರಯನೂ, ಅವಸ್ಥಾತ್ರಯಕ್ಕೆ[1] ಸಾಕ್ಷಿಯೂ, ಪಂಚಕೋಶಗಳಿಗಿಂತ[2] ಭಿನ್ನನೂ ಆದ ಆತ್ಮನೊಬ್ಬನು ಯಾವಾಗಲೂ[3] ಇರುತ್ತಾನೆ.

[೧ ಜಾಗ್ರತ್-ಸ್ವಪ್ನ-ಸುಷುಪ್ತಿ ಎಂಬ.

೨ ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯ ಎಂಬ. ಇವುಗಳಲ್ಲಿ ಮೊದಲನೆಯದು ನಮ್ಮ ಶರೀರ, ಮುಂದಿನ ಮೂರು ಕೋಶಗಳೇ ಸೂಕ್ಷ್ಮಶರೀರವಾಗಿವೆ ಮತ್ತು ಕೊನೆಯದು ಕಾರಣಶರೀರವಾಗಿದೆ. ಈ ವಿಷಯದಲ್ಲಿ ತೈತ್ತಿರೀಯೋಪನಿಷತ್ತನ್ನು (ಬ್ರಹ್ಮಾನಂದವಲ್ಲಿ) ನೋಡಿ.

೩ ಕಾಲತ್ರಯದಲ್ಲಿಯೂ.]

**ಯೋ ವಿಜಾನಾತಿ ಸಕಲಂ ಜಾಗ್ರತ್-ಸ್ವಪ್ನ-ಸುಷುಪ್ತಿಷು ।**
**ಬುದ್ಧಿ-ತದ್ವೃತ್ತಿ-ಸದ್ಭಾವಮಭಾವಮಹಮಿತ್ಯಯಮ್ ॥ ೧೨೬ ॥**

**ಯಃ** = ಯಾವನು **ಜಾಗ್ರತ್-ಸ್ವಪ್ನ-ಸುಷುಪ್ತಿಷು** = ಎಚ್ಚರ-ಸ್ವಪ್ನ-ತನಿನಿದ್ರೆಗಳಲ್ಲಿ **ಸಕಲಂ** = ಎಲ್ಲವನ್ನೂ **ವಿಜಾನಾತಿ** = ಅರಿತುಕೊಳ್ಳುತ್ತಾನೆಯೊ, **ಬುದ್ಧಿ-ತದ್ವೃತ್ತಿ-ಸದ್ಭಾವಮ್** = ಬುದ್ಧಿ, ಅದರ ವೃತ್ತಿಗಳ ಇರುವಿಕೆ **ಅಭಾವಂ** = [ಅವುಗಳ] ಅಭಾವ [ಇವುಗಳನ್ನು ಅರಿತುಕೊಳ್ಳುತ್ತಾನೆಯೊ], **ಅಹಮ್ ಇತಿ** = ಅಹಂ ಪ್ರತ್ಯಯಕ್ಕೆ ಆಶ್ರಯನಾಗಿರುವನೊ **ಅಯಮ್** [**ಆತ್ಮಾ**] = ಇವನು [ಆತ್ಮನು].

**೧೨೬.** ಯಾವನು ಜಾಗ್ರತ್-ಸ್ವಪ್ನ-ಸುಷುಪ್ತಿಗಳಲ್ಲಿ ತೋರುವುದೆಲ್ಲವನ್ನೂ ಅರಿತುಕೊಳ್ಳುತ್ತಾನೆಯೊ, ಮನಸ್ಸು ಮತ್ತು ಅದರ ವೃತ್ತಿಗಳ ಇರುವಿಕೆ ಅಥವಾ ಇಲ್ಲದಿರುವಿಕೆ—ಇವುಗಳನ್ನು ಅರಿಯುತ್ತಾನೆಯೊ ಮತ್ತು 'ನಾನು' ಎಂಬುದಕ್ಕೆ ಆಶ್ರಯನಾಗಿರುವನೊ ಅವನೇ ಈ ಆತ್ಮನು.

[ಮನಸ್ಸು ಸುಷುಪ್ತಿಯಲ್ಲಿ ಲಯವಾಗುತ್ತದೆ; ಇದರ ಅಭಾವವು ಎಚ್ಚರವಾದ ಮೇಲೆಯೇ ಗೊತ್ತಾಗುತ್ತದೆ. ಆತ್ಮನು ಸಾಕ್ಷಿಯಾಗಿರುವುದರಿಂದಲೇ ಇದು ಸಾಧ್ಯವಾಗಿದೆ.]

**ಯಃ ಪಶ್ಯತಿ ಸ್ವಯಂ ಸರ್ವಂ ಯಂ ನ ಪಶ್ಯತಿ ಕಶ್ಚನ ।**
**ಯಶ್ಚೇತಯತಿ ಬುದ್ಧ್ಯಾದಿ ನ ತದ್ಯಂ ಚೇತಯತ್ಯಯಮ್ ॥ ೧೨೭ ॥**

**ಯಃ** = ಯಾವನು **ಸ್ವಯಂ** = ತಾನಾಗಿಯೇ **ಸರ್ವಂ** = ಎಲ್ಲವನ್ನೂ **ಪಶ್ಯತಿ** = ನೋಡುತ್ತಾನೆಯೊ, **ಯಂ** = ಯಾವನನ್ನು **ಕಶ್ಚನ** = ಯಾವನೊಬ್ಬನೂ **ನ ಪಶ್ಯತಿ** = ನೋಡುವುದಿಲ್ಲವೊ, **ಯಃ** = ಯಾವನು **ಬುದ್ಧ್ಯಾದಿ** = ಬುದ್ಧಿ ಮೊದಲಾದುವನ್ನು **ಚೇತಯತಿ** = ಚೇತನಗೊಳಿಸುತ್ತಾನೆಯೊ **ಯಂ** = ಯಾವನನ್ನು **ತತ್** = ಅದು **ನ ಚೇತಯತಿ** = ಚೇತನಗೊಳಿಸುವುದಿಲ್ಲವೊ [**ಸಃ**] **ಅಯಮ್** [**ಆತ್ಮಾ**] = [ಅವನು] ಈ [ಆತ್ಮನು].

**೧೨೭.** ಯಾವನು ತಾನಾಗಿಯೇ ಎಲ್ಲವನ್ನೂ ನೋಡುತ್ತಾನೆಯೊ ಯಾವನನ್ನು ಯಾವನೊಬ್ಬನೂ ನೋಡಲಾರನೊ, ಯಾವನು ಬುದ್ಧಿ ಮೊದ

ಲಾದುವನ್ನು ಚೇತನಗೊಳಿಸುತ್ತಾನೆಯೊ ಯಾವನನ್ನು ಅವು ಚೇತನಗೊ ಲಾರವೊ ಅವನೇ ಈ ಆತ್ಮನು.

['ಯಾವುದನ್ನು ಕಣ್ಣಿನಿಂದ ನೋಡುವುದಿಲ್ಲವೊ ಯಾವುದರಿಂದ ಕಣ್ಣುಗಳ ನೋಡುತ್ತಾನೆಯೊ ಅದನ್ನೇ ನೀನು ಬ್ರಹ್ಮವೆಂದು ತಿಳಿ' **ಯಚ್ಚಕ್ಷುಷಾ ನ ಪ ಯೇನ ಚಕ್ಷೂಂಷಿ ಪಶ್ಯತಿ । ತದೇವ ಬ್ರಹ್ಮ ತ್ವಂ ವಿದ್ಧಿ** ಎಂದು ಶ್ರುತಿ (ಕೇನ ಉ. ೧. ೭) ಹೇಳುತ್ತದೆ. ಬೃಹದಾರಣ್ಯಕ ೩. ೪. ೨ನ್ನೂ ನೋಡಿ.]

**ಯೇನ ವಿಶ್ವಮಿದಂ ವ್ಯಾಪ್ತಂ ಯಂ ನ ವ್ಯಾಪ್ನೋತಿ ಕಿಂಚನ ।**
**ಆಭಾರೂಪಮಿದಂ ಸರ್ವಂ ಯಂ ಭಾಂತಮನುಭಾತ್ಯಯಮ್**
**॥ ೧೨೮**

**ಯೇನ** = ಯಾವನಿಂದ **ಇದಂ ವಿಶ್ವಂ** = ಈ ವಿಶ್ವವು **ವ್ಯಾಪ್ತಂ** = ವ್ಯಾ ವಾಗಿದೆಯೊ **ಯಂ** = ಯಾವನನ್ನು **ಕಿಂಚನ** = ಯಾವುದೊಂದೂ **ನ ವ್ಯಾಪ್ನೋತಿ** ವ್ಯಾಪಿಸಲಾರದೊ, **ಯಂ ಭಾಂತಂ** = ಪ್ರಕಾಶಿಸುತ್ತಿರುವ ಯಾವನನ್ನು **ಆಭಾ ರೂಪಮ್ ಇದಂ ಸರ್ವಂ** = ಪ್ರಕಾಶರೂಪವಾದ ಇದೆಲ್ಲವೂ **ಅನುಭಾತಿ** = ಅನುಸ ಪ್ರಕಾಶಿಸುತ್ತಿರುವುದೊ [**ಸಃ**] **ಅಯಂ** [**ಆತ್ಮಾ**].

**೧೨೮.** ಯಾವನಿಂದ ಈ ವಿಶ್ವವೆಲ್ಲವೂ ವ್ಯಾಪ್ತವಾಗಿರುವುದೊ ಯಾ ನನ್ನು ಯಾವುದೂ ವ್ಯಾಪಿಸಲಾರದೊ, ಪ್ರಕಾಶಿಸುತ್ತಿರುವ ಯಾವನ ಅನುಸರಿಸಿ ಪ್ರಕಾಶರೂಪವಾದ ಇದೆಲ್ಲವೂ ಬೆಳಗುತ್ತಿರುವುದೊ ಅವನೇ ಆತ್ಮನು.

[**ತಮೇವ ಭಾಂತಮನುಭಾತಿ ಸರ್ವಂ ತಸ್ಯ ಭಾಸಾ ಸರ್ವಮಿದಂ ವಿಭಾತಿ** ಕಠ ಉ. ೨. ೫. ೧೫ ಮತ್ತು ಮುಂಡಕ ಉ. ೨. ೨. ೧೧ ನೋಡಿ.]

**ಯಸ್ಯ ಸನ್ನಿಧಿಮಾತ್ರೇಣ ದೇಹೇಂದ್ರಿಯ-ಮನೋಧಿಯಃ ।**
**ವಿಷಯೇಷು ಸ್ವಕೀಯೇಷು ವರ್ತಂತೇ ಪ್ರೇರಿತಾ ಇವ ॥ ೧೨೯**

**ಯಸ್ಯ** = ಯಾವನ **ಸನ್ನಿಧಿಮಾತ್ರೇಣ** = ಸಾನ್ನಿಧ್ಯಮಾತ್ರದಿಂದ **ದೇಹೇಂ ದ್ರಿಯಮನೋಧಿಯಃ** = ದೇಹೇಂದ್ರಿಯ-ಮನೋಬುದ್ಧಿಗಳು **ಸ್ವಕೀಯೇಷು** ತಮ್ಮ ತಮ್ಮ **ವಿಷಯೇಷು** = ವಿಷಯಗಳಲ್ಲಿ **ಪ್ರೇರಿತಾಃ ಇವ** = ಪ್ರೇರಿಸಲ್ಪಟ್ಟ **ವರ್ತಂತೇ** = ಇರುತ್ತವೆಯೊ.

**೧೨೯.** ಅವನ ಸಾನ್ನಿಧ್ಯಮಾತ್ರದಿಂದ ದೇಹ ಇಂದ್ರಿಯಗಳು ಮನಃ ಬುದ್ಧಿ—ಇವು ತಮ್ಮ ತಮ್ಮ ವಿಷಯಗಳಲ್ಲಿ ಪ್ರೇರಿಸಲ್ಪಟ್ಟಂತೆ ಪ್ರವರ್ತಿ ತ್ತವೆ.

['ಯಾರಿಂದ ಪ್ರೇರಿತವಾಗಿ ಮನಸ್ಸು ತನ್ನ ವಿಷಯದಲ್ಲಿ ಪ್ರವರ್ತಿಸುತ್ತದೆ?' **ಕೇನೇಷಿತಂ ಪತತಿ ಪ್ರೇಷಿತಂ ಮನಃ** (ಕೇನ ಉ. ೧. ೧). ಇಲ್ಲಿ **ಯಃ ಚೇತಯತಿ ಬುದ್ಧ್ಯಾದಿ** (ಶ್ಲೋ. ೧೨೭) ಎಂಬುದನ್ನು ವಿವರಿಸಿದೆ.]

**ಅಹಂಕಾರಾದಿ-ದೇಹಾಂತಾ ವಿಷಯಾಶ್ಚ ಸುಖಾದಯಃ ।**
**ವೇದ್ಯಂತೇ ಘಟವದ್ಯೇನ ನಿತ್ಯಬೋಧ-ಸ್ವರೂಪಿಣಾ     ॥ ೧೩೦ ॥**

**ಅಹಂಕಾರಾದಿ-ದೇಹಾಂತಾಃ** = ಅಹಂಕಾರವೇ ಮೊದಲಾಗಿ ದೇಹದ ವರೆಗಿರುವುವು **ವಿಷಯಾಃ ಚ** = ಶಬ್ದಾದಿ ವಿಷಯಗಳು **ಸುಖಾದಯಃ** = ಸುಖಾದಿಗಳು **ನಿತ್ಯಬೋಧ-ಸ್ವರೂಪಿಣಾ** = ನಿತ್ಯಜ್ಞಾನಸ್ವರೂಪನಾದ **ಯೇನ** = ಯಾವನಿಂದ **ಘಟವತ್** = ಗಡಿಗೆಯಂತೆ **ವೇದ್ಯಂತೇ** = ಅರಿಯಲ್ಪಡುತ್ತವೆಯೊ.

**೧೩೦.** ಅಹಂಕಾರವೇ ಮೊದಲಾಗಿ ದೇಹದ ವರೆಗಿನ (ವಿಷಯಗಳೂ) ಶಬ್ದವೇ ಮೊದಲಾದ ವಿಷಯಗಳೂ ಸುಖವೇ ಮೊದಲಾದುವೂ ನಿತ್ಯಜ್ಞಾನಸ್ವರೂಪಿಯಾದ ಆತ್ಮನಿಂದ ಗಡಿಗೆಯಂತೆ ಅರಿಯಲ್ಪಡುತ್ತವೆ.[೧]

[[೧] 'ಆತ್ಮನು ಅವಿನಾಶಿಯಾಗಿರುವುದರಿಂದ ದ್ರಷ್ಟೃವಿನ ದೃಷ್ಟಿಗೆ ನಾಶವಿಲ್ಲ' **ನ ಹಿ ದ್ರಷ್ಟುರ್ದೃಷ್ಟೇರ್ವಿಪರಿಲೋಪೋ ವಿದ್ಯತೇऽವಿನಾಶಿತ್ವಾತ್** (ಬೃಹದಾರಣ್ಯಕ ಉ. ೪. ೩. ೨೩).]

**ಏಷೋऽಂತರಾತ್ಮಾ ಪುರುಷಃ ಪುರಾಣೋ**
**ನಿರಂತರಾಖಂಡಸುಖಾನುಭೂತಿಃ ।**
**ಸದೈಕರೂಪಃ ಪ್ರತಿಬೋಧಮಾತ್ರೋ**
**ಯೇನೇಷಿತಾ ವಾಗಸವಶ್ಚರಂತಿ ॥ ೧೩೧ ॥**

**ಏಷಃ ಅಂತರಾತ್ಮಾ** = ಇವನೇ ಅಂತರಾತ್ಮನು, **ಪುರಾಣಃ ಪುರುಷಃ** = ಪುರಾಣಪುರುಷನು, **ನಿರಂತರ-ಅಖಂಡ-ಸುಖಾನುಭೂತಿಃ** = ನಿತ್ಯವೂ ಅಖಂಡವೂ ಆದ ಸುಖಾನುಭವವುಳ್ಳವನು, **ಸದಾ ಏಕರೂಪಃ** = ಯಾವಾಗಲೂ ಒಂದೇ ವಿಧವಾದ ಸ್ವರೂಪವುಳ್ಳವನು, **ಪ್ರತಿಬೋಧಮಾತ್ರಃ** = ಜ್ಞಾನ-ಮಾತ್ರಸ್ವರೂಪನು, **ಯೇನ** = ಯಾವನಿಂದ **ಇಷಿತಾಃ** = ಪ್ರೇರಿಸಲ್ಪಟ್ಟವುಗಳಾಗಿ **ವಾಕ್** = ವಾಕ್ಕು **ಅಸವಃ ಚ** = ಮತ್ತು ಪ್ರಾಣಗಳು **ಚರಂತಿ** = ಚಲಿಸುತ್ತವೆಯೊ.

**೧೩೧.** ಇವನೇ ಅಂತರಾತ್ಮನು,[೧] ಪುರಾಣಪುರುಷನು, ನಿತ್ಯಾಖಂಡ-ಸುಖಾನುಭವವುಳ್ಳವನು, ಯಾವಾಗಲೂ ಒಂದೇ ವಿಧವಾದ ಸ್ವರೂಪ

ವುಳ್ಳವನು, ಜ್ಞಾನಮಾತ್ರಸ್ವರೂಪನು.[೨] ಇವನ ಪ್ರೇರಣೆಯಿಂದ ವಾಕ್ಪ್ರಾಣ ಗಳು ಚಲಿಸುತ್ತಿರುವುವು.

[೧ 'ಸರ್ವಾಂತರ್ವರ್ತಿಯಾದ ಇವನೇ ನಿನ್ನ ಆತ್ಮನು' ಏಷ ತ ಆತ್ಮಾ ಸರ್ವಾಂತರಃ (ಬೃಹದಾರಣ್ಯಕ ಉ. ೩. ೪. ೧).

೨ 'ಪ್ರತಿಬೋಧದಲ್ಲಿಯೂ ತಿಳಿಯಲ್ಪಟ್ಟದ್ದು' ಪ್ರತಿಬೋಧವಿದಿತಮ್ (ಕೇನ ಉ. ೨.೪.); ಎಂದರೆ ಬುದ್ಧಿಯ ಪ್ರತಿಯೊಂದು ಪ್ರತ್ಯಯದಲ್ಲಿಯೂ ತಿಳಿಯಲ್ಪಡುತ್ತಾನೆ.]

**ಅತ್ರೈವ ಸತ್ತ್ವಾತ್ಮನಿ ಧೀ-ಗುಹಾಯಾ-**
**ಮವ್ಯಾಕೃತಾಕಾಶ ಉಶತ್ಪ್ರಕಾಶಃ ।**
**ಆಕಾಶ ಉಚ್ಚೈ ರವಿವತ್ಪ್ರಕಾಶತೇ**
**ಸ್ವತೇಜಸಾ ವಿಶ್ವಮಿದಂ ಪ್ರಕಾಶಯನ್ ॥ ೧೩೨ ॥**

**ಅತ್ರ ಏವ** = ಈ ಶರೀರದಲ್ಲಿಯೇ **ಸತ್ತ್ವಾತ್ಮನಿ** = ಸತ್ತ್ವಗುಣಪ್ರಧಾನವಾದ ಮನಸ್ಸಿನಲ್ಲಿ **ಧೀ-ಗುಹಾಯಾಂ** = ಬುದ್ಧಿಯೆಂಬ ಗುಹೆಯಲ್ಲಿ **ಅವ್ಯಾಕೃತ-ಆಕಾಶೇ** = ಅವ್ಯಾಕೃತವೆಂಬ ಆಕಾಶದಲ್ಲಿ **ಉಶತ್ಪ್ರಕಾಶಃ** = ಕಮನೀಯಪ್ರಕಾಶನಾದ ಆತ್ಮನು **ಸ್ವತೇಜಸಾ** = ತನ್ನ ತೇಜಸ್ಸಿನಿಂದ **ಇದಂ ವಿಶ್ವಂ** = ಈ ವಿಶ್ವವನ್ನು **ಪ್ರಕಾಶಯನ್** = ಪ್ರಕಾಶಿಸುವವನಾಗಿ **ಆಕಾಶೇ** = ಆಕಾಶದಲ್ಲಿ **ರವಿವತ್** = ಸೂರ್ಯನಂತೆ **ಉಚ್ಚೈಃ ಪ್ರಕಾಶತೇ** = ಸರ್ವೋತ್ಕೃಷ್ಟನಾಗಿ ಪ್ರಕಾಶಿಸುತ್ತಾನೆ.

**೧೩೨.** ಈ ಶರೀರದಲ್ಲಿಯೇ ಸತ್ತ್ವಗುಣಪ್ರಧಾನವಾದ ಮನಸ್ಸಿದೆ; ಅದರಲ್ಲಿ ಬುದ್ಧಿಯೆಂಬ ಗುಹೆಯಿದೆ; ಅದರಲ್ಲಿರುವ ಅವ್ಯಾಕೃತವೆಂಬ ಆಕಾಶದಲ್ಲಿ ಕಮನೀಯಪ್ರಕಾಶನಾದ ಆತ್ಮನು—ಆಕಾಶದಲ್ಲಿರುವ ಸೂರ್ಯನಂತೆ—ತನ್ನ ತೇಜಸ್ಸಿನಿಂದ ಈ ವಿಶ್ವವನ್ನೆಲ್ಲ ಬೆಳಗುತ್ತ ಸರ್ವೋತ್ಕೃಷ್ಟನಾಗಿ ಪ್ರಕಾಶಿಸುತ್ತಾನೆ.

[ಮೇಲೆ ಹೇಳಿದ ಲಕ್ಷಣಗಳುಳ್ಳ ಆತ್ಮನನ್ನು ಎಲ್ಲಿ ಹುಡುಕಬೇಕೆಂದು ಇಲ್ಲಿ ಹೇಳಿದೆ. ಮೊದಲು ಸ್ಥೂಲವಾದ ನಮ್ಮ ಶರೀರವಿದೆ; ಅದರಲ್ಲಿ ಸತ್ತ್ವಗುಣಪ್ರಧಾನ ವಾದ ಅಂತಃಕರಣವಿದೆ. ಬುದ್ಧಿಯು ಅಂತಃಕರಣದ ನಿಶ್ಚಯಾತ್ಮಕವಾದ ರೂಪ. ಬುದ್ಧಿಯಲ್ಲಿ ಅವ್ಯಾಕೃತ ಅಥವಾ ಕಾರಣಶರೀರ ಎಂಬ ಆಕಾಶವಿದೆ. ಈ ಆಕಾಶ ದಲ್ಲಿ ಆತ್ಮನನ್ನು ಧ್ಯಾನಿಸಬೇಕು. ಆತ್ಮನು ಸ್ಥೂಲ-ಸೂಕ್ಷ್ಮ-ಕಾರಣ-ಶರೀರಗಳಿಗಿಂತ ಭಿನ್ನನು ಎಂಬುದು ಅಭಿಪ್ರಾಯ.]

**ಜ್ಞಾತಾ ಮನೋಽಹಂಕೃತಿ-ವಿಕ್ರಿಯಾಣಾಂ**
**ದೇಹೇಂದ್ರಿಯ-ಪ್ರಾಣ-ಕೃತಕ್ರಿಯಾಣಾಮ್ ।**
**ಅಯೋಽಗ್ನಿವತ್ತಾನನುವರ್ತಮಾನೋ**
**ನ ಚೇಷ್ಟತೇ ನೋ ವಿಕರೋತಿ ಕಿಂಚನ ॥ ೧೩೩ ॥**

**ಮನಃ-ಅಹಂಕೃತಿ-ವಿಕ್ರಿಯಾಣಾಂ**=ಮನಸ್ಸು ಅಹಂಕಾರ ಇವುಗಳ ವಿಕಾರಗಳ **ದೇಹ-ಇಂದ್ರಿಯ-ಪ್ರಾಣ-ಕೃತಕ್ರಿಯಾಣಾಂ** = ದೇಹೇಂದ್ರಿಯಪ್ರಾಣಗಳಿಂದ ಮಾಡಲ್ಪಟ್ಟ ಕ್ರಿಯೆಗಳ **ಜ್ಞಾತಾ**=ಜ್ಞಾತೃವು **ಅಯಃ-ಅಗ್ನಿವತ್**=ಕಬ್ಬಿಣದಲ್ಲಿರುವ ಅಗ್ನಿಯಂತೆ **ತಾನ್**=ಅವುಗಳನ್ನು **ಅನುವರ್ತಮಾನಃ**=ಅನುಸರಿಸುತ್ತಿರುವವನಾಗಿ **ಕಿಂಚನ ನ ಚೇಷ್ಟತೇ**=ಏನನ್ನೂ ಮಾಡುವುದಿಲ್ಲ, **ನ ಉ ವಿಕರೋತಿ**=ವಿಕಾರವನ್ನೂ ಹೊಂದುವುದಿಲ್ಲ.

**೧೩೩.** ಮನಸ್ಸು ಅಹಂಕಾರ ಇವುಗಳ ವಿಕಾರಗಳನ್ನೂ, ದೇಹೇಂದ್ರಿಯ ಪ್ರಾಣಗಳಿಂದಾಗುವ ಕ್ರಿಯೆಗಳನ್ನೂ ಅರಿಯತಕ್ಕವನು—ಕಾದ ಕಬ್ಬಿಣದಲ್ಲಿರುವ ಅಗ್ನಿಯಂತೆ[೧]—ಅವುಗಳನ್ನು ಅನುಸರಿಸುತ್ತಿದ್ದರೂ ಯಾವ ಕ್ರಿಯೆಯನ್ನೂ ಮಾಡುವುದಿಲ್ಲ, ಯಾವ ವಿಕಾರವನ್ನೂ ಹೊಂದುವುದಿಲ್ಲ.

[೧ ಅಗ್ನಿಗೆ ಯಾವುದೊಂದು ಆಕಾರವಿಲ್ಲದಿದ್ದರೂ ತಾನು ಪ್ರವೇಶಿಸಿ ಉರಿಯುತ್ತಿರುವ ಅಯಃಪಿಂಡದ ಆಕಾರವನ್ನು ಹೊಂದುವಂತೆ ನಿರಾಕಾರನಾದ ಆತ್ಮನು ಆಯಾ ಉಪಾಧಿಗಳ ಆಕಾರದಿಂದ ಕಾಣುತ್ತಿದ್ದರೂ ಕ್ರಿಯೆಯನ್ನಾಗಲಿ ವಿಕಾರವನ್ನಾಗಲಿ ಹೊಂದುವುದಿಲ್ಲ. 'ಹೇಗೆ ಒಂದೇ ಅಗ್ನಿಯು ಈ ಲೋಕವನ್ನು ಪ್ರವೇಶಿಸಿ ಎಲ್ಲ ರೂಪಗಳಿಗೂ ಪ್ರತಿರೂಪವಾಗಿರುವುದೊ ಹಾಗೆಯೇ ಒಬ್ಬನೇ ಸರ್ವಭೂತಾಂತರಾತ್ಮನು ಎಲ್ಲ ರೂಪಗಳಿಗೂ ಪ್ರತಿರೂಪನಾಗಿರುವನು' **ಅಗ್ನಿರ್ಯಥೈಕೋ ಭುವನಂ ಪ್ರವಿಷ್ಟೋ ರೂಪಂ ರೂಪಂ ಪ್ರತಿರೂಪೋ ಬಭೂವ। ಏಕಸ್ತಥಾ ಸರ್ವಭೂತಾಂತರಾತ್ಮಾ ರೂಪಂ ರೂಪಂ ಪ್ರತಿರೂಪೋ ಬಹಿಶ್ಚ॥** (ಕಠ ಉ. ೨. ೫. ೯) ಎಂದು ಶ್ರುತಿಯು ಹೇಳುತ್ತದೆ.]

**ನ ಜಾಯತೇ ನೋ ಮ್ರಿಯತೇ ನ ವರ್ಧತೇ**
**ನ ಕ್ಷೀಯತೇ ನೋ ವಿಕರೋತಿ ನಿತ್ಯಃ ।**
**ವಿಲೀಯಮಾನೇಽಪಿ ವಪುಷ್ಯಮುಷ್ಮಿನ್**
**ನ ಲೀಯತೇ ಕುಂಭ ಇವಾಂಬರಃ ಸ್ವಯಮ್॥೧೩೪॥**

[ಈ ಆತ್ಮನು] **ನ ಜಾಯತೇ**=ಹುಟ್ಟುವುದಿಲ್ಲ, **ನೋ ಮ್ರಿಯತೇ**=ಸಾಯುವುದಿಲ್ಲ, **ನ ವರ್ಧತೇ**=ಬೆಳೆಯುವುದಿಲ್ಲ, **ನ ಕ್ಷೀಯತೇ**=ಕ್ಷಯಿಸುವುದಿಲ್ಲ, **ನೋ ವಿಕರೋತಿ**=ಪರಿಣಮಿಸುವುದಿಲ್ಲ; **ನಿತ್ಯಃ**=ಶಾಶ್ವತನಾಗಿರುತ್ತಾನೆ; **ಅಮುಷ್ಮಿನ್ ವಪುಷಿ**=ಈ ಶರೀರವು **ವಿಲೀಯಮಾನೇ ಅಪಿ**=ನಾಶವಾದರೂ **ಕುಂಭೇ ಅಂಬರಃ ಇವ**=ಗಡಿಗೆಯಲ್ಲಿರುವ ಆಕಾಶದಂತೆ **ಸ್ವಯಂ**=ತಾನು ಮಾತ್ರ **ನ ಲೀಯತೇ**=ನಾಶವಾಗುವುದಿಲ್ಲ.

**೧೩೪.** ಈ ಆತ್ಮನು ಹುಟ್ಟುವುದಿಲ್ಲ, ಸಾಯುವುದಿಲ್ಲ, ಬೆಳೆಯುವುದಿಲ್ಲ, ಕ್ಷಯಿಸುವುದಿಲ್ಲ, ಪರಿಣಮಿಸುವುದಿಲ್ಲ; (ಏಕೆಂದರೆ) ಶಾಶ್ವತನಾಗಿರು

ತಾನೆ. ಈ ಶರೀರವು ನಾಶವಾದರೂ ಗಡಿಗೆಯಲ್ಲಿರುವ ಆಕಾಶದಂತೆ[1] ತಾನು ಮಾತ್ರ ನಾಶವಾಗುವುದಿಲ್ಲ.

[[1] ಗಡಿಗೆಯು ಒಡೆದುಹೋದರೂ ಅದರಲ್ಲಿದ್ದ ಆಕಾಶಕ್ಕೆ ಏನೂ ಆಗುವುದಿಲ್ಲ.]

**ಪ್ರಕೃತಿ-ವಿಕೃತಿ-ಭಿನ್ನಃ ಶುದ್ಧಬೋಧ-ಸ್ವಭಾವಃ**
**ಸದಸದಿದಮಶೇಷಂ ಭಾಸಯನ್ನಿರ್ವಿಶೇಷಃ ।**
**ವಿಲಸತಿ ಪರಮಾತ್ಮಾ ಜಾಗ್ರದಾದಿಷ್ವವಸ್ಥಾ-**
**ಸ್ವಹಮಹಮಿತಿ ಸಾಕ್ಷಾತ್ ಸಾಕ್ಷಿರೂಪೇಣ**
**ಬುದ್ಧೇಃ ॥ ೧೩೫ ॥**

**ಪ್ರಕೃತಿ-ವಿಕೃತಿ-ಭಿನ್ನಃ** = ಕಾರಣ ಕಾರ್ಯ ಇವುಗಳಿಗಿಂತ ವಿಲಕ್ಷಣನೂ **ಶುದ್ಧಬೋಧ-ಸ್ವಭಾವಃ** = ನಿರ್ಮಲಚಿತ್ಸ್ವರೂಪನೂ **ನಿರ್ವಿಶೇಷಃ** = ವಿಶೇಷರಹಿತನೂ ಆದ **ಪರಮಾತ್ಮಾ** = ಪರಮಾತ್ಮನು **ಸತ್ ಅಸತ್** = ಸ್ಥೂಲಸೂಕ್ಷ್ಮವಾದ **ಇದಮ್ ಅಶೇಷಂ** = ಈ ಜಗತ್ತೆಲ್ಲವನ್ನೂ **ಭಾಸಯನ್** = ಪ್ರಕಾಶಪಡಿಸುತ್ತ, **ಜಾಗ್ರ-ದಾದಿಷು** = ಜಾಗ್ರತ್ ಮೊದಲಾದ **ಅವಸ್ಥಾಸು** = ಅವಸ್ಥೆಗಳಲ್ಲಿ **ಅಹಮ್ ಅಹಮ್ ಇತಿ** = 'ನಾನು, ನಾನು' ಎಂದು **ಬುದ್ಧೇಃ** = ಬುದ್ಧಿಗೆ **ಸಾಕ್ಷಿರೂಪೇಣ** = ಸಾಕ್ಷಿರೂಪನಾಗಿ **ಸಾಕ್ಷಾತ್ ವಿಲಸತಿ** = ಸಾಕ್ಷಾತ್ತಾಗಿ ಪ್ರಕಾಶಿಸುತ್ತಾನೆ.

**೧೩೫.** ಪರಮಾತ್ಮನು ಕಾರ್ಯ–ಕಾರಣಗಳಿಗಿಂತ ವಿಲಕ್ಷಣನಾಗಿ ನಿರ್ಮಲ-ಚಿತ್-ಸ್ವರೂಪನಾಗಿ ನಿರ್ವಿಶೇಷನಾಗಿ[1] ಸ್ಥೂಲಸೂಕ್ಷ್ಮವಾದ ಈ ಜಗತ್ತೆಲ್ಲವನ್ನೂ ಬೆಳಗುತ್ತ, ಜಾಗ್ರತ್ತೇ ಮೊದಲಾದ ಅವಸ್ಥೆಗಳಲ್ಲಿ 'ನಾನು ನಾನು' ಎಂದು ಬುದ್ಧಿಗೆ ಸಾಕ್ಷಿಯಾಗಿ[2] ಸಾಕ್ಷಾತ್ತಾಗಿ ಪ್ರಕಾಶಿಸುತ್ತಾನೆ.

[[1] ನಾಮ ಜಾತಿ ಗುಣ ಕ್ರಿಯೆ—ಇವುಗಳಿಲ್ಲದೆ.
[2] ನಾವು ಮಾಡುವಂತೆ ಕಾಣುವ ಕ್ರಿಯೆಗಳೆಲ್ಲ ಬುದ್ಧಿಯಿಂದಲೇ ಆಗುವುವೇ ವಿನಾ ನಿಷ್ಕ್ರಿಯನಾದ ಸಾಕ್ಷಿಯಿಂದಲ್ಲ.]

**ನಿಯಮಿತ-ಮನಸಾಽಮುಂ ತ್ವಂ ಸ್ವಮಾತ್ಮಾನಮಾತ್ಮ-**
**ನ್ಯಯಮಹಮಿತಿ ಸಾಕ್ಷಾದ್ವಿದ್ಧಿ ಬುದ್ಧಿಪ್ರಸಾದಾತ್ ।**
**ಜನಿ-ಮರಣ-ತರಂಗಾಪಾರ-ಸಂಸಾರಸಿಂಧುಂ**
**ಪ್ರತರ ಭವ ಕೃತಾರ್ಥೋ ಬ್ರಹ್ಮರೂಪೇಣ ಸಂಸ್ಥಃ**
**॥ ೧೩೬ ॥**

**ತ್ವಂ**=ನೀನು **ನಿಯಮಿತ-ಮನಸಾ**=ನಿಯಮಿತವಾದ ಮನಸ್ಸಿನಿಂದ **ಬುದ್ಧಿ-ಪ್ರಸಾದಾತ್**=ಬುದ್ಧಿಪ್ರಸನ್ನತೆಯಿಂದ **ಅಮುಂ ಸ್ವಮ್ ಆತ್ಮಾನಂ**=ಈ ನಿನ್ನ ಆತ್ಮನನ್ನು **ಆತ್ಮನಿ**=ನಿನ್ನಲ್ಲಿಯೇ **ಅಯಮ್ ಅಹಮ್ ಇತಿ**='ಇವನೇ ನಾನು' ಎಂದು **ಸಾಕ್ಷಾತ್**=ಸಾಕ್ಷಾತ್ತಾಗಿ **ವಿದ್ಧಿ**=ಅರಿತುಕೊ; **ಜನಿ-ಮರಣ-ತರಂಗ-ಅಪಾರ-ಸಂಸಾರ-ಸಿಂಧುಂ**=ಹುಟ್ಟು ಸಾವು ಎಂಬ ಅಲೆಗಳಿಂದ ಕೂಡಿ ಅಪಾರವಾಗಿರುವ ಸಂಸಾರಸಮುದ್ರವನ್ನು **ಪ್ರತರ**=ದಾಟು, **ಬ್ರಹ್ಮರೂಪೇಣ**=ಬ್ರಹ್ಮಸ್ವರೂಪದಿಂದ **ಸಂಸ್ಥಃ ಸನ್**=ನಿಂತವನಾಗಿ **ಕೃತಾರ್ಥಃ ಭವ**=ಕೃತಾರ್ಥನಾಗು.

**೧೩೬.** (ಎಲೈ ಶಿಷ್ಯನೆ), (ಯಮ-ನಿಯಮಾದಿಗಳಿಂದ) ಮನಸ್ಸನ್ನು ವಶಪಡಿಸಿಕೊಂಡು ಪ್ರಸನ್ನಚಿತ್ತದಿಂದ[೧] ಈ ನಿನ್ನ ಆತ್ಮನನ್ನು ನಿನ್ನಲ್ಲಿಯೇ 'ಇವನೇ ನಾನು'[೨] ಎಂದು ಸಾಕ್ಷಾತ್ತಾಗಿ ತಿಳಿದುಕೊ. ಹುಟ್ಟುಸಾವುಗಳೆಂಬ ಅಲೆಗಳಿಂದ ಕೂಡಿ ಅಪಾರವಾಗಿರುವ ಸಂಸಾರಸಮುದ್ರವನ್ನು ದಾಟು, ಪರಬ್ರಹ್ಮಸ್ವರೂಪದಲ್ಲಿ ನಿಂತವನಾಗಿ ಕೃತಕೃತ್ಯನಾಗು.

[[೧] ಅಸಂಭಾವನೆ ಸಂಶಯ ವಿಪರೀತಭಾವನೆ—ಇವುಗಳಿಲ್ಲದೆ. 'ಸೂಕ್ಷ್ಮದರ್ಶಿಗಳು ಏಕಾಗ್ರವಾದ ಸೂಕ್ಷ್ಮವಾದ ಬುದ್ಧಿಯಿಂದ ನೋಡುತ್ತಾರೆ' **ದೃಶ್ಯತೇ ತ್ವಗ್ರ್ಯಯಾ ಬುದ್ಧ್ಯಾ ಸೂಕ್ಷ್ಮಯಾ ಸೂಕ್ಷ್ಮದರ್ಶಿಭಿಃ** (ಕಠ ಉ. ೧. ೩. ೧೨) ಎಂದು ಶ್ರುತಿಯು ಹೇಳುತ್ತದೆ.

[೨] ಸ್ಥೂಲ-ಸೂಕ್ಷ್ಮ-ಕಾರಣ-ಶರೀರಗಳೊಂದಿಗೆ ತಾದಾತ್ಮ್ಯವನ್ನು ಪಡೆಯದೆ, ತತ್ತ್ವಮಸಿ ಎಂಬ ಶ್ರುತಿವಾಕ್ಯದಂತೆ 'ಈ ಆತ್ಮನೇ ನಾನು' ಎಂದು ಸಾಕ್ಷಾತ್ಕರಿಸಿಕೊಳ್ಳಬೇಕು.]

**ಅತ್ರಾನಾತ್ಮನ್ಯಹಮಿತಿ ಮತಿರ್ಬಂಧ ಏಷೋಽಸ್ಯ ಪುಂಸಃ**
**ಪ್ರಾಪ್ತೋಽಜ್ಞಾನಾಜ್ಜನನ-ಮರಣ-ಕ್ಲೇಶ-ಸಂಪಾತ-ಹೇತುಃ ।**
**ಯೇನೈವಾಯಂ ವಪುರಿದಮಸತ್ಸತ್ಯಮಿತ್ಯಾತ್ಮಬುದ್ಧ್ಯಾ**
**ಪುಷ್ಯತ್ಯುಕ್ಷತ್ಯವತಿ ವಿಷಯೈಸ್ತಂತುಭಿಃ ಕೋಶಕೃದ್ವತ್ ॥ ೧೩೭ ॥**

**ಅತ್ರ ಅನಾತ್ಮನಿ**=ಈ ಅನಾತ್ಮನಲ್ಲಿ **ಅಹಮ್ ಇತಿ**='ನಾನು' ಎಂಬ **ಮತಿಃ**=ಬುದ್ಧಿಯು **ಬಂಧಃ**=ಬಂಧವು; **ಜನನ-ಮರಣ-ಕ್ಲೇಶ-ಸಂಪಾತ-ಹೇತುಃ**=ಜನನ ಮರಣಗಳೆಂಬ ಕ್ಲೇಶಗಳ ಹೊಡೆತಕ್ಕೆ ಕಾರಣವಾದ **ಏಷಃ**=ಇದು **ಅಸ್ಯ ಪುಂಸಃ**=ಈ ಮನುಷ್ಯನಿಗೆ **ಅಜ್ಞಾನಾತ್**=ಅಜ್ಞಾನದಿಂದ **ಪ್ರಾಪ್ತಃ**=ಸಂಭವಿಸಿದೆ; **ಯೇನ ಏವ**=ಯಾವ ಇದರಿಂದಲೇ **ಅಯಂ**=ಇವನು **ಅಸತ್**=ಅಸತ್ಯವಾದ **ಇದಂ ವಪುಃ**=ಈ ಶರೀರವನ್ನು **ಸತ್ಯಮ್ ಇತಿ**=ಸತ್ಯವೆಂದು **ಆತ್ಮಬುದ್ಧ್ಯಾ**=ಆತ್ಮನೆಂಬ ಬುದ್ಧಿಯಿಂದ—**ತಂತುಭಿಃ**=ತಂತುಗಳಿಂದ **ಕೋಶಕೃದ್ವತ್**=ಗೂಡನ್ನು ಕಟ್ಟಿ

ಕೊಳ್ಳುವ ರೇಶ್ಮೆಯ ಹುಳುವಿನಂತೆ— **ವಿಷಯೈಃ**= ವಿಷಯಗಳಿಂದ **ಪುಷ್ಯತಿ**= ಪೋಷಿಸಿಕೊಳ್ಳುತ್ತಾನೆ, **ಉಕ್ಷತಿ** = ಸ್ನಾನಮಾಡಿಸುತ್ತಾನೆ, **ಅವತಿ** = ಕಾಪಾಡುತ್ತಾನೆ.

**೧೩೭.** (ಶರೀರವೇ ಮೊದಲಾದ) ಅನಾತ್ಮವಸ್ತುವಿನಲ್ಲಿ 'ನಾನು' ಎಂಬ ಬುದ್ಧಿಯೇ ಬಂಧವು. ಜನನಮರಣಗಳೆಂಬ ಕ್ಲೇಶಗಳ ಹೊಡೆತಕ್ಕೆ ಕಾರಣವಾದ ಈ ಬಂಧವು ಮನುಷ್ಯನಿಗೆ ಅಜ್ಞಾನದಿಂದ ಸಂಭವಿಸಿದೆ. ಈ ಅಭಿಮಾನದಿಂದಲೇ ಇವನು ಈ ಅಸತ್ಯವಾದ ಶರೀರವನ್ನು ಸತ್ಯವೆಂದು ಭಾವಿಸಿಕೊಂಡು ಅದು ತಾನೇ ಎಂಬ ಬುದ್ಧಿಯಿಂದ— ರೇಶ್ಮೆಯ ಹುಳು ತಂತುಗಳಿಂದ ತನ್ನ ಸುತ್ತಲೂ ಗೂಡನ್ನು ಕಟ್ಟಿಕೊಳ್ಳುವಂತೆ— ಅದನ್ನು ವಿಷಯಗಳಿಂದ ಪೋಷಿಸುತ್ತಾನೆ[೧] ಸ್ನಾನಮಾಡಿಸುತ್ತಾನೆ ಕಾಪಾಡುತ್ತಾನೆ.

[[೧] ಮನುಷ್ಯನು ವಿಷಯವಸ್ತುಗಳು ತನಗೆ ಅನುಕೂಲವಾಗಿರುವುವೆಂದು ಭಾವಿಸಿ ಅವುಗಳ ಹಿಂದೆ ಧಾವಿಸುತ್ತಾನೆ. ಪ್ರಮತ್ತನಾದ ಸಂಸಾರಿಗೆ ವಿಷಯಗಳು ಬಂಧವನ್ನುಂಟುಮಾಡುವುವೆಂದು ತಿಳಿದಿರುವುದಿಲ್ಲ.]

**ಅತಸ್ಮಿಂಸ್ತದ್ಬುದ್ಧಿಃ ಪ್ರಭವತಿ ವಿಮೂಢಸ್ಯ ತಮಸಾ**
**ವಿವೇಕಾಭಾವಾದ್ವೈ ಸ್ಫುರತಿ ಭುಜಗೇ ರಜ್ಜುಧಿಷಣಾ ।**
**ತತೋಽನರ್ಥವ್ರಾತೋ ನಿಪತತಿ ಸಮಾದಾತುರಧಿಕ-**
**ಸ್ತತೋ ಯೋಽಸದ್ಗ್ರಾಹಃ ಸ ಹಿ ಭವತಿ ಬಂಧಃ**
**ಶೃಣು ಸಖೇ ॥ ೧೩೮ ॥**

**ತಮಸಾ**= ತಮಸ್ಸಿನಿಂದ **ವಿಮೂಢಸ್ಯ** = ವಿಶೇಷವಾಗಿ ಮೂಢನಾದವನಿಗೆ **ಅತಸ್ಮಿನ್**='ಅದು' ಅಲ್ಲದ್ದರಲ್ಲಿ **ತದ್-ಬುದ್ಧಿಃ**='ಅದು' ಎಂಬ ಬುದ್ಧಿಯು **ಪ್ರಭವತಿ**= ಉಂಟಾಗುತ್ತದೆ; **ವಿವೇಕ-ಅಭಾವಾತ್ ವೈ** = ವಿವೇಕವು ಇಲ್ಲದಿರುವುದರಿಂದಲೇ **ಭುಜಗೇ**=ಹಾವಿನಲ್ಲಿ **ರಜ್ಜು-ಧಿಷಣಾ**=ಹಗ್ಗವೆಂಬ ಬುದ್ಧಿಯು **ಸ್ಫುರತಿ**= ಹೊಳೆಯುತ್ತದೆ; **ತತಃ**= ಅದರಿಂದ **ಸಮಾದಾತುಃ**=ತೆಗೆದುಕೊಳ್ಳುವವನಿಗೆ **ಅಧಿಕಃ**= ಹೆಚ್ಚಾದ **ಅನರ್ಥವ್ರಾತಃ** = ಅನರ್ಥಪರಂಪರೆಯು **ನಿಪತತಿ** = ಬಂದೊದಗುತ್ತದೆ; **ತತಃ** = ಆದುದರಿಂದ **ಸಖೇ** = ಸ್ನೇಹಿತನೆ, **ಶೃಣು** = ಕೇಳು: **ಯಃ** = ಯಾವುದು **ಅಸದ್-ಗ್ರಾಹಃ** = ಅಸತ್-ಗ್ರಹಣವೊ **ಸಃ ಹಿ** = ಅದೇ **ಬಂಧಃ ಭವತಿ** = ಬಂಧವಾಗುತ್ತದೆ.

**೧೩೮.** ಅಜ್ಞಾನವೆಂಬ ಅಂಧಕಾರದಿಂದ ವಿಶೇಷವಾಗಿ ಮೂಢನಾದವನಿಗೆ 'ಅದು' ಅಲ್ಲದ್ದರಲ್ಲಿ 'ಅದು' ಎಂಬ ಬುದ್ಧಿಯು[೧] ಉಂಟಾಗುತ್ತದೆ. ವಿವೇಕವಿಲ್ಲದಿರುವುದರಿಂದಲೇ ಹಾವಿನಲ್ಲಿ ಹಗ್ಗವೆಂಬ ಬುದ್ಧಿಯು ಹೊಳೆಯು

ತ್ತದೆ. ಇಂಥ ಬುದ್ಧಿಯಿಂದ ಅದನ್ನು ತೆಗೆದುಕೊಳ್ಳುವವನಿಗೆ ಅಧಿಕವಾದ ಅನರ್ಥಪರಂಪರೆಯೇ ಬಂದೊದಗುತ್ತದೆ. ಆದುದರಿಂದ ಎಲೈ ಸ್ನೇಹಿತನೆ, ಕೇಳು: ಅಸದ್ವಸ್ತುವನ್ನು ಸದ್ವಸ್ತುವೆಂದು ಗ್ರಹಿಸುವುದೇ ಬಂಧವಾಗಿರುತ್ತದೆ.[೨]

[[೧] ಅನಾತ್ಮವಸ್ತುವಿನಲ್ಲಿ ಆತ್ಮತ್ವಬುದ್ಧಿಯು.
[೨] ಅಥವಾ ಸದ್ವಸ್ತುವನ್ನು ಅಸತ್ ಎಂದು ಭಾವಿಸುವುದು.]

**ಅಖಂಡ-ನಿತ್ಯಾದ್ವಯ-ಬೋಧ-ಶಕ್ತ್ಯಾ**
**ಸ್ಫುರಂತಮಾತ್ಮಾನಮನಂತ-ವೈಭವಮ್ ।**
**ಸಮಾವೃಣೋತ್ಯಾವೃತಿ-ಶಕ್ತಿರೇಷಾ**
**ತಮೋಮಯೀ ರಾಹುರಿವಾರ್ಕಬಿಂಬಮ್ ॥ ೧೩೯ ॥**

**ರಾಹುಃ** = ರಾಹುವು **ಅರ್ಕಬಿಂಬಂ** = ಸೂರ್ಯಮಂಡಲವನ್ನು [ಆವರಿಸುವಂತೆ], **ಅಖಂಡ-ನಿತ್ಯ-ಅದ್ವಯ-ಬೋಧ-ಶಕ್ತ್ಯಾ** = ಅಖಂಡವೂ ನಿತ್ಯವೂ ಅದ್ವಯವೂ ಆದ ಜ್ಞಾನಶಕ್ತಿಯಿಂದ **ಸ್ಫುರಂತಂ**=ಹೊಳೆಯುತ್ತಿರುವ **ಅನಂತವೈಭವಂ**=ಅನಂತವೈಭವದಿಂದ ಕೂಡಿರುವ **ಆತ್ಮಾನಂ** = ಆತ್ಮನನ್ನು **ತಮೋಮಯೀ** = ತಮೋಮಯವಾಗಿರುವ **ಏಷಾ ಆವೃತಿಶಕ್ತಿಃ** = ಈ ಆವರಣಶಕ್ತಿಯು **ಸಮಾವೃಣೋತಿ**= ಆವರಿಸುತ್ತದೆ.

**೧೩೯.** ಅಖಂಡವೂ ನಿತ್ಯವೂ ಅದ್ವಯವೂ ಆದ ಜ್ಞಾನಶಕ್ತಿಯಿಂದ ಹೊಳೆಯುತ್ತಿರುವ ಮತ್ತು ಅನಂತವೈಭವದಿಂದ ಕೂಡಿರುವ ಆತ್ಮನನ್ನು— ರಾಹುವು ಸೂರ್ಯಮಂಡಲವನ್ನು ಆವರಿಸುವಂತೆ— ತಮೋಮಯವಾದ ಈ ಆವರಣಶಕ್ತಿಯು ಆವರಿಸುತ್ತದೆ.

**ತಿರೋಭೂತೇ ಸ್ವಾತ್ಮನ್ಯಮಲತರ-ತೇಜೋವತಿ ಪುಮಾನ್**
**ಅನಾತ್ಮಾನಂ ಮೋಹಾದಹಮಿತಿ ಶರೀರಂ ಕಲಯತಿ ।**
**ತತಃ ಕಾಮಕ್ರೋಧ-ಪ್ರಭೃತಿಭಿರಮುಂ ಬಂಧನಗುಣೈಃ**
**ಪರಂ ವಿಕ್ಷೇಪಾಖ್ಯಾ ರಜಸ ಉರುಶಕ್ತಿರ್ವ್ಯಥಯತಿ**
**॥ ೧೪೦ ॥**

**ಅಮಲತರ-ತೇಜೋವತಿ** = ಅತ್ಯಂತ ಸ್ವಚ್ಛವಾದ ತೇಜಸ್ಸುಳ್ಳ **ಸ್ವಾತ್ಮನಿ** = ತನ್ನ ಆತ್ಮನು **ತಿರೋಭೂತೇ [ಸತಿ]** = ಮರೆಯಾಗಲು **ಪುಮಾನ್** = ಮನುಷ್ಯನು **ಅನಾತ್ಮಾನಂ** = ಅನಾತ್ಮವಾದ **ಶರೀರಂ** = ದೇಹವನ್ನು **ಮೋಹಾತ್** = ಅಜ್ಞಾನದಿಂದ **ಅಹಮ್ ಇತಿ** = 'ನಾನು' ಎಂದು **ಕಲಯತಿ** = ಭಾವಿಸುತ್ತಾನೆ; **ತತಃ** =

ಅನಂತರ **ವಿಕ್ಷೇಪ-ಆಖ್ಯಾ** = ವಿಕ್ಷೇಪವೆಂಬ ಹೆಸರುಳ್ಳ **ರಜಸಃ** = ರಜಸ್ಸಿನ **ಉರು-ಶಕ್ತಿಃ** = ಪ್ರಬಲವಾದ ಶಕ್ತಿಯು **ಕಾಮ-ಕ್ರೋಧ-ಪ್ರಭೃತಿಭಿಃ** = ಕಾಮಕ್ರೋಧಗಳೇ ಮೊದಲಾದ **ಬಂಧನಗುಣೈಃ** = ಬಂಧಕಗುಣಗಳಿಂದ **ಅಮುಂ** = ಇವನನ್ನು **ಪರಂ ವ್ಯಥಯತಿ** = ವಿಶೇಷವಾಗಿ ವ್ಯಥೆಗೊಳಿಸುತ್ತದೆ.

**೧೪೦.** ಅತ್ಯಂತಸ್ವಚ್ಛವಾದ ತೇಜಸ್ಸುಳ್ಳ ತನ್ನ ಆತ್ಮಸ್ವರೂಪವು ಮರೆಯಾಗಲು, ಮನುಷ್ಯನು ಅನಾತ್ಮವಾದ ದೇಹವನ್ನೇ ಅಜ್ಞಾನದಿಂದ 'ನಾನು' ಎಂದು ಭಾವಿಸುತ್ತಾನೆ. ಅನಂತರ ವಿಕ್ಷೇಪವೆಂಬ ಹೆಸರುಳ್ಳ ರಜೋಗುಣದ ಪ್ರಬಲಶಕ್ತಿಯು ಕಾಮಕ್ರೋಧಗಳೇ ಮೊದಲಾದ[೧] ಬಂಧಕ ಗುಣಗಳಿಂದ ಇವನನ್ನು ವಿಶೇಷವಾಗಿ ವ್ಯಥೆಗೊಳಿಸುತ್ತದೆ.

[ಶ್ಲೋಕದ ಪೂರ್ವಾರ್ಧದಲ್ಲಿ ಆವರಣಶಕ್ತಿಯ ಕಾರ್ಯವನ್ನೂ ಉತ್ತರಾರ್ಧದಲ್ಲಿ ವಿಕ್ಷೇಪಶಕ್ತಿಯ ಕಾರ್ಯವನ್ನೂ ತಿಳಿಸಿದೆ.

೧ ಕಾಮಕ್ರೋಧಲೋಭಗಳು ಆತ್ಮನಾಶಕ್ಕೆ ಕಾರಣವಾದ ನರಕದ್ವಾರವೆಂದು ಗೀತೆಯಲ್ಲಿ (೧೬. ೨೧) ಹೇಳಿದೆ.]

**ಮಹಾಮೋಹ-ಗ್ರಾಹ-ಗ್ರಸನ-ಗಲಿತಾತ್ಮಾವಗಮನೋ**
**ಧಿಯೋ ನಾನಾಽವಸ್ಥಾಂ ಸ್ವಯಮಭಿನಯಂಸ್ತದ್ಗುಣತಯಾ ।**
**ಅಪಾರೇ ಸಂಸಾರೇ ವಿಷಯ-ವಿಷಪೂರೇ ಜಲನಿಧೌ**
**ನಿಮಜ್ಜ್ಯೋನ್ಮಜ್ಜ್ಯಾಯಂ ಭ್ರಮತಿ ಕುಮತಿಃ ಕುತ್ಸಿತಗತಿಃ ॥ ೧೪೧ ॥**

**ಕುಮತಿಃ** = ಕುಮತಿಯಾದ **ಕುತ್ಸಿತಗತಿಃ** = ದುರ್ಮಾರ್ಗಿಯಾದ **ಅಯಂ** = ಈ ಜೀವನು **ಮಹಾಮೋಹ-ಗ್ರಾಹ-ಗ್ರಸನ-ಗಲಿತ-ಆತ್ಮ-ಅವಗಮನಃ** = ಮಹಾಮೋಹವೆಂಬ ಮೊಸಳೆಯು ನುಂಗುವಿಕೆಯಿಂದ ಜಾರಿಹೋದ ಆತ್ಮಜ್ಞಾನವುಳ್ಳವನಾಗಿ, **ಸ್ವಯಂ** = ತಾನು **ಧಿಯಃ** = ಬುದ್ಧಿಯ **ನಾನಾ ಅವಸ್ಥಾಂ** = ಭಿನ್ನಭಿನ್ನ ಅವಸ್ಥೆಯನ್ನು **ತದ್ಗುಣತಯಾ** = ಆಯಾ ಗುಣದಿಂದಲೇ **ಅಭಿನಯನ್** = ಅನುಕರಿಸುತ್ತ **ವಿಷಯ-ವಿಷಪೂರೇ** = ವಿಷಯಗಳೆಂಬ ವಿಷದಿಂದ ತುಂಬಿರುವ **ಅಪಾರೇ** = ತೀರವಿಲ್ಲದ **ಸಂಸಾರೇ ಜಲನಿಧೌ** = ಸಂಸಾರಸಾಗರದಲ್ಲಿ **ನಿಮಜ್ಜ್ಯ** = ಮುಳುಗಿ **ಉನ್ಮಜ್ಜ್ಯ** = ಎದ್ದು **ಭ್ರಮತಿ** = ಅಲೆಯುತ್ತಾನೆ.

**೧೪೧.** ಮಹಾಮೋಹವೆಂಬ ಮೊಸಳೆಯು ನುಂಗಿದ್ದರಿಂದ ಆತ್ಮಜ್ಞಾನ ವಿಹೀನನಾಗಿ ಬುದ್ಧಿಯ ಭಿನ್ನ ಭಿನ್ನ ಅವಸ್ಥೆಗಳನ್ನು[೧] ಆಯಾ ಗುಣದ ಅಭಿಮಾನದಿಂದ ತಾನೇ ಅನುಕರಿಸುತ್ತ,[೨] ವಿಷಯವಿಷದಿಂದ ತುಂಬಿರುವ ಅಪಾರವಾದ ಸಂಸಾರಸಮುದ್ರದಲ್ಲಿ ಮುಳುಗುತ್ತ ಏಳುತ್ತ ದುರ್ಮಾರ್ಗಿಯೂ ಕುಮತಿಯೂ ಆದ ಜೀವನು ಅಲೆಯುತ್ತಾನೆ.

[೧ ಜಾಗ್ರತ್-ಸ್ವಪ್ನ-ಸುಷುಪ್ತಿಗಳನ್ನು.
೨ ಜಲದಲ್ಲಿ ಭಾಸವಾಗುತ್ತಿರುವ ಸೂರ್ಯನ ಪ್ರತಿಬಿಂಬವು ಜಲದೊಂದಿಗೆ ತಾನೂ ಚಲಿಸುವಂತೆ.]

**ಭಾನುಪ್ರಭಾ-ಸಂಜನಿತಾಭ್ರಪಂಕ್ತಿ-**
**ರ್ಭಾನುಂ ತಿರೋಧಾಯ ಯಥಾ ವಿಜೃಂಭತೇ ।**
**ಆತ್ಮೋದಿತಾಹಂಕೃತಿರಾತ್ಮತತ್ತ್ವಂ**
**ತಥಾ ತಿರೋಧಾಯ ವಿಜೃಂಭತೇ ಸ್ವಯಮ್॥೧೪೨॥**

**ಯಥಾ** = ಹೇಗೆ **ಭಾನುಪ್ರಭಾ-ಸಂಜನಿತ-ಅಭ್ರಪಂಕ್ತಿಃ** = ಸೂರ್ಯನ ಕಿರಣಗಳಿಂದ ಉಂಟಾದ ಮೇಘಪಂಕ್ತಿಯು **ಭಾನುಂ** = ಸೂರ್ಯನನ್ನು **ತಿರೋಧಾಯ** = ಮರೆಮಾಡಿ **ವಿಜೃಂಭತೇ** = ಮೆರೆಯುತ್ತದೆಯೊ **ತಥಾ** = ಹಾಗೆಯೇ **ಆತ್ಮ-ಉದಿತ-ಅಹಂಕೃತಿಃ** = ಆತ್ಮನಿಂದ ಉತ್ಪನ್ನವಾದ ಅಹಂಕಾರವು **ಆತ್ಮತತ್ತ್ವಂ** = ಆತ್ಮಸ್ವರೂಪವನ್ನು **ತಿರೋಧಾಯ** = ಮರೆಮಾಡಿ **ಸ್ವಯಂ** = ತಾನೇ **ವಿಜೃಂಭತೇ** = ಮೆರೆಯುತ್ತದೆ.

**೧೪೨.** ಸೂರ್ಯನ ಕಿರಣಗಳಿಂದ ಉಂಟಾದ ಮೇಘಪಂಕ್ತಿಯು ಸೂರ್ಯನನ್ನೇ ಮರೆಮಾಡಿ ಹೇಗೆ ಮೆರೆಯುವುದೊ ಹಾಗೆಯೇ ಆತ್ಮನಿಂದಲೇ ಉತ್ಪನ್ನವಾದ ಅಹಂಕಾರವೂ ಕೂಡ ಆತ್ಮಸ್ವರೂಪವನ್ನು ಮರೆಮಾಡಿ ತಾನೇ ಮೆರೆಯುತ್ತದೆ.

**ಕಬಲಿತ-ದಿನನಾಥೇ ದುರ್ದಿನೇ ಸಾಂದ್ರಮೇಘೈ-**
**ರ್ವ್ಯಥಯತಿ ಹಿಮ-ಝಂಝಾ-ವಾಯುರುಗ್ರೋ ಯಥೈತಾನ್ ।**
**ಅವಿರತ-ತಮಸಾತ್ಮನ್ಯಾವೃತೇ ಮೂಢಬುದ್ಧಿಂ**
**ಕ್ಷಪಯತಿ ಬಹುದುಃಖೈಸ್ತೀವ್ರವಿಕ್ಷೇಪಶಕ್ತಿಃ ॥ ೧೪೩ ॥**

**ಸಾಂದ್ರಮೇಘೈಃ** = ನಿಬಿಡವಾದ ಮೇಘಗಳಿಂದ **ಕಬಲಿತ-ದಿನನಾಥೇ** = ನುಂಗಲ್ಪಟ್ಟ ಸೂರ್ಯನುಳ್ಳ **ದುರ್ದಿನೇ** = ದುರ್ದಿನದಲ್ಲಿ **ಉಗ್ರಃ** = ಉಗ್ರವಾದ **ಹಿಮ-ಝಂಝಾ-ವಾಯುಃ** = ಶೀತಲವಾದ ಬಿರುಗಾಳಿಯು **ಏತಾನ್** = ಈ ಜನರನ್ನು **ಯಥಾ** = ಹೇಗೆ **ವ್ಯಥಯತಿ** = ವ್ಯಥೆಗೊಳಿಸುವುದೊ [ಹಾಗೆಯೇ], **ಅವಿರತ-ತಮಸಾ** = ನಿಬಿಡವಾದ ಅಜ್ಞಾನಾಂಧಕಾರದಿಂದ **ಆತ್ಮನಿ ಆವೃತೇ** [**ಸತಿ**] = ಆತ್ಮನು ಆವರಿಸಲ್ಪಟ್ಟಾಗ **ತೀವ್ರವಿಕ್ಷೇಪಶಕ್ತಿಃ** = ತೀವ್ರವಾದ ವಿಕ್ಷೇಪಶಕ್ತಿಯು **ಬಹು-ದುಃಖೈಃ** = ಅನೇಕ ವ್ಯಸನಗಳಿಂದ **ಮೂಢಬುದ್ಧಿಂ** = ಮೂಢಬುದ್ಧಿಯುನ್ನು **ಕ್ಷಪಯತಿ** = ವ್ಯಥೆಗೊಳಿಸುತ್ತದೆ.

**೧೪೩.** ನಿಬಿಡವಾದ ಮೇಘಗಳಿಂದ ಸೂರ್ಯನು ಮರೆಯಾದ ದುರ್ದಿನದಲ್ಲಿ ಉಗ್ರವೂ ಶೀತಲವೂ ಆದ ಬಿರುಗಾಳಿಯು ಈ ಲೋಕದ ಜನರನ್ನು

ಹೇಗೆ ವ್ಯಥೆಗೊಳಿಸುವುದೊ ಹಾಗೆಯೇ ನಿಬಿಡವಾದ ಅಜ್ಞಾನಾಂಧಕಾರವು ಆತ್ಮನನ್ನು ಆವರಿಸಿದಾಗ ತೀವ್ರವಾದ ವಿಕ್ಷೇಪಶಕ್ತಿಯು ಮೂಢಬುದ್ಧಿಯನ್ನು ಅನೇಕ ವ್ಯಸನಗಳಿಂದ ವ್ಯಥೆಗೊಳಿಸುತ್ತದೆ.

**ಏತಾಭ್ಯಾಮೇವ ಶಕ್ತಿಭ್ಯಾಂ ಬಂಧಃ ಪುಂಸಃ ಸಮಾಗತಃ ।**
**ಯಾಭ್ಯಾಂ ವಿಮೋಹಿತೋ ದೇಹಂ ಮತ್ವಾಽತ್ಮಾನಂ**
**ಭ್ರಮತ್ಯಯಮ್ ॥ ೧೪೪ ॥**

**ಏತಾಭ್ಯಾಂ ಶಕ್ತಿಭ್ಯಾಮ್ ಏವ** = ಈ ಎರಡು ಶಕ್ತಿಗಳಿಂದಲೇ **ಪುಂಸಃ** = ಮನುಷ್ಯನಿಗೆ **ಬಂಧಃ** = ಬಂಧವು **ಸಮಾಗತಃ** = ಬಂದಿರುವುದು; **ಅಯಂ** = ಇವನು **ಯಾಭ್ಯಾಂ**=ಯಾವ ಶಕ್ತಿಗಳಿಂದಲೇ **ವಿಮೋಹಿತಃ [ಸನ್]** = ವಿಮೋಹಿತನಾಗಿ **ದೇಹಂ** = ದೇಹವನ್ನು **ಆತ್ಮಾನಂ ಮತ್ವಾ** = ಆತ್ಮನೆಂದು ತಿಳಿದು **ಭ್ರಮತಿ**=ಅಲೆಯುತ್ತಾನೆಯೊ.

**೧೪೪.** (ಆವರಣ-ವಿಕ್ಷೇಪಗಳೆಂಬ) ಈ ಎರಡು ಶಕ್ತಿಗಳಿಂದಲೇ ಮನುಷ್ಯನಿಗೆ ಸಂಸಾರಬಂಧವು ಉಂಟಾಗಿದೆ. ಇವೆರಡರಿಂದ ವಿಮೋಹಿತನಾಗಿ ಶರೀರವೇ ಆತ್ಮನೆಂದು ತಿಳಿದುಕೊಂಡು ಇವನು (ಸಂಸಾರದಲ್ಲಿ) ಅಲೆಯುತ್ತಾನೆ.

**ಬೀಜಂ ಸಂಸೃತಿ_ಭೂಮಿಜಸ್ಯ ತು ತಮೋ ದೇಹಾತ್ಮಧೀರಂಕುರೋ**
**ರಾಗಃ ಪಲ್ಲವಮಂಬು ಕರ್ಮ ತು ವಪುಃ ಸ್ಕಂಧೋಽಸವಃ ಶಾಖಿಕಾಃ।**
**ಅಗ್ರಾಣೀಂದ್ರಿಯ-ಸಂಹತಿಶ್ಚ ವಿಷಯಾಃ ಪುಷ್ಪಾಣಿ ದುಃಖಂ ಫಲಂ**
**ನಾನಾಕರ್ಮಸಮುದ್ಭವಂ ಬಹುವಿಧಂ ಭೋಕ್ತಾಽತ್ರ ಜೀವಃ ಖಗಃ**
**॥ ೧೪೫ ॥**

**ಸಂಸೃತಿ-ಭೂಮಿಜಸ್ಯ** = ಸಂಸಾರವೆಂಬ ವೃಕ್ಷಕ್ಕೆ **ತಮಃ ತು** = ಅಜ್ಞಾನವೇ **ಬೀಜಂ** = ಬೀಜವು, **ದೇಹಾತ್ಮಧೀಃ** = ದೇಹದಲ್ಲಿ ಆತ್ಮಬುದ್ಧಿಯು **ಅಂಕುರಃ** = ಮೊಳಕೆಯು, **ರಾಗಃ**=ಆಸಕ್ತಿಯು **ಪಲ್ಲವಂ**=ಚಿಗುರು, **ಕರ್ಮ ತು**=ಕರ್ಮವೇ **ಅಂಬು** = ನೀರು, **ವಪುಃ** = ಶರೀರವು **ಸ್ಕಂಧಃ** = ಮಧ್ಯಭಾಗ, **ಅಸವಃ**=ಪ್ರಾಣಗಳು **ಶಾಖಿಕಾಃ** = ಕೊಂಬೆಗಳು, **ಇಂದ್ರಿಯಸಂಹತಿಃ ಚ** = ಇಂದ್ರಿಯಸಮೂಹವು **ಅಗ್ರಾಣಿ** = ಕೊಂಬೆಗಳ ತುದಿಗಳು, **ವಿಷಯಾಃ** = ವಿಷಯಗಳು **ಪುಷ್ಪಾಣಿ** = ಪುಷ್ಪಗಳು, **ನಾನಾ-ಕರ್ಮ-ಸಮುದ್ಭವಂ** = ಬಗೆಬಗೆಯ ಕರ್ಮಗಳಿಂದ ಉತ್ಪನ್ನವಾದ **ಬಹುವಿಧಂ ದುಃಖಂ** = ಬಹು ವಿಧವಾದ ದುಃಖವು **ಫಲಂ** = ಫಲವು; **ಜೀವಃ** = ಜೀವನು **ಅತ್ರ** = ಇಲ್ಲಿ **ಭೋಕ್ತಾ ಖಗಃ** = ಅನುಭವಿಸುವ ಪಕ್ಷಿಯು.

**೧೪೫.** ಸಂಸಾರವೆಂಬ ವೃಕ್ಷಕ್ಕೆ[೧] ಅಜ್ಞಾನವೇ ಬೀಜವು, ದೇಹದಲ್ಲಿರುವ ಆತ್ಮಬುದ್ಧಿಯೇ ಮೊಳಕೆಯು, ಆಸಕ್ತಿಯೇ ಚಿಗುರು, ಕರ್ಮವೇ ನೀರು, ಶರೀರವೇ ಮಧ್ಯಭಾಗವು, ಪ್ರಾಣಗಳೇ ಕೊಂಬೆಗಳು, ಇಂದ್ರಿಯ ಸಮೂಹವೇ ಕೊಂಬೆಯ ತುದಿಗಳು, ವಿಷಯಗಳೇ ಪುಷ್ಪಗಳು, ಬಗೆಬಗೆಯ ಕರ್ಮಗಳಿಂದ ಉತ್ಪನ್ನವಾದ ಬಹುವಿಧವಾದ ದುಃಖವೇ ಫಲವು; ಇಲ್ಲಿ ಫಲವನ್ನು ಅನುಭವಿಸುವ ಜೀವನೇ ಪಕ್ಷಿಯು.[೨]

[[೧] ವೇದಾಂತದಲ್ಲಿ ಸಂಸಾರವನ್ನು ವೃಕ್ಷಕ್ಕೆ ಹೋಲಿಸುವುದು ಸಾಮಾನ್ಯವಾಗಿದೆ. ಕಠೋಪನಿಷತ್ತಿನ ೬. ೧ನ್ನೂ ಗೀತೆಯ ೧೫ನೆಯ ಅಧ್ಯಾಯವನ್ನು ನೋಡಿ.

[೨] ಎರಡು ಪಕ್ಷಿಗಳು ಒಂದು ಮರವನ್ನು ಆಶ್ರಯಿಸಿಕೊಂಡಿವೆಯೆಂದು ಮುಂಡಕೋಪನಿಷತ್ತು (೩. ೧) ಹೇಳುತ್ತದೆ. ಇವೆರಡರಲ್ಲಿ ಒಂದು ಜೀವಾತ್ಮ, ಮತ್ತೊಂದು ಪರಮಾತ್ಮ.]

**ಅಜ್ಞಾನಮೂಲೋಽಯಮನಾತ್ಮಬಂಧೋ**
**ನೈಸರ್ಗಿಕೋಽನಾದಿರನಂತ ಈರಿತಃ ।**
**ಜನ್ಮಾಪ್ಯಯ-ವ್ಯಾಧಿ-ಜರಾದಿದುಃಖ-**
**ಪ್ರವಾಹಪಾತಂ ಜನಯತ್ಯಮುಷ್ಯ ॥ ೧೪೬ ॥**

**ಅಜ್ಞಾನಮೂಲಃ** = ಅಜ್ಞಾನವನ್ನೇ ಮೂಲವಾಗಿ ಉಳ್ಳ **ಅಯಂ** = ಈ **ಅನಾತ್ಮಬಂಧಃ** = ಅನಾತ್ಮವೆಂಬ ಬಂಧವು **ನೈಸರ್ಗಿಕಃ** = ನೈಸರ್ಗಿಕವಾಗಿಯೂ **ಅನಾದಿಃ** = ಅನಾದಿಯಾಗಿಯೂ **ಅನಂತಃ** = ಅನಂತವಾಗಿಯೂ [ಇರುವುದೆಂದು] **ಈರಿತಃ** = ಹೇಳಲ್ಪಟ್ಟಿದೆ; [ಇದು] **ಅಮುಷ್ಯ** = ಇವನಿಗೆ **ಜನ್ಮ-ಅಪ್ಯಯ-ವ್ಯಾಧಿ-ಜರಾ-ಆದಿ-ದುಃಖ-ಪ್ರವಾಹ-ಪಾತಂ** = ಜನ್ಮ ನಾಶ ವ್ಯಾಧಿ ಮುಪ್ಪು ಮೊದಲಾದ ದುಃಖಪ್ರವಾಹದಲ್ಲಿ ಪತನವನ್ನು **ಜನಯತಿ** = ಉಂಟುಮಾಡುತ್ತದೆ.

**೧೪೬.** ಈ ಅನಾತ್ಮಬಂಧವು ಅಜ್ಞಾನದಿಂದ ಉಂಟಾಗಿದೆ. ಇದು ನೈಸರ್ಗಿಕವಾಗಿಯೂ[೧] ಅನಾದಿಯಾಗಿಯೂ ಅನಂತವಾಗಿಯೂ ಇದೆಯೆಂದು ಹೇಳಲ್ಪಟ್ಟಿದೆ.[೨] ಇದು ಜೀವನನ್ನು ಜನ್ಮ ನಾಶ ವ್ಯಾಧಿ ಮುಪ್ಪು ಮೊದಲಾದ ದುಃಖಪ್ರವಾಹದಲ್ಲಿ ಬೀಳುವಂತೆ ಮಾಡುತ್ತದೆ.

[[೧] ಇದು ಬೇರೆ ಕಾರಣವನ್ನು ಅಪೇಕ್ಷಿಸದೆ ತಾನಾಗಿಯೇ ಹುಟ್ಟುತ್ತದೆ.

[೨] 'ಇದರ ಆದಿಯಾಗಲಿ ಮಧ್ಯವಾಗಲಿ ಅಂತವಾಗಲಿ ಕಾಣುವುದಿಲ್ಲ' **ನಾಂತೋ ನ ಚಾದಿರ್ನ ಚ ಸಂಪ್ರತಿಷ್ಠಾ** (ಗೀತಾ ೧೫. ೩). ]

**ನಾಸ್ತ್ರೈರ್ನ ಶಸ್ತ್ರೈರನಿಲೇನ ವಹ್ನಿನಾ**
**ಛೇತ್ತುಂ ನ ಶಕ್ಯೋ ನ ಚ ಕರ್ಮಕೋಟಿಭಿಃ ।**
**ವಿವೇಕವಿಜ್ಞಾನ-ಮಹಾಸಿನಾ ವಿನಾ**
**ಧಾತುಃ ಪ್ರಸಾದೇನ ಶಿತೇನ ಮಂಜುನಾ ॥ ೧೪೭ ॥**

[ಈ ಬಂಧವು] ಧಾತುಃ **ಪ್ರಸಾದೇನ**=ಪರಮಾತ್ಮನ ಅನುಗ್ರಹದಿಂದ **ಶಿತೇನ**=ತೀಕ್ಷ್ಣವಾದ **ಮಂಜುನಾ**=ಮನೋಹರವಾದ **ವಿವೇಕವಿಜ್ಞಾನ-ಮಹಾ-ಅಸಿನಾ ವಿನಾ**=ವಿವೇಕವಿಜ್ಞಾನವೆಂಬ ಮಹಾಖಡ್ಗದಿಂದಲ್ಲದೆ **ಅಸ್ತ್ರೈಃ**=ಅಸ್ತ್ರಗಳಿಂದ **ಶಸ್ತ್ರೈಃ**=ಶಸ್ತ್ರಗಳಿಂದ **ಅನಿಲೇನ**=ಗಾಳಿಯಿಂದ **ವಹ್ನಿನಾ**=ಬೆಂಕಿಯಿಂದ **ಛೇತ್ತುಂ**=ಕತ್ತರಿಸಲು **ನ ಶಕ್ಯಃ**=ಸಾಧ್ಯವಿಲ್ಲ; **ಕರ್ಮಕೋಟಿಭಿಃ ಚ**=ಕರ್ಮಗಳ ಕೋಟಿಗಳಿಂದಾಗಲಿ [ಕತ್ತರಿಸಲಾಗುವುದಿಲ್ಲ].

**೧೪೭.** ಈ ಬಂಧವನ್ನು ಅಸ್ತ್ರಗಳಿಂದಾಗಲಿ ಶಸ್ತ್ರಗಳಿಂದಾಗಲಿ ಗಾಳಿಯಿಂದಾಗಲಿ ಬೆಂಕಿಯಿಂದಾಗಲಿ ಕತ್ತರಿಸಲು ಸಾಧ್ಯವಿಲ್ಲ; ಕೋಟಿಕರ್ಮಗಳಿಂದಲೂ ಸಾಧ್ಯವಿಲ್ಲ; ಪರಮಾತ್ಮನ ಅನುಗ್ರಹದಿಂದ[೧] ತೀಕ್ಷ್ಣವಾದ ಮನೋಹರವಾದ ವಿವೇಕವಿಜ್ಞಾನವೆಂಬ ಮಹಾಖಡ್ಗದಿಂದಲೇ ಸಾಧ್ಯ.

[[೧] 'ಧಾತುವಿನ ಅನುಗ್ರಹದಿಂದ ಆತ್ಮನ ಮಹಿಮೆಯನ್ನು ನೋಡುತ್ತಾನೆ' **ಧಾತುಪ್ರಸಾದಾನ್ಮಹಿಮಾನಮಾತ್ಮನಃ** ಎಂದು ಶ್ರುತಿಯು (ಕಠ ಉ. ೧. ೨. ೨೦) ಹೇಳುತ್ತದೆ.]

**ಶ್ರುತಿಪ್ರಮಾಣೈಕಮತೇಃ ಸ್ವಧರ್ಮ-**
**ನಿಷ್ಠಾ ತಯೈವಾತ್ಮವಿಶುದ್ಧಿರಸ್ಯ ।**
**ವಿಶುದ್ಧಬುದ್ಧೇಃ ಪರಮಾತ್ಮವೇದನಂ**
**ತೇನೈವ ಸಂಸಾರ-ಸಮೂಲ-ನಾಶಃ ॥ ೧೪೮ ॥**

**ಶ್ರುತಿಪ್ರಮಾಣ-ಏಕಮತೇಃ**=ಶ್ರುತಿಪ್ರಮಾಣದಲ್ಲಿಯೇ ಬುದ್ಧಿಯುಳ್ಳವನಿಗೆ **ಸ್ವಧರ್ಮನಿಷ್ಠಾ**=ಸ್ವಧರ್ಮದಲ್ಲಿ ನಿಷ್ಠೆಯು [ಉಂಟಾಗುತ್ತದೆ]; **ಅಸ್ಯ**=ಇವನಿಗೆ **ತಯಾ ಏವ**=ಅದರಿಂದಲೇ **ಆತ್ಮವಿಶುದ್ಧಿಃ**=ಚಿತ್ತಶುದ್ಧಿಯು; **ವಿಶುದ್ಧಬುದ್ಧೇಃ**=ಚಿತ್ತಶುದ್ಧಿಯನ್ನು ಹೊಂದಿದವನಿಗೆ **ಪರಮಾತ್ಮ-ವೇದನಂ**=ಪರಮಾತ್ಮಜ್ಞಾನವು; **ತೇನ ಏವ**=ಅದರಿಂದಲೇ **ಸಂಸಾರ-ಸಮೂಲ-ನಾಶಃ**=ಬೇರುಸಹಿತ ಸಂಸಾರ-ನಾಶ.

**೧೪೮.** ಶ್ರುತಿಪ್ರಮಾಣದಲ್ಲಿಯೇ[೧] ಬುದ್ಧಿಯನ್ನಿಟ್ಟುಕೊಂಡಿರುವವನಿಗೆ ಸ್ವಧರ್ಮದಲ್ಲಿ ನಿಷ್ಠೆಯುಂಟಾಗುವುದು. ಅದರಿಂದಲೇ ಅವನಿಗೆ ಚಿತ್ತಶುದ್ಧಿಯುಂಟಾಗುವುದು. ಚಿತ್ತಶುದ್ಧಿಯನ್ನು ಹೊಂದಿದವನಿಗೆ ಪರಮಾತ್ಮ

ಜ್ಞಾನವು ಉಂಟಾಗುವುದು. ಅದರಿಂದಲೇ ಸಂಸಾರವು ನಿರ್ಮೂಲವಾಗಿ ನಾಶವಾಗುತ್ತದೆ.

[೧'ಕಾರ್ಯ ಅಕಾರ್ಯ ಇವುಗಳ ನಿರ್ಧಾರಣೆಯಲ್ಲಿ ಶಾಸ್ತ್ರವೇ ನಿನಗೆ ಪ್ರಮಾಣ' **ತಸ್ಮಾಚ್ಛಾಸ್ತ್ರಂ ಪ್ರಮಾಣಂ ತೇ ಕಾರ್ಯಾಕಾರ್ಯವ್ಯವಸ್ಥಿತೌ** ಎಂದು ಭಗವಂತನು (ಗೀತಾ ೧೬. ೨೪) ಹೇಳಿದ್ದಾನೆ.]

**ಕೋಶೈರನ್ನಮಯಾದ್ಯೈಃ ಪಂಚಭಿರಾತ್ಮಾ ನ ಸಂವೃತೋ ಭಾತಿ ।**
**ನಿಜಶಕ್ತಿ-ಸಮುತ್ಪನ್ನೈಃ ಶೈವಾಲ-ಪಟಲೈರಿವಾಂಬು ವಾಪಿಸ್ಥಮ್**
**॥ ೧೪೯ ॥**

**ಶೈವಾಲ-ಪಟಲೈಃ** = ಪಾಚಿಯ ಪದರಗಳಿಂದ [ಮುಚ್ಚಲ್ಪಟ್ಟ] **ವಾಪಿಸ್ಥಂ** = ಕೊಳದಲ್ಲಿರುವ **ಅಂಬು ಇವ** = ನೀರಿನಂತೆ **ನಿಜಶಕ್ತಿ-ಸಮುತ್ಪನ್ನೈಃ** = ತನ್ನ ಶಕ್ತಿಯಿಂದ ಉಂಟಾದ **ಅನ್ನಮಯಾದ್ಯೈಃ** = ಅನ್ನಮಯವೇ ಮೊದಲಾದ **ಪಂಚಭಿಃ ಕೋಶೈಃ** = ಪಂಚಕೋಶಗಳಿಂದ **ಸಂವೃತಃ** = ಮುಚ್ಚಲ್ಪಟ್ಟ **ಆತ್ಮಾ** = ಆತ್ಮನು **ನ ಭಾತಿ** = ಕಾಣಿಸಿಕೊಳ್ಳುವುದಿಲ್ಲ.

**೧೪೯.** ಪಾಚಿಯ ಪದರಗಳಿಂದ ಮುಚ್ಚಲ್ಪಟ್ಟ ಕೊಳದಲ್ಲಿ ನೀರು ಕಾಣದೆ ಇರುವಂತೆ ತನ್ನ ಶಕ್ತಿಯಿಂದಲೇ ಉಂಟಾಗಿರುವ ಅನ್ನಮಯಾದಿ ಪಂಚಕೋಶಗಳಿಂದ ಮುಚ್ಚಲ್ಪಟ್ಟ ಆತ್ಮನು ಕಾಣಿಸಿಕೊಳ್ಳದೆ ಇರುತ್ತಾನೆ.

**ತಚ್ಛೈವಾಲಾಪನಯೇ ಸಮ್ಯಕ್ ಸಲಿಲಂ ಪ್ರತೀಯತೇ ಶುದ್ಧಮ್।**
**ತೃಷ್ಣಾ-ಸಂತಾಪಹರಂ ಸದ್ಯಃ ಸೌಖ್ಯಪ್ರದಂ ಪರಂ ಪುಂಸಃ ॥ ೧೫೦ ॥**

**ತತ್-ಶೈವಾಲ-ಅಪನಯೇ** = [ನೀರನ್ನು ಮುಚ್ಚಿಕೊಂಡಿರುವ] ಆ ಪಾಚಿಯನ್ನು ತೆಗೆದಾಗ **ಪುಂಸಃ**=ಮನುಷ್ಯನ **ತೃಷ್ಣಾ-ಸಂತಾಪಹರಂ**=ತೃಷ್ಣೆಯ ಸಂಕಟವನ್ನು ಹೋಗಲಾಡಿಸುವ, **ಸದ್ಯಃ** = ಕೂಡಲೇ **ಪರಂ ಸೌಖ್ಯಪ್ರದಂ**=ಅತ್ಯಂತ-ಸುಖಪ್ರದವಾದ **ಶುದ್ಧಂ** = ನಿರ್ಮಲವಾದ **ಸಲಿಲಂ**=ನೀರು **ಸಮ್ಯಕ್**=ಚೆನ್ನಾಗಿ **ಪ್ರತೀಯತೇ** = ಕಾಣಬರುವುದು.

**೧೫೦.** (ನೀರನ್ನು ಮುಚ್ಚಿಕೊಂಡಿರುವ) ಆ ಪಾಚಿಯನ್ನು ತೆಗೆದರೆ ಮನುಷ್ಯನ ತೃಷ್ಣೆಯ ಸಂಕಟವನ್ನು ಹೋಗಲಾಡಿಸುವ, ಕೂಡಲೇ ಅತ್ಯಂತ ಸುಖವನ್ನು ಉಂಟುಮಾಡುವ, ನಿರ್ಮಲವಾದ ನೀರು ಚೆನ್ನಾಗಿ ಕಾಣಬರುವುದು.

[ನೀರನ್ನು ಎಲ್ಲಿಂದಲೂ ತರಬೇಕಾದ ಆವಶ್ಯಕತೆಯಿಲ್ಲ. ನೀರು ಅಲ್ಲೇ ಇದೆ. ಅದರ ಮೇಲಿರುವ ಆವರಣವನ್ನು ಮಾತ್ರ ತೆಗೆಯಬೇಕು. ಹೀಗೆಯೇ ಆತ್ಮನ ವಿಷಯದಲ್ಲಿಯೂ ಅರಿಯಬೇಕು.]

**ಪಂಚಾನಾಮಪಿ ಕೋಶಾನಾಮಪವಾದೇ ವಿಭಾತ್ಯಯಂ ಶುದ್ಧಃ ।**
**ನಿತ್ಯಾನಂದೈಕರಸಃ ಪ್ರತ್ಯಗ್ರೂಪಃ ಪರಂ ಸ್ವಯಂಜ್ಯೋತಿಃ ॥ ೧೫೧ ॥**

**ಪಂಚಾನಾಮ್ ಅಪಿ** = ಪಂಚವಿಧವಾಗಿರುವ **ಕೋಶಾನಾಂ** = ಕೋಶಗಳ **ಅಪವಾದೇ** = ತೆಗೆಯಲ್ಪಟ್ಟಾಗ **ನಿತ್ಯಾನಂದೈಕರಸಃ** = ನಿತ್ಯಾನಂದೈಕರಸನೂ **ಪ್ರತ್ಯಕ್-ರೂಪಃ** = ಸರ್ವಾಂತರನೂ **ಪರಂ** = ಸರ್ವೋತ್ಕೃಷ್ಟನೂ **ಸ್ವಯಂಜ್ಯೋತಿಃ** = ಸ್ವಯಂ ಪ್ರಕಾಶನೂ **ಶುದ್ಧಃ** = ಶುದ್ಧನೂ [ಆದ] **ಅಯಂ** = ಈ ಆತ್ಮನು **ವಿಭಾತಿ** = ಕಾಣಿಸಿ ಕೊಳ್ಳುತ್ತಾನೆ.

**೧೫೧.** ಅನ್ನಮಯವೇ ಮೊದಲಾದ ಪಂಚಕೋಶಗಳನ್ನು ತೆಗೆದು ಹಾಕಿದರೆ ನಿತ್ಯಾನಂದೈಕರಸನೂ ಸರ್ವಾಂತರನೂ ಸರ್ವೋತ್ಕೃಷ್ಟನೂ ಸ್ವಯಂಪ್ರಕಾಶನೂ ಶುದ್ಧನೂ ಆದ ಈ ಆತ್ಮನು ಕಾಣಿಸಿಕೊಳ್ಳುತ್ತಾನೆ.

**ಆತ್ಮಾನಾತ್ಮವಿವೇಕಃ ಕರ್ತವ್ಯೋ ಬಂಧಮುಕ್ತಯೇ ವಿದುಷಾ ।**
**ತೇನೈವಾನಂದೀ ಭವತಿ ಸ್ವಂ ವಿಜ್ಞಾಯ ಸಚ್ಚಿದಾನಂದಮ್ ॥೧೫೨॥**

**ವಿದುಷಾ** = ಪಂಡಿತನಿಂದ **ಬಂಧಮುಕ್ತಯೇ** = ಬಂಧದ ಬಿಡುಗಡೆಗಾಗಿ **ಆತ್ಮ-ಅನಾತ್ಮ-ವಿವೇಕಃ** = ಆತ್ಮ-ಅನಾತ್ಮಗಳ ವಿವೇಚನವು **ಕರ್ತವ್ಯಃ** = ಮಾಡ ತಕ್ಕದ್ದು; **ತೇನ ಏವ** = ಅದರಿಂದಲೇ **ಸ್ವಂ ಸಚ್ಚಿದಾನಂದಂ** = ತನ್ನ ಸಚ್ಚಿದಾನಂದ ಸ್ವರೂಪವನ್ನು **ವಿಜ್ಞಾಯ** = ಅರಿತುಕೊಂಡು **ಆನಂದೀ ಭವತಿ** = ಆನಂದಿಯಾಗು ತ್ತಾನೆ.

**೧೫೨.** ಪಂಡಿತನಾದವನು ಬಂಧದಿಂದ ಬಿಡುಗಡೆಯನ್ನು ಹೊಂದಲು ಆತ್ಮ, ಅನಾತ್ಮ ಇವುಗಳ ವಿವೇಕವನ್ನು ಮಾಡಿಕೊಳ್ಳಬೇಕು. ಆ ವಿವೇಕ ದಿಂದಲೇ ತನ್ನ ಸಚ್ಚಿದಾನಂದಸ್ವರೂಪವನ್ನು ತಿಳಿದುಕೊಂಡು ಆನಂದಿ ಯಾಗುತ್ತಾನೆ.

**ಮುಂಜಾದಿಷೀಕಾಮಿವ ದೃಶ್ಯವರ್ಗಾತ್**
**ಪ್ರತ್ಯಂಚಮಾತ್ಮಾನಮಸಂಗಮಕ್ರಿಯಮ್ ।**
**ವಿವಿಚ್ಯ ತತ್ರ ಪ್ರವಿಲಾಪ್ಯ ಸರ್ವಂ**
**ತದಾತ್ಮನಾ ತಿಷ್ಠತಿ ಯಃ ಸ ಮುಕ್ತಃ ॥ ೧೫೩ ॥**

**ಯಃ** = ಯಾವನು **ಮುಂಜಾತ್** = ಮುಂಜವೆಂಬ ಹುಲ್ಲಿನಿಂದ **ಇಷೀಕಾಮ್ ಇವ** = ದಂಟನ್ನು ಬೇರ್ಪಡಿಸುವಂತೆ **ದೃಶ್ಯವರ್ಗಾತ್** = ದೃಶ್ಯಸಮೂಹದಿಂದ **ಅಸಂಗಂ** = ಸಂಗರಹಿತನೂ **ಅಕ್ರಿಯಂ** = ಕ್ರಿಯಾಶೂನ್ಯನೂ ಆದ **ಪ್ರತ್ಯಂಚಮ್ ಆತ್ಮಾನಂ** = ಪ್ರತ್ಯಗಾತ್ಮನನ್ನು **ವಿವಿಚ್ಯ** = ಬೇರ್ಪಡಿಸಿ **ತತ್ರ** = ಆ ಆತ್ಮನಲ್ಲಿ **ಸರ್ವಂ** = ಅನಾತ್ಮವರ್ಗವೆಲ್ಲವನ್ನೂ **ಪ್ರವಿಲಾಪ್ಯ** = ಲಯಹೊಂದಿಸಿ **ತತ್-ಆತ್ಮನಾ** = ಆ ಆತ್ಮಸ್ವರೂಪದಿಂದಲೇ **ತಿಷ್ಠತಿ** = ನಿಲ್ಲುತ್ತಾನೆಯೊ **ಸಃ** = ಅವನೇ **ಮುಕ್ತಃ** = ಮುಕ್ತನು

**೧೫೩.** ಮುಂಜವೆಂಬ ಹುಲ್ಲಿನಿಂದ ಅದರ ದಂಟನ್ನು ಬೇರ್ಪಡಿಸುವಂತೆ[೧] ಯಾವನು ದೃಶ್ಯಸಮೂಹದಿಂದ[೨] ಸಂಗರಹಿತನೂ ಕ್ರಿಯಾಶೂನ್ಯನೂ ಆದ ಪ್ರತ್ಯಗಾತ್ಮನನ್ನು ಬೇರ್ಪಡಿಸಿ, ಆ ಆತ್ಮನಲ್ಲಿ ಅನಾತ್ಮವರ್ಗವೆಲ್ಲವನ್ನೂ ಲಯಹೊಂದಿಸಿ ಆ ಆತ್ಮಸ್ವರೂಪದಿಂದಲೇ ನಿಲ್ಲುವನೊ ಅವನೇ ಮುಕ್ತನು.

[ಇಲ್ಲಿ ವಿವೇಚನಪ್ರಕಾರವನ್ನು ದೃಷ್ಟಾಂತದ ಮೂಲಕ ಹೇಳಿದೆ.
೧ **ಮುಂಜಾದಿವ ಇಷೀಕಾಮ್** (ಕಠ ಉ. ೨. ೬. ೧೭).
೨ ದೇಹೇಂದ್ರಿಯಂಗಳ ಗುಂಪಿನಿಂದ.]

**ದೇಹೋಽಯಮನ್ನಭವನೋಽನ್ನಮಯಸ್ತು ಕೋಶ-**
**ಶ್ಚಾನ್ನೇನ ಜೀವತಿ ವಿನಶ್ಯತಿ ತದ್ವಿಹೀನಃ ।**
**ತ್ವಕ್ಚರ್ಮ-ಮಾಂಸ-ರುಧಿರಾಸ್ಥಿ-ಪುರೀಷರಾಶಿ-**
**ರ್ನಾಯಂ ಸ್ವಯಂ ಭವಿತುಮರ್ಹತಿ ನಿತ್ಯಶುದ್ಧಃ**
**॥ ೧೫೪ ॥**

**ಅಯಂ ದೇಹಃ ತು** = ಈ ಶರೀರವು **ಅನ್ನಭವನಃ** = ಅನ್ನದಿಂದ ಉತ್ಪನ್ನವಾದದ್ದು, **ಅನ್ನಮಯಃ ಕೋಶಃ** = ಅನ್ನಮಯ ಕೋಶವು; **ಅನ್ನೇನ** = ಅನ್ನದಿಂದ **ಜೀವತಿ** = ಬದುಕಿರುವುದು, **ತದ್ವಿಹೀನಃ** = ಅದಿಲ್ಲದಿದ್ದರೆ **ವಿನಶ್ಯತಿ** = ನಾಶವಾಗುತ್ತದೆ; **ತ್ವಕ್-ಚರ್ಮ-ಮಾಂಸ-ರುಧಿರ-ಅಸ್ಥಿ-ಪುರೀಷ-ರಾಶಿಃ** = ತ್ವಕ್ಕು, ಚರ್ಮ, ಮಾಂಸ, ರಕ್ತ, ಮೂಳೆ, ಮಲ ಇವುಗಳ ರಾಶಿಯಾದ **ಅಯಂ** = ಇದು **ಸ್ವಯಂ** = ತಾನೇ **ನಿತ್ಯಶುದ್ಧಃ** = ನಿತ್ಯಶುದ್ಧವು **ಭವಿತುಂ** = ಆಗಲು **ನ ಅರ್ಹತಿ** = ಅರ್ಹವಲ್ಲ.

**೧೫೪.** ಈ ಶರೀರವು ಅನ್ನದಿಂದ ಹುಟ್ಟಿದೆ, ಅನ್ನಮಯಕೋಶವಾಗಿದೆ. ಇದು ಅನ್ನದಿಂದ ಬದುಕಿರುವುದು, ಅದಿಲ್ಲದಿದ್ದರೆ ನಾಶವಾಗುತ್ತದೆ. ತ್ವಕ್ಕು ಚರ್ಮ ಮಾಂಸ ರಕ್ತ ಮೂಳೆ ಮಲ ಇವುಗಳ ರಾಶಿಯಾಗಿರುವ ಈ ಶರೀರವು ನಿತ್ಯಶುದ್ಧವಾದ ಆತ್ಮವಸ್ತುವಾಗಲಾರದು.

[ಇಲ್ಲಿಂದ ಅನ್ನಮಯಕೋಶದ ಲಕ್ಷಣವನ್ನು ಹೇಳಿದೆ. 'ಆ ಈ ಪುರುಷನು ಅನ್ನರಸಮಯನು' ಸ ವಾ ಏಷ ಪುರುಷೋಽನ್ನರಸಮಯಃ (ತೈತ್ತಿರೀಯ ಉ. ೨. ೧). ಅನ್ನರಸಮಯನು ಎಂದರೆ ಅನ್ನರಸದ ವಿಕಾರ ಅಥವಾ ಕಾರ್ಯ.]

**ಪೂರ್ವಂ ಜನೇರಪಿ ಮೃತೇರಥ ನಾಯಮಸ್ತಿ**
**ಜಾತಕ್ಷಣಃ ಕ್ಷಣಗುಣೋಽನಿಯತಸ್ವಭಾವಃ ।**
**ನೈಕೋ ಜಡಶ್ಚ ಘಟವತ್ಪರಿದೃಶ್ಯಮಾನಃ**
**ಸ್ವಾತ್ಮಾ ಕಥಂ ಭವತಿ ಭಾವವಿಕಾರವೇತ್ತಾ ॥ ೧೫೫ ॥**

**ಅಯಂ** = ಈ ಶರೀರವು **ಜನೇಃ ಪೂರ್ವಮ್ ಅಪಿ** = ಜನಿಸುವುದಕ್ಕೆ ಮೊದಲೂ **ಮೃತೇಃ ಅಥ** = ಸತ್ತಮೇಲೆಯೂ **ನ ಅಸ್ತಿ** = ಇರುವುದಿಲ್ಲ; **ಜಾತ-ಕ್ಷಣಃ** = ಕ್ಷಣಕಾಲ ಬದುಕಿರುತ್ತದೆ; **ಕ್ಷಣಗುಣಃ** = ಕ್ಷಣಿಕವಾದ ಗುಣವುಳ್ಳದ್ದು; **ಅನಿಯತಸ್ವಭಾವಃ** = ನಿಯತವಾದ ಸ್ವಭಾವವಿಲ್ಲದ್ದು; **ನ ಏಕಃ** = ಅನೇಕ ರೂಪವುಳ್ಳದ್ದು; **ಜಡಃ** = ಜಡವಾದದ್ದು; **ಘಟವತ್** = ಗಡಿಗೆಯಂತೆ **ಪರಿದೃಶ್ಯ-ಮಾನಃ** = ದೃಶ್ಯವಾಗಿದೆ; [ಇದು] **ಭಾವ-ವಿಕಾರ-ವೇತ್ತಾ** = ದೇಹಾದಿಸಂಘಾತದ ವಿಕಾರವನ್ನರಿಯುವ **ಸ್ವಾತ್ಮಾ** = ಆತ್ಮನು **ಕಥಂ ಭವತಿ** = ಹೇಗಾದೀತು?

**೧೫೫.** ಈ ಶರೀರವು ಹುಟ್ಟುವುದಕ್ಕಿಂತ ಮೊದಲೂ ಸತ್ತಮೇಲೆಯೂ ಇರುವುದಿಲ್ಲ. ನಡುವೆ ಕೆಲವು ಕಾಲವಿರುತ್ತದೆ. ಇದು ಕ್ಷಣಿಕವಾದ ಗುಣಗಳುಳ್ಳದ್ದು, ನಿಯತವಾದ ಸ್ವಭಾವವಿಲ್ಲದ್ದು, ಅನೇಕರೂಪಗಳುಳ್ಳದ್ದು;[೧] ಇದು ಜಡವಾಗಿ ಗಡಿಗೆಯಂತೆ ದೃಶ್ಯವಾಗಿರುತ್ತದೆ. ದೇಹವೇ ಮೊದಲಾದ ಸಂಘಾತದ ವಿಕಾರಗಳನ್ನು ಅರಿಯುವ ಆತ್ಮನು ಹೇಗಾದೀತು?

[[೧] ಅವಯವಗಳ ಉಪಚಯ-ಅಪಚಯಗಳಿಂದ ಭಿನ್ನಭಿನ್ನವಾದ ರೂಪವನ್ನು ಹೊಂದುವುದು.]

**ಪಾಣಿ-ಪಾದಾದಿಮಾನ್ ದೇಹೋ ನಾತ್ಮಾ ವ್ಯಂಗೇಽಪಿ ಜೀವನಾತ್ ।**
**ತತ್ತಚ್ಛಕ್ತೇರನಾಶಾಚ್ಚ ನ ನಿಯಮ್ಯೋ ನಿಯಾಮಕಃ ॥ ೧೫೬ ॥**

**ಪಾಣಿ-ಪಾದ-ಆದಿಮಾನ್** = ಕೈ ಕಾಲು ಮೊದಲಾದುವುಗಳನ್ನುಳ್ಳ **ದೇಹಃ** = ಶರೀರವು **ನ ಆತ್ಮಾ** = ಆತ್ಮನಲ್ಲ; **ವ್ಯಂಗೇ ಅಪಿ** = ಯಾವುದಾದರೂ ಒಂದು ಅಂಗವು ನಾಶವಾದರೂ **ಜೀವನಾತ್** = ಬದುಕಿರುವುದರಿಂದಲೂ, **ತತ್-ತತ್-ಶಕ್ತೇಃ** = ಆಯಾ ಶಕ್ತಿಯ **ಅನಾಶಾತ್ ಚ** = ನಾಶವಾಗದೆ ಇರುವುದರಿಂದಲೂ [ಆತ್ಮನಲ್ಲ]; **ನ ನಿಯಮ್ಯಃ** = ನಿಯಮಿಸಲ್ಪಡತಕ್ಕವನಲ್ಲ, **ನಿಯಾಮಕಃ** = ನಿಯಾಮಕನು.

**೧೫೬.** ಕೈ ಕಾಲು ಮೊದಲಾದ ಅವಯುವಗಳುಳ್ಳ ದೇಹವು ಆತ್ಮನಲ್ಲ; ಏಕೆಂದರೆ ಅವನು ಯಾವುದಾದರೂ ಒಂದು ಅಂಗವು ನಾಶವಾದರೂ ಬದುಕಿರುತ್ತಾನೆ[೧] ಮತ್ತು ಆಯಾ ಶಕ್ತಿಯೂ ನಾಶವಾಗುವುದಿಲ್ಲ.[೨] ಈ ಆತ್ಮನು ನಿಯಮಿಸಲ್ಪಡತಕ್ಕವನಲ್ಲ, ಆದರೆ ನಿಯಾಮಕನು.

[[೧] 'ಜೀವನು ಈ ಮರದ ಒಂದು ಕೊಂಬೆಯುನ್ನು ಬಿಟ್ಟರೆ ಆಗ ಅದು ಒಣಗುತ್ತದೆ . . . ಜೀವನು ಇಡೀ ಮರವನ್ನು ಬಿಟ್ಟರೆ ಮರವೆಲ್ಲ ಒಣಗುತ್ತದೆ' (ಛಾಂದೋಗ್ಯ ಉ. ೬. ೧೧. ೨).

[೨] ಯಾವುದಾದರೂ ಒಂದು ಅಂಗವು ನಾಶವಾದರೂ ಕೃತಕವಾದ ಅಂಗಗಳ ಮೂಲಕ ಆ ಕಾರ್ಯವನ್ನು ನಿರ್ವಹಿಸಬಹುದು.]

**ದೇಹ-ತದ್ಧರ್ಮ-ತತ್ಕರ್ಮ-ತದವಸ್ಥಾದಿ-ಸಾಕ್ಷಿಣಃ ।**
**ಸ್ವತ ಏವ ಸ್ವತಃಸಿದ್ಧಂ ತದ್ವೈಲಕ್ಷಣ್ಯಮಾತ್ಮನಃ ॥ ೧೫೭ ॥**

**ದೇಹ-ತದ್ಧರ್ಮ-ತತ್ಕರ್ಮ-ತದವಸ್ಥಾದಿ-ಸಾಕ್ಷಿಣಃ**= ದೇಹ, ಅದರ ಧರ್ಮಗಳು, ಅದರ ಕರ್ಮಗಳು, ಅದರ ಅವಸ್ಥೆಗಳು ಇವೇ ಮೊದಲಾದುವುಗಳಿಗೆ ಸಾಕ್ಷಿಯಾಗಿರುವ **ಆತ್ಮನಃ** = ಆತ್ಮನಿಗೆ **ಸ್ವತಃ ಏವ** = ಸ್ವಭಾವದಿಂದಲೇ **ತದ್ವೈಲಕ್ಷಣ್ಯಂ**= ಅದಕ್ಕಿಂತ ವಿಲಕ್ಷಣತ್ವವು **ಸ್ವತಃಸಿದ್ಧಂ** = ಸ್ವತಃಸಿದ್ಧವಾಗಿದೆ.

**೧೫೭.** ದೇಹ, ಅದರ ಧರ್ಮಗಳು,[೧] ಅದರ ಕರ್ಮಗಳು,[೨] ಅದರ ಅವಸ್ಥೆಗಳು[೩]—ಇವೇ ಮೊದಲಾದವುಗಳಿಗೆ ಸಾಕ್ಷಿಯಾಗಿರುವ ಆತ್ಮನು ಅವುಗಳಿಗಿಂತ ಸ್ವಭಾವದಿಂದಲೇ ವಿಲಕ್ಷಣನೆಂಬುದು ಸ್ವತಃಸಿದ್ಧವಾಗಿದೆ.

[[೧] ಸ್ಥೂಲತ್ವ ಕೃಶತ್ವ ಮೊದಲಾದುವು.

[೨] ಗಮನಾಗಮನಗಳು.

[೩] ಬಾಲ್ಯ ಯೌವನ ಮೊದಲಾದುವು.]

**ಶಲ್ಯರಾಶಿರ್ಮಾಂಸಲಿಪ್ತೋ ಮಲಪೂರ್ಣೋಽತಿಕಶ್ಮಲಃ ।**
**ಕಥಂ ಭವೇದಯಂ ವೇತ್ತಾ ಸ್ವಯಮೇತದ್ವಿಲಕ್ಷಣಃ ॥ ೧೫೮ ॥**

**ಶಲ್ಯರಾಶಿಃ** = ಮೂಳೆಗಳ ರಾಶಿಯಾದ **ಮಾಂಸಲಿಪ್ತಃ** = ಮಾಂಸದಿಂದ ಮುಚ್ಚಲ್ಪಟ್ಟಿರುವ **ಮಲಪೂರ್ಣಃ** = ಮಲದಿಂದ ತುಂಬಿರುವ **ಅತಿಕಶ್ಮಲಃ** = ಅತ್ಯಂತ ಕಶ್ಮಲವಾದ **ಅಯಂ** = ಈ ಶರೀರವು **ಏತತ್‌ವಿಲಕ್ಷಣಃ** = ಇದಕ್ಕಿಂತ ವಿಲಕ್ಷಣವಾದ **ವೇತ್ತಾ** = ಅರಿಯುವವನಾದ **ಸ್ವಯಂ** = ಆತ್ಮನು **ಕಥಂ ಭವೇತ್** = ಹೇಗಾದೀತು?

**೧೫೮.** ಮೂಳೆಗಳ ರಾಶಿಯಾದ ಮಾಂಸದಿಂದ ಮುಚ್ಚಲ್ಪಟ್ಟಿರುವ ಮಲಪೂರ್ಣವಾಗಿ ಅತ್ಯಂತ ಕಶ್ಮಲವಾದ ಈ ಶರೀರವು ತನಗಿಂತ ವಿಲಕ್ಷಣವಾದ, ಅರಿಯುವವನಾದ ಆತ್ಮನು ಹೇಗಾದೀತು?

**ತ್ವಙ್ಮಾಂಸ-ಮೇದೋಽಸ್ಥಿ-ಪುರೀಷ-ರಾಶಾ-**
**ವಹಂಮತಿಂ ಮೂಢಜನಃ ಕರೋತಿ ।**
**ವಿಲಕ್ಷಣಂ ವೇತ್ತಿ ವಿಚಾರಶೀಲೋ**
**ನಿಜಸ್ವರೂಪಂ ಪರಮಾರ್ಥಭೂತಮ್ ॥ ೧೫೯ ॥**

**ಮೂಢಜನಃ** = ಮೂಢಜನವು **ತ್ವಕ್-ಮಾಂಸ-ಮೇದಃ-ಅಸ್ಥಿ-ಪುರೀಷ-ರಾಶೌ** = ಚರ್ಮ ಮಾಂಸ ಮೇದಸ್ಸು ಮೂಳೆ ಮಲ-ಇವುಗಳ ರಾಶಿಯಲ್ಲಿ **ಅಹಂಮತಿಂ** = 'ನಾನು' ಎಂಬ ಬುದ್ಧಿಯನ್ನು **ಕರೋತಿ** = ಮಾಡುತ್ತದೆ; **ವಿಚಾರಶೀಲಃ** = ವಿವೇಕಿಯು **ನಿಜಸ್ವರೂಪಂ** = ತನ್ನ ಸ್ವರೂಪವನ್ನು **ವಿಲಕ್ಷಣಂ** = ವಿಲಕ್ಷಣವೆಂದೂ **ಪರಮಾರ್ಥಭೂತಂ** = ಸತ್ಯವೆಂದೂ **ವೇತ್ತಿ** = ಅರಿತುಕೊಳ್ಳುತ್ತಾನೆ.

**೧೫೯.** ಚರ್ಮ ಮಾಂಸ ಮೇದಸ್ಸು ಮೂಳೆ ಮಲ—ಇವುಗಳ ರಾಶಿಯಾಗಿರುವ ಈ ಶರೀರದಲ್ಲಿ ಮೂಢಜನವು 'ನಾನು' ಎಂಬ ಬುದ್ಧಿಯನ್ನು[1] ಮಾಡುತ್ತದೆ. ವಿವೇಕಿಯಾದವನು (ಶರೀರಾದಿಗಳಿಗಿಂತ) ಭಿನ್ನವಾದ ಮತ್ತು ಪರಮಾರ್ಥವಾದ ತನ್ನ ಸ್ವರೂಪವನ್ನು ಅರಿತುಕೊಳ್ಳುತ್ತಾನೆ.

[[1] ನಾನು ಸ್ಥೂಲನು, ನಾನು ಕೃಶನು ಇತ್ಯಾದಿ ಬುದ್ಧಿಯನ್ನು.]

**ದೇಹೋಽಹಮಿತ್ಯೇವ ಜಡಸ್ಯ ಬುದ್ಧಿ-**
**ರ್ದೇಹೇ ಚ ಜೀವೇ ವಿದುಷಸ್ತ್ವಹಂಧೀಃ ।**
**ವಿವೇಕ-ವಿಜ್ಞಾನವತೋ ಮಹಾತ್ಮನೋ**
**ಬ್ರಹ್ಮಾಹಮಿತ್ಯೇವ ಮತಿಃ ಸದಾತ್ಮನಿ ॥ ೧೬೦ ॥**

**ಜಡಸ್ಯ** = ಜಡನಿಗೆ **ದೇಹಃ** = ಶರೀರವು **ಅಹಂ** = ನಾನು **ಇತಿ ಏವ** = ಎಂದೇ **ಬುದ್ಧಿಃ** = ಬುದ್ಧಿಯುಂಟಾಗುತ್ತದೆ; **ವಿದುಷಃ ತು** = ಲೌಕಿಕ ಪಂಡಿತನಿಗೆ **ದೇಹೇ-ಜೀವೇ ಚ** = ಶರೀರದಲ್ಲಿ ಮತ್ತು ಜೀವನಲ್ಲಿ **ಅಹಂಧೀಃ** = 'ನಾನು' ಎಂಬ ಬುದ್ಧಿಯು ಉಂಟಾಗುತ್ತದೆ; **ವಿವೇಕವಿಜ್ಞಾನವತಃ** = ಆತ್ಮಾನಾತ್ಮ-ವಿವೇಚನವನ್ನು ಮಾಡಿರುವ **ಮಹಾತ್ಮನಃ** = ಮಹಾತ್ಮನಿಗೆ **ಸತ್-ಆತ್ಮನಿ** = ಅವಿನಾಶಿಯಾದ ಆತ್ಮಸ್ವರೂಪದಲ್ಲಿ **ಅಹಂ ಬ್ರಹ್ಮ** = ನಾನು ಬ್ರಹ್ಮವು **ಇತಿ ಏವ** = ಎಂಬ **ಮತಿಃ** = ಬುದ್ಧಿಯು ಉಂಟಾಗುತ್ತದೆ.

**೧೬೦.** ಜಡನಾದ ಮನುಷ್ಯನು ತಾನೇ ಶರೀರವೆಂದು ಭಾವಿಸಿಕೊಳ್ಳುತ್ತಾನೆ. ಲೌಕಿಕ ಪಂಡಿತನಾದವನು ಸ್ಥೂಲಶರೀರದಲ್ಲಿಯೂ ಮತ್ತು ಜೀವನಲ್ಲಿಯೂ[೧] 'ನಾನು' ಎಂಬ ಬುದ್ಧಿಯನ್ನು ಮಾಡುತ್ತಾನೆ. ಆತ್ಮಾನಾತ್ಮ ವಿವೇಚನದಲ್ಲಿ ನಿಪುಣನಾದ ಮಹಾತ್ಮನಿಗೆ ಅವಿನಾಶಿಯಾದ ಆತ್ಮಸ್ವರೂಪದಲ್ಲಿಯೇ 'ನಾನು ಬ್ರಹ್ಮ' ಎಂಬ ಬುದ್ಧಿಯುಂಟಾಗುತ್ತದೆ.

[ಇಲ್ಲಿ ಮೂಢ, ಕೇವಲ ಶಾಸ್ತ್ರಗಳನ್ನು ಅಧ್ಯಯನ ಮಾಡಿರುವ ಪಂಡಿತ ಮತ್ತು ನಿಜವಾದ ಆತ್ಮಜ್ಞಾನಿ—ಇವರು ಶರೀರಾದಿಗಳಲ್ಲಿ ಅಹಂಬುದ್ಧಿಯನ್ನು ಹೇಗೆ ಮಾಡುತ್ತಾರೆ ಎಂಬುದನ್ನು ಹೇಳಿದೆ.

[೧] ಪ್ರಾಣವೇ ಮೊದಲಾದುವನ್ನು ಉಪಾಧಿಯಾಗಿ ಹೊಂದಿರುವ ಚೈತನ್ಯದಲ್ಲಿ.]

**ಅತ್ರಾತ್ಮಬುದ್ಧಿಂ ತ್ಯಜ ಮೂಢಬುದ್ಧೇ**
**ತ್ವಙ್ಮಾಂಸ-ಮೇದೋಽಸ್ಥಿ-ಪುರೀಷರಾಶೌ ।**
**ಸರ್ವಾತ್ಮನಿ ಬ್ರಹ್ಮಣಿ ನಿರ್ವಿಕಲ್ಪೇ**
**ಕುರುಷ್ವ ಶಾಂತಿಂ ಪರಮಾಂ ಭಜಸ್ವ ॥ ೧೬೧ ॥**

**ಮೂಢಬುದ್ಧೇ** = ಹೇ ಮೂಢಬುದ್ಧಿ, **ತ್ವಕ್-ಮಾಂಸ-ಮೇದಃ-ಅಸ್ಥಿ-ಪುರೀಷ-ರಾಶೌ** = ತ್ವಕ್ಕು ಮಾಂಸ ಮೇದಸ್ಸು ಮೂಳೆ ಮಲ ಇವುಗಳ ರಾಶಿಯಾದ **ಅತ್ರ** = ಈ ಶರೀರದಲ್ಲಿ **ಆತ್ಮಬುದ್ಧಿಂ** = 'ನಾನು' ಎಂಬ ಬುದ್ಧಿಯನ್ನು **ತ್ಯಜ** = ತೊರೆ; **ಸರ್ವಾತ್ಮನಿ** = ಸರ್ವಾತ್ಮವಾದ **ನಿರ್ವಿಕಲ್ಪೇ** = ನಿರ್ವಿಕಲ್ಪವಾದ **ಬ್ರಹ್ಮಣಿ** = ಬ್ರಹ್ಮದಲ್ಲಿ [ಆತ್ಮಬುದ್ಧಿಯನ್ನು] **ಕುರುಷ್ವ** = ಮಾಡು **ಪರಮಾಂ ಶಾಂತಿಂ** = ಪರಮ ಶಾಂತಿಯನ್ನು **ಭಜಸ್ವ** = ಪಡೆ.

**೧೬೧.** ಹೇ ಮೂಢಬುದ್ಧಿ! ತ್ವಕ್ಕು ಮಾಂಸ ಮೇದಸ್ಸು ಮೂಳೆ ಮಲ—ಇವುಗಳ ರಾಶಿಯಾದ ಈ ಶರೀರದಲ್ಲಿ 'ನಾನು' ಎಂಬ ಬುದ್ಧಿಯನ್ನು ಬಿಡು. ಸರ್ವಾತ್ಮವೂ ನಿರ್ವಿಕಲ್ಪವೂ ಆದ ಬ್ರಹ್ಮದಲ್ಲಿ 'ನಾನು' ಎಂಬ ಬುದ್ಧಿಯನ್ನು ಮಾಡು. ಪರಮಶಾಂತಿಯನ್ನು ಪಡೆ.

**ದೇಹೇಂದ್ರಿಯಾದಾವಸತಿ ಭ್ರಮೋದಿತಾಂ**
**ವಿದ್ವಾನಹಂತಾಂ ನ ಜಹಾತಿ ಯಾವತ್ ।**
**ತಾವನ್ನ ತಸ್ಯಾಸ್ತಿ ವಿಮುಕ್ತಿವಾರ್ತಾ-**
**ಪ್ಯಸ್ತ್ವೇಷ ವೇದಾಂತ-ನಯಾಂತ-ದರ್ಶೀ ॥ ೧೬೨ ॥**

**ವಿದ್ವಾನ್** = ವಿವೇಚನಕುಶಲನು **ಅಸತಿ** = ಅಸತ್ಯವಾದ **ದೇಹೇಂದ್ರಿಯಾದೌ** = ದೇಹೇಂದ್ರಿಯಗಳಲ್ಲಿ **ಭ್ರಮ-ಉದಿತಾಂ** = ಭ್ರಾಂತಿಯಿಂದುಂಟಾದ **ಅಹಂತಾಂ** =

'ನಾನು' ಎಂಬ ಬುದ್ಧಿಯುನ್ನು **ಯಾವತ್** - ಎಲ್ಲಿಯು ವರೆಗೆ **ನ ಜಹಾತಿ** = ಬಿಡುವುದಿಲ್ಲವೊ **ತಾವತ್** = ಅಲ್ಲಿಯ ವರೆಗೆ **ಏಷಃ** = ಇವನು **ವೇದಾಂತ-ನಯ-ಅಂತ-ದರ್ಶೀ ಅಸ್ತು** = ವೇದಾಂತಶಾಸ್ತ್ರದ ದಡವನ್ನು ಬಲ್ಲವನೇ ಆಗಿರಲಿ, **ತಸ್ಯ** = ಅವನಿಗೆ **ವಿಮುಕ್ತಿವಾರ್ತಾ ಅಪಿ** = ಮುಕ್ತಿಯ ಸುದ್ದಿಯೂ ಕೂಡ **ನ ಅಸ್ತಿ** = ಇರುವುದಿಲ್ಲ.

**೧೬೨.** ವಿವೇಚನದಲ್ಲಿ ಕುಶಲನಾದವನು ದೇಹೇಂದ್ರಿಯವೇ ಮೊದಲಾದುವುಗಳಲ್ಲಿ ಭ್ರಾಂತಿಯಿಂದ ಉಂಟಾಗಿರುವ 'ನಾನು' ಎಂಬ ಬುದ್ಧಿಯನ್ನು ಎಲ್ಲಿಯ ವರೆಗೆ ಬಿಡುವುದಿಲ್ಲವೋ ಅಲ್ಲಿಯ ವರೆಗೆ—ಅವನು ವೇದಾಂತಶಾಸ್ತ್ರದ ದಡವನ್ನು ಬಲ್ಲವನಾಗಿದ್ದರೂ[೧]—ಅವನಿಗೆ ಮುಕ್ತಿಯ ಸುದ್ದಿಯೂ ಕೂಡ ಇರುವುದಿಲ್ಲ.

[ದೇಹಾದಿಗಳಲ್ಲಿ ಅಭಿಮಾನವನ್ನು ಬಿಡುವ ವರೆಗೆ ಕೇವಲ ಶಾಸ್ತ್ರಜನ್ಯ-ಜ್ಞಾನದಿಂದ ಮುಕ್ತಿಯುಂಟಾಗುವುದಿಲ್ಲ ಎಂಬುದು ಅಭಿಪ್ರಾಯ.

[೧] ವೇದಾಂತದರ್ಶನದ ಅಧ್ಯಯನ–ಅಧ್ಯಾಪನಗಳಲ್ಲಿ ನಿಪುಣನಾಗಿದ್ದರೂ.]

**ಛಾಯಾಶರೀರೇ ಪ್ರತಿಬಿಂಬಗಾತ್ರೇ**
**ಯತ್ಸ್ವಪ್ನದೇಹೇ ಹೃದಿ ಕಲ್ಪಿತಾಂಗೇ ।**
**ಯಥಾಽಽತ್ಮಬುದ್ಧಿಸ್ತವ ನಾಸ್ತಿ ಕಾಚಿ-**
**ಜ್ಜೀವಚ್ಛರೀರೇ ಚ ತಥೈವ ಮಾಽಸ್ತು ॥ ೧೬೩ ॥**

**ಛಾಯಾಶರೀರೇ** = ನೆರಳಿನ ಶರೀರದಲ್ಲಿ **ಪ್ರತಿಬಿಂಬಗಾತ್ರೇ** = ಪ್ರತಿಬಿಂಬಿತ ಶರೀರದಲ್ಲಿ **ಯತ್-ಸ್ವಪ್ನದೇಹೇ** = ಯಾವ ಕನಸಿನ ಶರೀರದಲ್ಲಿ **ಹೃದಿ ಕಲ್ಪಿತಾಂಗೇ** = ಮನಸ್ಸಿನಲ್ಲಿ ಕಲ್ಪಿತವಾದ ಶರೀರದಲ್ಲಿ **ತವ** = ನಿನಗೆ **ಆತ್ಮಬುದ್ಧಿಃ** = 'ನಾನು' ಎಂಬ ಬುದ್ಧಿಯು **ಯಥಾ**—ಹೇಗೆ **ಕಾಚಿತ್ ನ ಅಸ್ತಿ** = ಸ್ವಲ್ಪವೂ ಇರುವುದಿಲ್ಲವೋ **ತಥಾ ಏವ** = ಹಾಗೆಯೇ **ಜೀವತ್-ಶರೀರೇ ಚ** = ಜೀವಿಸಿರುವ ಈ ಶರೀರದಲ್ಲಿಯೂ [ಆತ್ಮಬುದ್ಧಿಯು] **ಮಾ ಅಸ್ತು** = ಉಂಟಾಗದಿರಲಿ.

**೧೬೩.** ಶರೀರದ ನೆರಳಿನಲ್ಲಿ, (ಕನ್ನಡಿಯೇ ಮೊದಲಾದುವುಗಳಲ್ಲಿ) ಪ್ರತಿಬಿಂಬಿತವಾದ ಶರೀರದಲ್ಲಿ, ಕನಸಿನಲ್ಲಿ ಕಾಣುವ ಶರೀರದಲ್ಲಿ ಮತ್ತು ಮನಸ್ಸಿನಲ್ಲಿ ಕಲ್ಪಿತವಾದ ಶರೀರದಲ್ಲಿ 'ನಾನು' ಎಂಬ ಬುದ್ಧಿಯು ಹೇಗೆ ಸ್ವಲ್ಪವೂ ಇರುವುದಿಲ್ಲವೊ ಹಾಗೆಯೇ ಜೀವಿಸಿರುವ ಈ ಶರೀರದಲ್ಲಿಯೂ ('ನಾನು' ಎಂಬ ಬುದ್ಧಿಯು) ಉಂಟಾಗದಿರಲಿ.

[ಶರೀರಾದಿಗಳಲ್ಲಿ ಅಭಿಮಾನವನ್ನು ಬಿಡಲು ಸುಲಭೋಪಾಯವನ್ನು ಇಲ್ಲಿ ಹೇಳಿದೆ.]

ದೇಹಾತ್ಮಧೀರೇವ ನೃಣಾಮಸದ್ಧಿಯಾಂ
ಜನ್ಮಾದಿ-ದುಃಖ-ಪ್ರಭವಸ್ಯ ಬೀಜಮ್ ।
ಯತಸ್ತತಸ್ತ್ವಂ ಜಹಿ ತಾಂ ಪ್ರಯತ್ನಾತ್
ತ್ಯಕ್ತೇ ತು ಚಿತ್ತೇ ನ ಪುನರ್ಭವಾಶಾ ॥ ೧೬೪ ॥

**ಅಸತ್-ಧಿಯಾಂ** = ಅವಿವೇಕಬುದ್ಧಿಯುಳ್ಳ **ನೃಣಾಂ** = ಜನರಿಗೆ **ದೇಹ-ಆತ್ಮ-ಧೀಃ ಏವ** = ದೇಹದಲ್ಲಿ ಆತ್ಮಬುದ್ಧಿಯೇ **ಜನ್ಮಾದಿ-ದುಃಖ-ಪ್ರಭವಸ್ಯ** = ಜನ್ಮವೇ ಮೊದಲಾದ ದುಃಖದ ಉತ್ಪತ್ತಿಗೆ **ಯತಃ** = ಯಾವ ಕಾರಣದಿಂದ **ಬೀಜಂ** = ಕಾರಣವೊ **ತತಃ** = ಆ ಕಾರಣದಿಂದಲೇ **ತ್ವಂ** = ನೀನು **ತಾಂ** = ಅಂಥ ಬುದ್ಧಿಯನ್ನು **ಪ್ರಯತ್ನಾತ್** = ಪ್ರಯತ್ನದಿಂದ **ಜಹಿ** = ಬಿಡು; **ಚಿತ್ತೇ ತು ತ್ಯಕ್ತೇ** = ಅಂಥ ಬುದ್ಧಿಯನ್ನು ಬಿಟ್ಟರೆ **ನ ಪುನರ್ಭವ-ಆಶಾ** = ಪುನರ್ಜನ್ಮದ ಆಶೆಯಿಲ್ಲ.

**೧೬೪.** ಅವಿವೇಕಬುದ್ಧಿಯುಳ್ಳ ಜನರಿಗೆ ದೇಹಾದಿಗಳಲ್ಲಿರುವ 'ನಾನು' ಎಂಬ ಬುದ್ಧಿಯೇ ಜನ್ಮವೇ ಮೊದಲಾದ ದುಃಖಗಳಿಗೆ ಕಾರಣವಾಗಿರುತ್ತದೆ. ಆದುದರಿಂದ ನೀನು ಪ್ರಯತ್ನಪೂರ್ವಕವಾಗಿ ಅಂಥ ದೇಹಾತ್ಮಬುದ್ಧಿಯನ್ನು ತೊರೆ. ದೇಹಾತ್ಮಬುದ್ಧಿಯು ಹೋದರೆ ಪುನರ್ಜನ್ಮದ ಸಂಭವವೇ ಇಲ್ಲ.

[ಛಾಂದೋಗ್ಯೋಪನಿಷತ್ತಿನಲ್ಲಿ (೮. ೧೨. ೧) ಶರೀರವುಳ್ಳವನು ಪ್ರಿಯಾಪ್ರಿಯಗಳಿಂದ ಗ್ರಸ್ತನಾಗಿರುವನೆಂದು ಹೇಳಿದೆ.]

ಕರ್ಮೇಂದ್ರಿಯೈಃ ಪಂಚಭಿರಂಚಿತೋಽಯಂ
ಪ್ರಾಣೋ ಭವೇತ್ ಪ್ರಾಣಮಯಸ್ತು ಕೋಶಃ ।
ಯೇನಾತ್ಮವಾನನ್ನಮಯೋಽನುಪೂರ್ಣಃ
ಪ್ರವರ್ತತೇಽಸೌ ಸಕಲಕ್ರಿಯಾಸು ॥ ೧೬೫ ॥

**ಪಂಚಭಿಃ ಕರ್ಮೇಂದ್ರಿಯೈಃ** = ಪಂಚಕರ್ಮೇಂದ್ರಿಯಗಳಿಂದ **ಅಂಚಿತಃ** = ಕೂಡಿರುವ **ಅಯಂ ಪ್ರಾಣಃ ತು** = ಈ ಪ್ರಾಣವಾದರೊ **ಪ್ರಾಣಮಯಃ ಕೋಶಃ** = ಪ್ರಾಣಮಯಕೋಶವು **ಭವೇತ್** = ಆಗುತ್ತದೆ; **ಅನ್ನಮಯಃ** = ಅನ್ನಮಯಕೋಶವು **ಯೇನ** = ಯಾವ ಈ ಪ್ರಾಣಮಯಕೋಶದಿಂದ **ಅನುಪೂರ್ಣಃ** = ತುಂಬಲ್ಪಟ್ಟು **ಆತ್ಮವಾನ್** = ಆತ್ಮವಂತವಾಗಿ **ಅಸೌ** = ಈ ಕೋಶವು **ಸಕಲಕ್ರಿಯಾಸು** = ಎಲ್ಲಾ ಕ್ರಿಯೆಗಳಲ್ಲಿಯೂ **ಪ್ರವರ್ತತೇ** = ಪ್ರವರ್ತಿಸುತ್ತದೆಯೊ.

**೧೬೫.** ಪಂಚಕರ್ಮೇಂದ್ರಿಯಗಳೊಂದಿಗೆ ಕೂಡಿರುವ ಈ ಪ್ರಾಣವು ಪ್ರಾಣಮಯಕೋಶವಾಗುತ್ತದೆ. ಅನ್ನಮಯಕೋಶವು ಈ ಪ್ರಾಣಮಯ

ದಿಂದ ತುಂಬಲ್ಪಟ್ಟು[೧] ಆತ್ಮವಂತವಾಗಿ ಎಲ್ಲಾ ಕ್ರಿಯೆಗಳಲ್ಲಿಯೂ ಪ್ರವರ್ತಿಸುತ್ತದೆ.

[ಇಲ್ಲಿ ಮತ್ತು ಮುಂದಿನ ಶ್ಲೋಕದಲ್ಲಿ ಪ್ರಾಣಮಯಕೋಶವನ್ನು ವರ್ಣಿಸಿದೆ. ೧ 'ಅಂಥ ಈ ಅನ್ನರಸಮಯನಾದ ಆತ್ಮನಿಗಿಂತ ಬೇರೆಯವನೂ ಒಳಗಿರುವವನೂ ಪ್ರಾಣಮಯನೂ ಆದ ಆತ್ಮನಿರುವನು. ಅವನಿಂದ ಈ ಅನ್ನರಸಮಯನ್ನಾದ ಆತ್ಮನು ತುಂಬಿರುವನು' ತಸ್ಮಾದ್ವಾ ಏತಸ್ಮಾದನ್ನರಸಮಯಾತ್ ಅನ್ಯೋಽಂತರ ಆತ್ಮಾ ಪ್ರಾಣಮಯಃ, ತೇನೈಷ ಪೂರ್ಣಃ (ತೈತ್ತಿರೀಯ ಉ. ೨. ೨).]

**ನೈವಾತ್ಮಾಪಿ ಪ್ರಾಣಮಯೋ ವಾಯುವಿಕಾರೋ**
**ಗಂತಾಽಽಗಂತಾ ವಾಯುವದಂತರ್ಬಹಿರೇಷಃ ।**
**ಯಸ್ಮಾತ್ ಕಿಂಚಿತ್ ಕ್ವಾಪಿ ನ ವೇತ್ತೀಷ್ಟಮನಿಷ್ಟಂ**
**ಸ್ವಂ ವಾಽನ್ಯಂ ವಾ ಕಿಂಚನ ನಿತ್ಯಂ ಪರತಂತ್ರಃ**
**॥ ೧೬೬ ॥**

**ಪ್ರಾಣಮಯಃ ಅಪಿ** = ಪ್ರಾಣಮಯವೂ **ಆತ್ಮಾ ನ ಏವ** = ಆತ್ಮವಲ್ಲ, **ಯಸ್ಮಾತ್** = ಏಕೆಂದರೆ **ವಾಯುವಿಕಾರಃ** = ವಾಯುವಿನ ರೂಪಾಂತರವು; **ಏಷಃ** = ಇದು **ವಾಯುವತ್** = ವಾಯುವಿನಂತೆ **ಅಂತಃ** = ಒಳಕ್ಕೆ **ಗಂತಾ** = ಹೋಗುತ್ತದೆ, **ಬಹಿಃ** = ಹೊರಕ್ಕೆ **ಆಗಂತಾ** = ಬರುತ್ತದೆ, **ನಿತ್ಯಂ** = ಯಾವಾಗಲೂ **ಪರತಂತ್ರಃ** = ಪರಾಧೀನವಾಗಿ **ಕ್ವ ಅಪಿ** = ಎಲ್ಲಿಯೂ **ಇಷ್ಟಂ** = ಇಷ್ಟವನ್ನಾಗಲಿ **ಅನಿಷ್ಟಂ** = ಅನಿಷ್ಟವನ್ನಾಗಲಿ, **ಕಿಂಚಿತ್ ನ ವೇತ್ತಿ** = ಸ್ವಲ್ಪವೂ ಅರಿಯುವುದಿಲ್ಲ, **ಸ್ವಂ ವಾ** = ತನ್ನನ್ನಾಗಲಿ **ಅನ್ಯಂ ವಾ** = ಮತ್ತೊಂದನ್ನಾಗಲಿ **ಕಿಂಚನ [ನ ವೇತ್ತಿ]** = ಸ್ವಲ್ಪವೂ [ಅರಿಯುವುದಿಲ್ಲ].

**೧೬೬.** ಈ ಪ್ರಾಣಮಯಕೋಶವು ವಾಯುವಿನ ರೂಪಾಂತರವಾಗಿರುವುದರಿಂದ ಆತ್ಮವಲ್ಲ; ಏಕೆಂದರೆ ವಾಯುವಿನಂತೆ ಒಳಕ್ಕೆ ಹೋಗುತ್ತಲೂ ಹೊರಕ್ಕೆ ಬರುತ್ತಲೂ ಇರುತ್ತದೆ. ಇದು ಎಲ್ಲಿಯೂ ಇಷ್ಟವನ್ನಾಗಲಿ ಅನಿಷ್ಟವನ್ನಾಗಲಿ ಸ್ವಲ್ಪವೂ ಅರಿತುಕೊಳ್ಳಲಾರದು. ತನ್ನನ್ನಾಗಲಿ ಮತ್ತೊಂದನ್ನಾಗಲಿ ಸ್ವಲ್ಪವೂ ಅರಿಯಲಾರದು. ಯಾವಾಗಲೂ ಪರಾಧೀನವಾಗಿರುತ್ತದೆ.

**ಜ್ಞಾನೇಂದ್ರಿಯಾಣಿ ಚ ಮನಶ್ಚ ಮನೋಮಯಃ ಸ್ಯಾತ್**
**ಕೋಶೋ ಮಮಾಹಮಿತಿ ವಸ್ತು-ವಿಕಲ್ಪ-ಹೇತುಃ ।**
**ಸಂಜ್ಞಾದಿಭೇದ-ಕಲನಾ-ಕಲಿತೋ ಬಲೀಯಾಂ-**
**ಸ್ತತ್ಪೂರ್ವಕೋಶಮಭಿಪೂರ್ಯ ವಿಜೃಂಭತೇ ಯಃ ॥ ೧೬೭ ॥**

**ಜ್ಞಾನೇಂದ್ರಿಯಾಣಿ ಚ**=ಜ್ಞಾನೇಂದ್ರಿಯಗಳು **ಮನಃ ಚ**=ಮತ್ತು ಮನಸ್ಸು [ಸೇರಿ] **ಮನೋಮಯಃ ಕೋಶಃ ಸ್ಯಾತ್**=ಮನೋಮಯಕೋಶವಾಗುತ್ತದೆ; [ಇದು] **ಮಮ**=ನನ್ನದು, **ಅಹಂ**=ನಾನು **ಇತಿ**=ಎಂಬ **ವಸ್ತು-ವಿಕಲ್ಪ-ಹೇತುಃ**= ವಸ್ತುಗಳ ಭೇದಕ್ಕೆ ಕಾರಣವಾಗಿರುತ್ತದೆ; **ಯಃ**=ಯಾವುದು **ಸಂಜ್ಞಾದಿ-ಭೇದ-ಕಲನಾ-ಕಲಿತಃ**=ನಾಮಾದಿ ಭೇದಗಳ ಕಲ್ಪನೆಯಿಂದ ಕೂಡಿರುತ್ತದೆಯೊ, **ಬಲೀಯಾನ್**=ಬಲಿಷ್ಠವಾಗಿರುತ್ತದೆಯೊ, **ತತ್ಪೂರ್ವಕೋಶಂ**=ಹಿಂದಿನ ಕೋಶವನ್ನು **ಅಭಿಪೂರ್ಯ**=ವ್ಯಾಪಿಸಿಕೊಂಡು **ವಿಜೃಂಭತೇ**=ವಿಜೃಂಭಿಸುತ್ತದೆಯೊ.

**೧೬೭.** ಜ್ಞಾನೇಂದ್ರಿಯಗಳೂ ಮನಸ್ಸೂ ಸೇರಿಕೊಂಡು ಮನೋಮಯಕೋಶವಾಗಿದೆ. ಇದು 'ನಾನು, ನನ್ನದು' ಎಂಬ ವಸ್ತುಗಳ ಭೇದಕ್ಕೆ ಕಾರಣವಾಗಿದೆ.[೧] ನಾಮವೇ ಮೊದಲಾದ ಭೇದಗಳ ಕಲ್ಪನೆಯಿಂದ ಕೂಡಿರುತ್ತದೆ, ಬಲಿಷ್ಠವಾಗಿರುತ್ತದೆ. ಹಿಂದಿನ ಪ್ರಾಣಮಯಕೋಶವನ್ನು ವ್ಯಾಪಿಸಿಕೊಂಡು ಹರಡುತ್ತದೆ.

[ಇಲ್ಲಿಂದ ಮನೋಮಯಕೋಶವನ್ನು ವಿವರಿಸಿದೆ.
[೧] ದೇಹೇಂದ್ರಿಯ-ಗೃಹಕ್ಷೇತ್ರಗಳಲ್ಲಿ 'ನಾನು' 'ನನ್ನದು' ಎಂಬ ಬುದ್ಧಿ.]

**ಪಂಚೇಂದ್ರಿಯೈಃ ಪಂಚಭಿರೇವ ಹೋತೃಭಿಃ**
**ಪ್ರಚೀಯಮಾನೋ ವಿಷಯಾಜ್ಯ-ಧಾರಯಾ ।**
**ಜಾಜ್ವಲ್ಯಮಾನೋ ಬಹುವಾಸನೇಂಧನೈ-**
**ರ್ಮನೋಮಯಾಗ್ನಿರ್ದಹತಿ ಪ್ರಪಂಚಮ್ ॥ ೧೬೮ ॥**

**ಪಂಚೇಂದ್ರಿಯೈಃ**=ಪಂಚೇಂದ್ರಿಯಗಳೆಂಬ **ಪಂಚಭಿಃ ಹೋತೃಭಿಃ ಏವ**= ಐವರು ಹೋತೃಗಳಿಂದ **ವಿಷಯ-ಆಜ್ಯ-ಧಾರಯಾ**=ವಿಷಯಗಳೆಂಬ ತುಪ್ಪದ ಧಾರೆಯಿಂದ **ಪ್ರಚೀಯಮಾನಃ**=ವರ್ಧಿಸುತ್ತಿರುವ, **ಬಹು-ವಾಸನಾ-ಇಂಧನೈಃ**= ನಾನಾ ವಾಸನೆಗಳೆಂಬ ಕಟ್ಟಿಗೆಗಳಿಂದ **ಜಾಜ್ವಲ್ಯಮಾನಃ**=ಪ್ರಜ್ವಲಿಸುತ್ತಿರುವ **ಮನೋಮಯಾಗ್ನಿಃ**=ಮನೋಮಯವೆಂಬ ಅಗ್ನಿಯು **ಪ್ರಪಂಚಂ**=ಪ್ರಪಂಚವನ್ನು **ದಹತಿ**=ಸುಡುತ್ತಿರುವುದು.

**೧೬೮.** ಪಂಚೇಂದ್ರಿಯಗಳೆಂಬ ಪಂಚಹೋತೃಗಳು ಸುರಿಯುತ್ತಿರುವ ವಿಷಯಗಳೆಂಬ ತುಪ್ಪದ ಧಾರೆಯಿಂದ ವರ್ಧಿಸುತ್ತಿರುವ, ಬಹುಬಗೆಯ ವಾಸನೆಗಳೆಂಬ ಕಟ್ಟಿಗೆಗಳಿಂದ ಪ್ರಜ್ವಲಿಸುತ್ತಿರುವ ಮನೋಮಯಕೋಶವೆಂಬ ಅಗ್ನಿಯು ಇಡೀ ಪ್ರಪಂಚವನ್ನೇ ಸುಡುತ್ತಿರುವುದು.

[ಮನೋಮಯಕೋಶವು ಜಗತ್ತೆಲ್ಲವನ್ನೂ ಹೇಗೆ ಬಂಧಿಸಿದೆಯೆಂದು ಇಲ್ಲಿ ಹೇಳಿದೆ.]

**ನ ಹ್ಯಸ್ತ್ಯವಿದ್ಯಾ ಮನಸೋಽತಿರಿಕ್ತಾ**
**ಮನೋ ಹ್ಯವಿದ್ಯಾ ಭವಬಂಧಹೇತುಃ ।**
**ತಸ್ಮಿನ್ ವಿನಷ್ಟೇ ಸಕಲಂ ವಿನಷ್ಟಂ**
**ವಿಜೃಂಭಿತೇಽಸ್ಮಿನ್ ಸಕಲಂ ವಿಜೃಂಭತೇ ॥ ೧೬೯ ॥**

**ಮನಸಃ** = ಮನಸ್ಸಿಗಿಂತಲೂ **ಅತಿರಿಕ್ತಾ** = ಬೇರೆಯಾಗಿರುವ **ಅವಿದ್ಯಾ** = ಅವಿದ್ಯೆಯು **ನ ಹಿ ಅಸ್ತಿ** = ಇಲ್ಲವೇ ಇಲ್ಲ; **ಮನಃ ಹಿ** = ಮನಸ್ಸೇ **ಭವಬಂಧಹೇತುಃ** = ಸಂಸಾರಬಂಧಕ್ಕೆ ಕಾರಣವಾದ **ಅವಿದ್ಯಾ** = ಅವಿದ್ಯೆಯು; **ತಸ್ಮಿನ್ ವಿನಷ್ಟೇ** [ಸತಿ] = ಅದು ನಷ್ಟವಾದಾಗ **ಸಕಲಂ ವಿನಷ್ಟಂ** = ಎಲ್ಲವೂ ನಷ್ಟವಾಗುತ್ತದೆ, **ಅಸ್ಮಿನ್ ವಿಜೃಂಭಿತೇ** [ಸತಿ] = ಅದು ವಿಜೃಂಭಿಸುತ್ತಿರುವಾಗ **ಸಕಲಂ** = ಎಲ್ಲವೂ **ವಿಜೃಂಭತೇ** = ವಿಜೃಂಭಿಸುತ್ತದೆ.

**೧೬೯.** ಮನಸ್ಸಿಗಿಂತಲೂ ಬೇರೆಯಾಗಿರುವ ಅವಿದ್ಯೆಯು ಇಲ್ಲವೇ ಇಲ್ಲ; ಮನಸ್ಸೇ ಸಂಸಾರಬಂಧಕ್ಕೆ ಕಾರಣವಾದ ಅವಿದ್ಯೆಯು. ಅದು ನಷ್ಟವಾದಾಗ ಎಲ್ಲವೂ ನಷ್ಟವಾಗುತ್ತದೆ, ಅದು ವಿಜೃಂಭಿಸುತ್ತಿರುವಾಗ ಎಲ್ಲವೂ ವಿಜೃಂಭಿಸುತ್ತದೆ.

[ಸುಷುಪ್ತಿಯಲ್ಲಿ ಮನಸ್ಸು ಲಯವಾದಾಗ ಇಡೀ ಜಗತ್ತು ನಷ್ಟವಾದಂತೆಯೇ. ಆದುದರಿಂದ ಮನಸ್ಸೇ ಭವಬಂಧಕ್ಕೆ ಕಾರಣವೆಂಬುದು ಸ್ಪಷ್ಟವಾಗಿದೆ.]

**ಸ್ವಪ್ನೇಽರ್ಥಶೂನ್ಯೇ ಸೃಜತಿ ಸ್ವಶಕ್ತ್ಯಾ**
**ಭೋಕ್ತ್ರಾದಿ-ವಿಶ್ವಂ ಮನ ಏವ ಸರ್ವಮ್ ।**
**ತಥೈವ ಜಾಗ್ರತ್ಯಪಿ ನೋ ವಿಶೇಷ-**
**ಸ್ತತ್ಸರ್ವಮೇತನ್ಮನಸೋ ವಿಜೃಂಭಣಮ್ ॥ ೧೭೦ ॥**

**ಮನಃ ಏವ** = ಮನಸ್ಸೇ **ಸ್ವಶಕ್ತ್ಯಾ** = ತನ್ನ ಶಕ್ತಿಯಿಂದ **ಅರ್ಥಶೂನ್ಯೇ** = ಯಾವ ಬಾಹ್ಯವಿಷಯವೂ ಇಲ್ಲದಿರುವ **ಸ್ವಪ್ನೇ** = ಸ್ವಪ್ನಾವಸ್ಥೆಯಲ್ಲಿ **ಸರ್ವಂ** = ಎಲ್ಲ **ಭೋಕ್ತ್ರಾದಿವಿಶ್ವಂ** = ಭೋಕ್ತೃವೇ ಮೊದಲಾದ ಪ್ರಪಂಚವನ್ನು **ಸೃಜತಿ** = ಸೃಷ್ಟಿಸುತ್ತದೆ; **ತಥಾ ಏವ** = ಹಾಗೆಯೇ **ಜಾಗ್ರತಿ ಅಪಿ** = ಜಾಗ್ರದವಸ್ಥೆಯಲ್ಲಿಯೂ **ವಿಶೇಷಃ ನ ಉ** = ವಿಶೇಷವಿಲ್ಲ, **ತತ್** = ಆದುದರಿಂದ **ಏತತ್ ಸರ್ವಂ** = ಇದೆಲ್ಲವೂ **ಮನಸಃ** = ಮನಸ್ಸಿನ **ವಿಜೃಂಭಣಂ** = ವಿಜೃಂಭಣೆಯು.

**೧೭೦.** ಯಾವುದೊಂದು ಬಾಹ್ಯವಸ್ತುವೂ ಇಲ್ಲದಿರುವ ಸ್ವಪ್ನಾವಸ್ಥೆಯಲ್ಲಿ ಮನಸ್ಸೇ ತನ್ನ ಶಕ್ತಿಯಿಂದ ಭೋಕ್ತೃವೇ ಮೊದಲಾದ ಪ್ರಪಂಚ

ವೆಲ್ಲವನ್ನೂ ಸೃಜಿಸುತ್ತದೆ. ಹಾಗೆಯೇ ಜಾಗ್ರದವಸ್ಥೆಯಲ್ಲಿಯೂ ಯಾವ ವಿಶೇಷವೂ ಇರುವುದಿಲ್ಲ. ಆದುದರಿಂದ ಇದೆಲ್ಲವೂ ಮನಸ್ಸಿನ ವಿಜೃಂಭಣೆಯೇ.

[ಹಿಂದೆ ಹೇಳಿದ್ದನ್ನೇ ಇಲ್ಲಿ ವಿಸ್ತರಿಸಿದೆ.]

**ಸುಷುಪ್ತಿಕಾಲೇ ಮನಸಿ ಪ್ರಲೀನೇ**
**ನೈವಾಸ್ತಿ ಕಿಂಚಿತ್ ಸಕಲಪ್ರಸಿದ್ಧೇಃ ।**
**ಅತೋ ಮನಃಕಲ್ಪಿತ ಏವ ಪುಂಸಃ**
**ಸಂಸಾರ ಏತಸ್ಯ ನ ವಸ್ತುತೋಽಸ್ತಿ ॥ ೧೭೧ ॥**

**ಸುಷುಪ್ತಿಕಾಲೇ** = ಸುಷುಪ್ತಿಕಾಲದಲ್ಲಿ **ಮನಸಿ ಪ್ರಲೀನೇ** = ಮನಸ್ಸು ಲಯವಾಗಿರುವಾಗ **ಕಿಂಚಿತ್** = ಯಾವುದೂ **ನ ಏವ ಅಸ್ತಿ** = ಇಲ್ಲವೆಂಬುದು **ಸಕಲಪ್ರಸಿದ್ಧೇಃ** = ಎಲ್ಲರಿಗೂ ಪ್ರಸಿದ್ಧವಾಗಿರುವುದರಿಂದ; **ಅತಃ** = ಆದುದರಿಂದ **ಏತಸ್ಯ ಪುಂಸಃ** = ಈ ಮನುಷ್ಯನಿಗೆ **ಸಂಸಾರಃ** = ಸಂಸಾರವೆಂಬುದು **ಮನಃಕಲ್ಪಿತಃ ಏವ** = ಮನಸ್ಸಿನಿಂದ ಕಲ್ಪಿತವಾದದ್ದೇ, **ವಸ್ತುತಃ** = ಯಥಾರ್ಥವಾಗಿ **ನ ಅಸ್ತಿ** = ಇರುವುದಿಲ್ಲ.

**೧೭೧.** ಸುಷುಪ್ತಿಕಾಲದಲ್ಲಿ ಮನಸ್ಸು ಲಯವಾಗಿರುವಾಗ ಯಾವುದೊಂದು ವಸ್ತುವೂ ಇರುವುದಿಲ್ಲವೆಂಬುದು ಜಗತ್ಪ್ರಸಿದ್ಧವಾದ ವಿಷಯ. ಆದುದರಿಂದ ಮನುಷ್ಯನಿಗೆ ಸಂಸಾರವು ಮನಸ್ಸಿನಿಂದಲೇ ಕಲ್ಪಿತವಾಗಿರುವುದು, ಯಥಾರ್ಥವಾಗಿರುವುದಿಲ್ಲ.

[೧೨೧ನೆಯ ಶ್ಲೋಕವನ್ನು ನೋಡಿ.]

**ವಾಯುನಾಽಽನೀಯತೇ ಮೇಘಃ ಪುನಸ್ತೇನೈವ ನೀಯತೇ ।**
**ಮನಸಾ ಕಲ್ಪ್ಯತೇ ಬಂಧೋ ಮೋಕ್ಷಸ್ತೇನೈವ ಕಲ್ಪ್ಯತೇ ॥ ೧೭೨ ॥**

**ಮೇಘಃ** = ಮೇಘವು **ವಾಯುನಾ** = ಗಾಳಿಯಿಂದ **ಆನೀಯತೇ** = ತರಲ್ಪಡುತ್ತದೆ, **ಪುನಃ** = ಮತ್ತೆ **ತೇನ ಏವ** = ಅದರಿಂದಲೇ **ನೀಯತೇ** = ಒಯ್ಯಲ್ಪಡುತ್ತದೆ; **ಬಂಧಃ** = ಬಂಧವು **ಮನಸಾ** = ಮನಸ್ಸಿನಿಂದ **ಕಲ್ಪ್ಯತೇ** = ಕಲ್ಪಿತವಾಗುತ್ತದೆ, **ಮೋಕ್ಷಃ** = ಮೋಕ್ಷವು **ತೇನ ಏವ** = ಅದರಿಂದಲೇ **ಕಲ್ಪ್ಯತೇ** = ಕಲ್ಪಿತವಾಗುತ್ತದೆ.

**೧೭೨.** ಮೇಘವು ಗಾಳಿಯಿಂದಲೇ ಬರುತ್ತದೆ ಮತ್ತು ಗಾಳಿಯಿಂದಲೇ ಹೋಗುತ್ತದೆ. ಹಾಗೆಯೇ ಸಂಸಾರಬಂಧವೂ ಮೋಕ್ಷವೂ ಮನಸ್ಸಿನಲ್ಲೇ ಕಲ್ಪಿತವಾಗುತ್ತವೆ.

[ವಾಯುದೃಷ್ಟಾಂತದಿಂದ ಹೇಗೆ ಒಂದೇ ವಸ್ತುವು ವಿರುದ್ಧಫಲಕ್ಕೆ ಕಾರಣವಾಗಿದೆ ಯೆಂದು ಹೇಳಿದೆ.]

**ದೇಹಾದಿ-ಸರ್ವವಿಷಯೇ ಪರಿಕಲ್ಪ್ಯ ರಾಗಂ**
**ಬಧ್ನಾತಿ ತೇನ ಪುರುಷಂ ಪಶುವದ್ಗುಣೇನ ।**
**ವೈರಸ್ಯಮತ್ರ ವಿಷವತ್ ಸುವಿಧಾಯ ಪಶ್ಚಾ-**
**ದೇನಂ ವಿಮೋಚಯತಿ ತನ್ಮನ ಏವ ಬಂಧಾತ್**
**॥ ೧೭೩ ॥**

[ಈ ಮನಸ್ಸು] **ದೇಹಾದಿ-ಸರ್ವವಿಷಯೇ** = ದೇಹವೇ ಮೊದಲಾದ ಎಲ್ಲ ವಿಷಯಗಳಲ್ಲಿಯೂ **ರಾಗಂ** = ಆಸಕ್ತಿಯನ್ನು **ಪರಿಕಲ್ಪ್ಯ** = ಉಂಟುಮಾಡಿ, **ಗುಣೇನ** = ಹಗ್ಗದಿಂದ **ಪಶುವತ್** = ಪಶುವನ್ನು ಕಟ್ಟುವಂತೆ **ತೇನ** = ಅದರಿಂದ **ಪುರುಷಂ** = ಮನುಷ್ಯನನ್ನು **ಬಧ್ನಾತಿ** = ಕಟ್ಟುತ್ತದೆ; **ತತ್ ಮನಃ ಏವ** = ಆ ಮನಸ್ಸೇ **ಪಶ್ಚಾತ್** = ಅನಂತರ **ಅತ್ರ** = ಈ ವಿಷಯದಲ್ಲಿ **ವಿಷವತ್** = ವಿಷದಂತೆ **ವೈರಸ್ಯಂ** = ವೈರಾಗ್ಯವನ್ನು **ಸುವಿಧಾಯ** = ಚೆನ್ನಾಗಿ ಮಾಡಿ **ಏನಂ** = ಇವನನ್ನು **ಬಂಧಾತ್** = ಬಂಧದಿಂದ **ವಿಮೋಚಯತಿ** = ಬಿಡಿಸುತ್ತದೆ.

**೧೭೩.** ಈ ಮನಸ್ಸು ದೇಹವೇ ಮೊದಲಾದ ಸಮಸ್ತ ವಿಷಯಗಳಲ್ಲಿಯೂ ಆಸಕ್ತಿಯನ್ನುಂಟುಮಾಡಿ ಅದರಿಂದಲೇ ಮನುಷ್ಯನನ್ನು—ಹಗ್ಗದಿಂದ ಪಶುವನ್ನು ಕಟ್ಟುವಂತೆ—ಕಟ್ಟುತ್ತದೆ. ಆ ಮನಸ್ಸೇ ಅನಂತರ ಈ ವಿಷಯಗಳಲ್ಲಿ, ವಿಷದಲ್ಲಿ ಹೇಗೋ ಹಾಗೆ, ವೈರಾಗ್ಯವನ್ನುಂಟುಮಾಡಿ ಈ ಜೀವನನ್ನು ಬಂಧದಿಂದ ಬಿಡಿಸುತ್ತದೆ.

[ದೃಷ್ಟಾಂತದ ಮೂಲಕ ಹಿಂದೆ ಹೇಳಿದ ವಿಷಯವನ್ನೇ ಸ್ಪಷ್ಟಪಡಿಸಿದೆ.]

**ತಸ್ಮಾನ್ಮನಃ ಕಾರಣಮಸ್ಯ ಜಂತೋ-**
**ರ್ಬಂಧಸ್ಯ ಮೋಕ್ಷಸ್ಯ ಚ ವಾ ವಿಧಾನೇ ।**
**ಬಂಧಸ್ಯ ಹೇತುರ್ಮಲಿನಂ ರಜೋಗುಣೈ-**
**ರ್ಮೋಕ್ಷಸ್ಯ ಶುದ್ಧಂ ವಿರಜಸ್ತಮಸ್ಕಮ್ ॥ ೧೭೪ ॥**

**ತಸ್ಮಾತ್** = ಆದುದರಿಂದ **ಅಸ್ಯ ಜಂತೋಃ** = ಈ ಜೀವನಿಗೆ **ಬಂಧಸ್ಯ ಮೋಕ್ಷಸ್ಯ ಚ ವಾ** = ಬಂಧವನ್ನಾಗಲಿ ಮೋಕ್ಷವನ್ನಾಗಲಿ **ವಿಧಾನೇ** = ಉಂಟುಮಾಡುವ ವಿಷಯದಲ್ಲಿ **ಮನಃ** = ಮನಸ್ಸು **ಕಾರಣಂ** = ಕಾರಣವಾಗಿದೆ; **ರಜೋ-ಗುಣೈಃ** = ರಜೋಗುಣಗಳಿಂದ **ಮಲಿನಂ** = ಮಲಿನವಾದ [ಮನಸ್ಸು] **ಬಂಧಸ್ಯ** =

ಬಂಧಕ್ಕೆ **ಹೇತುಃ** = ಕಾರಣವು, **ವಿರಜಸ್ತಮಸ್ಕಂ** = ರಜಸ್-ತಮಸ್ಸುಗಳಿಲ್ಲದ **ಶುದ್ಧಂ** - ಶುದ್ಧವಾದ [ಮನಸ್ಸು] **ಮೋಕ್ಷಸ್ಯ** = ಮೋಕ್ಷಕ್ಕೆ [ಕಾರಣವಾಗಿರುತ್ತದೆ].

**೧೭೪.** ಆದುದರಿಂದ ಈ ಜೀವನಿಗೆ ಬಂಧವನ್ನಾಗಲಿ ಮೋಕ್ಷವನ್ನಾಗಲಿ ಉಂಟುಮಾಡುವ ವಿಷಯದಲ್ಲಿ ಮನಸ್ಸೇ ಕಾರಣವಾಗಿರುತ್ತದೆ. ರಜೋಗುಣಗಳಿಂದ[೧] ಮಲಿನವಾದ (ಈ ಮನಸ್ಸೇ) ಬಂಧಕ್ಕೆ ಕಾರಣವು. ರಜಸ್ತಮೋಗುಣಗಳಿಂದ ರಹಿತವಾದ ಶುದ್ಧವಾದ (ಮನಸ್ಸು) ಮೋಕ್ಷಕ್ಕೆ ಕಾರಣವು.

['ಮನಸ್ಸೇ ಮನುಷ್ಯರ ಬಂಧಮೋಕ್ಷಗಳಿಗೆ ಕಾರಣವು' **ಮನ ಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ** ಎಂದು ಅಮೃತಬಿಂದು-ಉಪನಿಷತ್ತು ಹೇಳುತ್ತದೆ.

[೧] ರಜೋಗುಣದ ಕಾರ್ಯಗಳಾದ ಕಾಮಲೋಭಾದಿಗಳಿಂದ.]

**ವಿವೇಕ-ವೈರಾಗ್ಯ-ಗುಣಾತಿರೇಕಾ-**
**ಚ್ಛುದ್ಧತ್ವಮಾಸಾದ್ಯ ಮನೋ ವಿಮುಕ್ತ್ಯೈ ।**
**ಭವತ್ಯತೋ ಬುದ್ಧಿಮತೋ ಮುಮುಕ್ಷೋ-**
**ಸ್ತಾಭ್ಯಾಂ ದೃಢಾಭ್ಯಾಂ ಭವಿತವ್ಯಮಗ್ರೇ ॥ ೧೭೫ ॥**

**ವಿವೇಕ-ವೈರಾಗ್ಯ-ಗುಣ-ಅತಿರೇಕಾತ್** = ವಿವೇಕವೈರಾಗ್ಯಗಳೆಂಬ ಗುಣಗಳ ಅತಿಶಯದಿಂದ **ಮನಃ** = ಮನಸ್ಸು **ಶುದ್ಧತ್ವಂ** = ಶುದ್ಧತ್ವವನ್ನು **ಆಸಾದ್ಯ** = ಹೊಂದಿ **ವಿಮುಕ್ತ್ಯೈ** = ಮುಕ್ತಿಗೆ **ಭವತಿ** = ಯೋಗ್ಯವಾಗುತ್ತದೆ; **ಅತಃ** - ಆದುದರಿಂದ **ಬುದ್ಧಿಮತಃ** = ಬುದ್ಧಿವಂತನಾದ **ಮುಮುಕ್ಷೋಃ** = ಮುಮುಕ್ಷುವಿಗೆ **ಅಗ್ರೇ** = ಮೊದಲೇ **ತಾಭ್ಯಾಂ ದೃಢಾಭ್ಯಾಂ ಭವಿತವ್ಯಂ** = ಅವೆರಡೂ ದೃಢವಾಗಬೇಕು.

**೧೭೫.** ವಿವೇಕ-ವೈರಾಗ್ಯಗಳೆಂಬ ಗುಣಗಳ ಅತಿಶಯದಿಂದ ಮನಸ್ಸು ಶುದ್ಧವಾಗಿ ಮುಕ್ತಿಗೋಸ್ಕರ ಯೋಗ್ಯವಾಗುತ್ತದೆ. ಆದುದರಿಂದ ಬುದ್ಧಿವಂತನಾದ ಮುಮುಕ್ಷುವು ಮೊದಲು ಅವೆರಡನ್ನೂ ದೃಢಪಡಿಸಿಕೊಳ್ಳಬೇಕು.

[ಮೋಕ್ಷಕ್ಕೆ ಕಾರಣವಾದ ಮನಶ್ಶುದ್ಧಿಯನ್ನು ಹೇಗೆ ಹೊಂದಬಹುದೆಂದು ಇಲ್ಲಿ ಹೇಳಿದೆ.]

**ಮನೋ ನಾಮ ಮಹಾವ್ಯಾಘ್ರೋ ವಿಷಯಾರಣ್ಯಭೂಮಿಷು ।**
**ಚರತ್ಯತ್ರ ನ ಗಚ್ಛಂತು ಸಾಧವೋ ಯೇ ಮುಮುಕ್ಷವಃ ॥ ೧೭೬ ॥**

**ಮನಃ ನಾಮ** = ಮನಸ್ಸೆಂಬ ಹೆಸರುಳ್ಳ **ಮಹಾವ್ಯಾಘ್ರಃ** = ಒಂದು ದೊಡ್ಡ ಹುಲಿಯು **ವಿಷಯ-ಅರಣ್ಯ-ಭೂಮಿಷು** = ವಿಷಯಗಳೆಂಬ ಅರಣ್ಯ ಭೂಮಿಗಳಲ್ಲಿ **ಚರತಿ** = ಸಂಚರಿಸುತ್ತದೆ; **ಯೇ** = ಯಾರು **ಮುಮುಕ್ಷವಃ** = ಮುಮುಕ್ಷುಗಳೋ [ತೇ] **ಸಾಧವಃ** = ಅಂಥ ಸಾಧುಗಳು **ಅತ್ರ** = ಅಲ್ಲಿಗೆ **ನ ಗಚ್ಛಂತು** = ಹೋಗದಿರಲಿ.

**೧೭೬.** ಮನಸ್ಸೆಂಬ ಪ್ರಸಿದ್ಧವಾದ ಒಂದು ದೊಡ್ಡ ಹುಲಿಯು ವಿಷಯಗಳೆಂಬ ಅರಣ್ಯಪ್ರದೇಶಗಳಲ್ಲಿ ಓಡಾಡುತ್ತಿದೆ. ಮುಮುಕ್ಷುಗಳಾದ ಸತ್ಪುರುಷರು ಅಲ್ಲಿಗೆ ಹೋಗದಿರಲಿ.[೧]

[[೧] ವಿಷಯಗಳಿಂದ ಮನಸ್ಸನ್ನು ಹಿಂತಿರುಗಿಸಲಿ ಎಂದಭಿಪ್ರಾಯ.]

**ಮನಃ ಪ್ರಸೂತೇ ವಿಷಯಾನಶೇಷಾನ್**
**ಸ್ಥೂಲಾತ್ಮನಾ ಸೂಕ್ಷ್ಮತಯಾ ಚ ಭೋಕ್ತುಃ ।**
**ಶರೀರ-ವರ್ಣಾಶ್ರಮ-ಜಾತಿ-ಭೇದಾನ್**
**ಗುಣ-ಕ್ರಿಯಾ-ಹೇತು-ಫಲಾನಿ ನಿತ್ಯಮ್ ॥ ೧೭೭ ॥**

**ಮನಃ** = ಮನಸ್ಸು **ಭೋಕ್ತುಃ** = ಸಂಸಾರಿಗೆ **ಸ್ಥೂಲಾತ್ಮನಾ** = ಸ್ಥೂಲರೂಪದಿಂದಲೂ **ಸೂಕ್ಷ್ಮತಯಾ ಚ** = ಸೂಕ್ಷ್ಮರೂಪದಿಂದಲೂ **ಅಶೇಷಾನ್ ವಿಷಯಾನ್** = ಎಲ್ಲಾ ವಿಷಯಗಳನ್ನೂ **ಪ್ರಸೂತೇ** = ಉಂಟುಮಾಡುತ್ತದೆ; [ಮತ್ತು] **ಗುಣ-ಕ್ರಿಯಾ-ಹೇತು-ಫಲಾನಿ** = ಗುಣಗಳನ್ನು ಕ್ರಿಯೆಗಳನ್ನು ಹೇತುಗಳನ್ನು ಫಲಗಳನ್ನು, **ಶರೀರ-ವರ್ಣ-ಆಶ್ರಮ-ಜಾತಿ-ಭೇದಾನ್** = ಶರೀರ ವರ್ಣ ಆಶ್ರಮ ಜಾತಿ ಇವುಗಳನ್ನೂ **ನಿತ್ಯಂ** = ಯಾವಾಗಲೂ [ಉಂಟುಮಾಡುತ್ತದೆ].

**೧೭೭.** ಮನಸ್ಸೇ ಸಂಸಾರಿಗೆ ಸ್ಥೂಲರೂಪದಿಂದಲೂ ಸೂಕ್ಷ್ಮರೂಪದಿಂದಲೂ ವಿಷಯಗಳೆಲ್ಲವನ್ನೂ ಉಂಟುಮಾಡುತ್ತದೆ; (ಮತ್ತು) ಶರೀರ[೧] ವರ್ಣ ಆಶ್ರಮ ಜಾತಿ ಇವುಗಳನ್ನೂ, ಗುಣ[೨] ಕ್ರಿಯೆ[೩] ಹೇತು[೪] ಫಲ[೫] ಇವುಗಳನ್ನೂ ಯಾವಾಗಲೂ (ಉಂಟುಮಾಡುತ್ತದೆ).

[[೧] ದೇವ-ತಿರ್ಯಜ್-ಮನುಷ್ಯರೇ ಮೊದಲಾದವರ ಶರೀರಗಳು.

[೨] ಶಬ್ದಾದಿಗಳು.

[೩] ಮೇಲಕ್ಕೆ ಎಸೆಯುವಿಕೆ ಮೊದಲಾದುವು.

[೪] ಕಾರ್ಯಕ್ಕೆ ಬೇಕಾದ ಉಪಾದಾನ-ನಿಮಿತ್ತ-ಕಾರಣಗಳು.

[೫] ಗಡಿಗೆ ಮೊದಲಾದ ಕಾರ್ಯಗಳು.]

**ಅಸಂಗ-ಚಿದ್ರೂಪಮಮುಂ ವಿಮೋಹ್ಯ**
**ದೇಹೇಂದ್ರಿಯ-ಪ್ರಾಣ-ಗುಣೈರ್ನಿಬದ್ಧ್ಯ ।**
**ಅಹಂ-ಮಮೇತಿ ಭ್ರಮಯತ್ಯಜಸ್ರಂ**
**ಮನಃ ಸ್ವಕೃತ್ಯೇಷು ಫಲೋಪಭುಕ್ತಿಷು ॥ ೧೭೮ ॥**

**ಮನಃ** = ಮನಸ್ಸು **ಅಸಂಗ-ಚಿದ್ರೂಪಮ್ ಅಮುಂ** = ಸಂಗರಹಿತನೂ ಜ್ಞಾನಸ್ವರೂಪನೂ ಆದ ಇವನನ್ನು **ದೇಹ-ಇಂದ್ರಿಯ-ಪ್ರಾಣ-ಗುಣೈಃ** = ದೇಹ ಇಂದ್ರಿಯ ಪ್ರಾಣ ಎಂಬ ಹಗ್ಗಗಳಿಂದ **ನಿಬಧ್ಯ** = ಕಟ್ಟಿ **ವಿಮೋಹ್ಯ** = ಭ್ರಾಂತಿಗೊಳಿಸಿ **ಸ್ವಕೃತ್ಯೇಷು** = ತನ್ನ ಕೆಲಸಗಳಾದ **ಫಲೋಪಭುಕ್ತಿಷು** = ಫಲೋಪಭೋಗಗಳಲ್ಲಿ **ಅಹಂ-ಮಮ-ಇತಿ** = 'ನಾನು ನನ್ನದು' ಎಂದು **ಅಜಸ್ರಂ** = ಯಾವಾಗಲೂ **ಭ್ರಮಯತಿ** = ಸುತ್ತಿಸುತ್ತದೆ.

**೧೭೮.** ಮನಸ್ಸೇ ಅಸಂಗನೂ ಚಿದ್ರೂಪನೂ ಆದ ಇವನನ್ನು ದೇಹೇಂದ್ರಿಯಪ್ರಾಣಗಳೆಂಬ ಹಗ್ಗಗಳಿಂದ ಕಟ್ಟಿ, ಭ್ರಾಂತಿಗೊಳಿಸಿ, ತಾನೇ ಮಾಡಿಕೊಂಡ ಸುಖವೇ ಮೊದಲಾದ ಅನುಭವಗಳಲ್ಲಿ 'ನಾನು, ನನ್ನದು' ಎಂಬ ಭಾವನೆಗಳಿಂದ ಯಾವಾಗಲೂ ಸುತ್ತಿಸುತ್ತದೆ.

**ಅಧ್ಯಾಸ-ದೋಷಾತ್ ಪುರುಷಸ್ಯ ಸಂಸೃತಿ-**
**ರಧ್ಯಾಸ-ಬಂಧಸ್ತ್ವಮುನೈವ ಕಲ್ಪಿತಃ ।**
**ರಜಸ್ತಮೋ-ದೋಷವತೋಽವಿವೇಕಿನೋ**
**ಜನ್ಮಾದಿ-ದುಃಖಸ್ಯ ನಿದಾನಮೇತತ್ ॥ ೧೭೯ ॥**

**ಪುರುಷಸ್ಯ** = ಮನುಷ್ಯನಿಗೆ **ಅಧ್ಯಾಸ-ದೋಷಾತ್** = ಅಧ್ಯಾಸವೆಂಬ ದೋಷದಿಂದಲೇ **ಸಂಸೃತಿಃ** = ಸಂಸಾರವು, **ತು** = ಆದರೆ **ಅಧ್ಯಾಸಬಂಧಃ** = ಅಧ್ಯಾಸವೆಂಬ ಬಂಧವು **ಅಮುನಾ ಏವ** = ಇದರಿಂದಲೇ **ಕಲ್ಪಿತಃ** = ಕಲ್ಪಿತವಾಗಿದೆ; **ರಜಸ್ತಮೋ-ದೋಷವತಃ** = ರಜಸ್ಸು ತಮಸ್ಸು ಎಂಬ ದೋಷಗಳುಳ್ಳ **ಅವಿವೇಕಿನಃ** = ಅವಿವೇಕಿಯ **ಜನ್ಮಾದಿ-ದುಃಖಸ್ಯ** = ಜನ್ಮವೇ ಮೊದಲಾದ ದುಃಖಕ್ಕೆ **ಏತತ್** = ಇದೇ **ನಿದಾನಂ** = ಕಾರಣವು.

**೧೭೯.** ಮನುಷ್ಯನಿಗೆ ಅಧ್ಯಾಸವೆಂಬ[೧] ದೋಷದಿಂದಲೇ ಸಂಸಾರವು. ಆದರೆ ಅಧ್ಯಾಸವೆಂಬ ಬಂಧವು ಈ ಮನಸ್ಸಿನಿಂದಲೇ ಕಲ್ಪಿತವಾಗಿರುತ್ತದೆ. ರಜಸ್ತಮಸ್ಸುಗಳೆಂಬ[೨] ದೋಷಗಳುಳ್ಳ ಅವಿವೇಕಿಯ ಜನ್ಮಾದಿದುಃಖಕ್ಕೆ ಇದೇ ಕಾರಣವಾಗಿರುತ್ತದೆ.

[೧ ವಸ್ತುವಿನಲ್ಲಿ ಅವಸ್ತುವನ್ನೂ ಅವಸ್ತುವಿನಲ್ಲಿ ವಸ್ತುವನ್ನೂ ಆರೋಪಿಸುವುದು.
೨ ಆವರಣ-ವಿಕ್ಷೇಪಗಳಿಗೆ ಕಾರಣವಾದ ದೋಷಗಳಿಂದ ಕೂಡಿರುವವನಿಗೆ.]

**ಅತಃ ಪ್ರಾಹುರ್ಮನೋಽವಿದ್ಯಾಂ ಪಂಡಿತಾಸ್ತತ್ತ್ವದರ್ಶಿನಃ ।**
**ಯೇನೈವ ಭ್ರಾಮ್ಯತೇ ವಿಶ್ವಂ ವಾಯುನೇವಾಭ್ರಮಂಡಲಮ್**
**॥ ೧೮೦ ॥**

**ಅತಃ**=ಆದುದರಿಂದ **ತತ್ತ್ವದರ್ಶಿನಃ**=ತತ್ತ್ವವನ್ನು ಅರಿತಿರುವ **ಪಂಡಿತಾಃ**=ಜ್ಞಾನಿಗಳು **ಮನಃ**=ಮನಸ್ಸನ್ನೇ **ಅವಿದ್ಯಾಂ**=ಅವಿದ್ಯೆಯನ್ನಾಗಿ **ಪ್ರಾಹುಃ**=ಹೇಳುತ್ತಾರೆ; **ವಾಯುನಾ**=ಗಾಳಿಯಿಂದ **ಅಭ್ರಮಂಡಲಮ್ ಇವ**=ಮೇಘಮಂಡಲವು [ಸುತ್ತಿಸಲ್ಪಡುವಂತೆ] **ಯೇನ ಏವ**=ಯಾವ ಈ ಮನಸ್ಸಿನಿಂದಲೇ **ವಿಶ್ವಂ**=ವಿಶ್ವವು **ಭ್ರಾಮ್ಯತೇ**=ಸುತ್ತಿಸಲ್ಪಡುತ್ತದೆಯೊ.

**೧೮೦.** ಆದುದರಿಂದ ತತ್ತ್ವದರ್ಶಿಗಳಾದ ಜ್ಞಾನಿಗಳು ಮನಸ್ಸನ್ನೇ ಅವಿದ್ಯೆಯೆಂದು ಹೇಳುತ್ತಾರೆ. ಗಾಳಿಯು ಮೇಘಮಂಡಲವನ್ನು ಸುತ್ತಿಸುವಂತೆ ಈ ಮನಸ್ಸು ವಿಶ್ವವೆಲ್ಲವನ್ನೂ ಸುತ್ತಿಸುತ್ತಿರುವುದು.

**ತನ್ಮನಃಶೋಧನಂ ಕಾರ್ಯಂ ಪ್ರಯತ್ನೇನ ಮುಮುಕ್ಷುಣಾ ।**
**ವಿಶುದ್ಧೇ ಸತಿ ಚೈತಸ್ಮಿನ್ ಮುಕ್ತಿಃ ಕರಫಲಾಯತೇ ॥ ೧೮೧ ॥**

**ತತ್**=ಆದುದರಿಂದ **ಮುಮುಕ್ಷುಣಾ**=ಮುಮುಕ್ಷುವಿನಿಂದ **ಮನಃ-ಶೋಧನಂ**=ಮನಸ್ಸಿನ ಪರಿಶುದ್ಧಿಯು **ಪ್ರಯತ್ನೇನ**=ಪ್ರಯತ್ನದಿಂದ **ಕಾರ್ಯಂ**=ಮಾಡತಕ್ಕದ್ದು; **ಏತಸ್ಮಿನ್ ವಿಶುದ್ಧೇ ಸತಿ**=ಇದು ಶುದ್ಧವಾದಾಗ **ಮುಕ್ತಿಃ**=ಮುಕ್ತಿಯು **ಕರಫಲಾಯತೇ**=ಅಂಗೈಯ್ಯಲ್ಲಿರುವ ಹಣ್ಣಿನಂತೆ ಆಗುತ್ತದೆ.

**೧೮೧.** ಆದುದರಿಂದ ಮುಮುಕ್ಷುವು ಪ್ರಯತ್ನದಿಂದ ಮನಃಶುದ್ಧಿಯನ್ನು[೧] ಮಾಡಬೇಕು. ಮನಸ್ಸು ಶುದ್ಧವಾದಾಗ ಮುಕ್ತಿಯು ಅಂಗೈಯಲ್ಲಿರುವ ಹಣ್ಣಿನಂತೆ ಸಿದ್ಧವಾಗುವುದು.

[೧ ಮನಸ್ಸಿನಲ್ಲಿರುವ ರಜಸ್ತಮೋರೂಪವಾದ ದೋಷಗಳನ್ನು ಹೋಗಲಾಡಿಸಿಕೊಳ್ಳಬೇಕು.]

**ಮೋಕ್ಷೈಕಸಕ್ತ್ಯಾ ವಿಷಯೇಷು ರಾಗಂ**
**ನಿರ್ಮೂಲ್ಯ ಸಂನ್ಯಸ್ಯ ಚ ಸರ್ವಕರ್ಮ ।**
**ಸಚ್ಛ್ರದ್ಧಯಾ ಯಃ ಶ್ರವಣಾದಿನಿಷ್ಠೋ**
**ರಜಃಸ್ವಭಾವಂ ಸ ಧುನೋತಿ ಬುದ್ಧೇಃ ॥ ೧೮೨ ॥**

**ಮೋಕ್ಷ-ಏಕ-ಸಕ್ತ್ಯಾ**=ಮೋಕ್ಷದಲ್ಲಿಯೇ ಇರುವ ಆಸಕ್ತಿಯಿಂದ **ವಿಷಯೇಷು**=ವಿಷಯುಗಳಲ್ಲಿ **ರಾಗಂ**=ಅಭಿಲಾಷೆಯನ್ನು **ನಿರ್ಮೂಲ್ಯ**=ನಿರ್ಮೂಲ

ಮಾಡಿ, **ಸರ್ವಕರ್ಮ** = ಸಕಲಕರ್ಮಗಳನ್ನೂ **ಸಂನ್ಯಸ್ಯ** = ತ್ಯಜಿಸಿ **ಯಃ** = ಯಾವನು **ಸತ್-ಶ್ರದ್ಧಯಾ** = ಉತ್ತಮವಾದ ಶ್ರದ್ಧೆಯಿಂದ **ಶ್ರವಣಾದಿನಿಷ್ಠಃ** = ಶ್ರವಣಾದಿಗಳಲ್ಲಿ ನೆಲೆಗೊಳ್ಳುತ್ತಾನೆಯೊ **ಸಃ** = ಆತನು **ಬುದ್ಧೇಃ** = ಬುದ್ಧಿಯ **ರಜಃಸ್ವಭಾವಂ** = ರಜಸ್ಸಿನ ಸ್ವಭಾವವನ್ನು **ಧುನೋತಿ** = ಹೋಗಲಾಡಿಸಿಕೊಳ್ಳುತ್ತಾನೆ.

**೧೮೨.** ಮೋಕ್ಷದಲ್ಲಿಯೇ ಆಸಕ್ತಿಯಿಟ್ಟು, ವಿಷಯಗಳಲ್ಲಿರುವ ಅಭಿಲಾಷೆಯನ್ನು ನಿರ್ಮೂಲಮಾಡಿ, ಸಕಲ ಕರ್ಮಗಳನ್ನೂ ತ್ಯಜಿಸಿ, ಉತ್ತಮವಾದ ಶ್ರದ್ಧೆಯಿಂದ ಯಾವನು ಶ್ರವಣಾದಿಗಳಲ್ಲಿ[೧] ನೆಲೆಗೊಳ್ಳುತ್ತಾನೆಯೊ ಅವನು ಮನಸ್ಸಿನಲ್ಲಿರುವ ರಜಸ್ಸಿನ ಸ್ವಭಾವವನ್ನು ನಾಶಪಡಿಸಿಕೊಳ್ಳುತ್ತಾನೆ.

[ಮನಸ್ಸಿನ ನೈರ್ಮಲ್ಯವು ಸತ್ತ್ವಾತಿಶಯದಿಂದ ಉಂಟಾಗುತ್ತದೆ; ಸತ್ತ್ವಾತಿಶಯವು ಬುದ್ಧಿಯು ತನ್ನ ರಜಃಸ್ವಭಾವವನ್ನು ಹೋಗಲಾಡಿಸಿಕೊಳ್ಳುವ ವರೆಗೂ ಉಂಟಾಗುವುದಿಲ್ಲ. ಆದುದರಿಂದ ಮನಸ್ಸಿನಲ್ಲಿರುವ ರಾಜಸ-ಸ್ವಭಾವವನ್ನು ಕಳೆದುಕೊಳ್ಳಬೇಕೆಂದು ಹೇಳಿದೆ.

೧ ಜೀವಬ್ರಹ್ಮೈಕ್ಯವಿಷಯವಾಗಿ ಗುರುಮುಖೇನ ಕೇಳುವುದು, ಮನನ-ನಿದಿಧ್ಯಾಸನಗಳನ್ನು ಮಾಡುವುದು.]

**ಮನೋಮಯೋ ನಾಪಿ ಭವೇತ್ ಪರಾತ್ಮಾ**
**ಹ್ಯಾದ್ಯಂತವತ್ತ್ವಾತ್ ಪರಿಣಾಮಿ-ಭಾವಾತ್ ।**
**ದುಃಖಾತ್ಮಕತ್ವಾದ್ ವಿಷಯತ್ವಹೇತೋ-**
**ರ್ದ್ರಷ್ಟಾ ಹಿ ದೃಶ್ಯಾತ್ಮತಯಾ ನ ದೃಷ್ಟಃ ॥ ೧೮೩ ॥**

**ಮನೋಮಯಃ ಅಪಿ** = ಮನೋಮಯಕೋಶವು ಕೂಡ **ಆದಿ-ಅಂತ-ವತ್ತ್ವಾತ್** = ಆದಿ-ಅಂತಗಳನ್ನು ಪಡೆದಿರುವುದರಿಂದಲೂ **ಪರಿಣಾಮಿ-ಭಾವಾತ್** = ಪರಿಣಾಮವನ್ನು ಹೊಂದುವುದರಿಂದಲೂ **ದುಃಖಾತ್ಮಕತ್ವಾತ್** = ದುಃಖಸ್ವರೂಪವಾಗಿರುವುದರಿಂದಲೂ **ವಿಷಯತ್ವಹೇತೋಃ** = ದೃಶ್ಯವಾಗಿರುವುದರಿಂದಲೂ **ಪರಾತ್ಮಾ ನ ಭವೇತ್** = ಪರಮಾತ್ಮನಾಗುವುದಿಲ್ಲ; **ಹಿ** = ಏಕೆಂದರೆ **ದ್ರಷ್ಟಾ** = ದ್ರಷ್ಟೃವು **ದೃಶ್ಯಾತ್ಮತಯಾ** = ದೃಶ್ಯಪದಾರ್ಥರೂಪದಿಂದ **ನ ದೃಷ್ಟಃ** = ನೋಡಲ್ಪಟ್ಟಿಲ್ಲ.

**೧೮೩.** ಮನೋಮಯಕೋಶವು ಪರಮಾತ್ಮನಲ್ಲ; ಏಕೆಂದರೆ ಇದಕ್ಕೆ ಆದಿ-ಅಂತಗಳಿವೆ,[೧] ಪರಿಣಾಮವನ್ನು ಹೊಂದುವ ಸ್ವಭಾವವುಳ್ಳದ್ದು,[೨] ದುಃಖಸ್ವರೂಪವಾದದ್ದು, ದೃಶ್ಯರೂಪವಾದದ್ದು.[೩] ದ್ರಷ್ಟೃವಾದ ಆತ್ಮನು ದೃಶ್ಯಪದಾರ್ಥರೂಪದಿಂದ ಎಂದಿಗೂ ನೋಡಲ್ಪಟ್ಟಿಲ್ಲ.

[[1] ಉತ್ಪತ್ತಿವಿನಾಶಗಳು.
[2] 'ಸೋಮ್ಯ, ಮನಸ್ಸು ಅನ್ನಮಯ' ಅನ್ನಮಯಂ ಹಿ ಸೋಮ್ಯ ಮನಃ (ಛಾಂದೋಗ್ಯ ಉ. ೬. ೬. ೫).
[3] ದ್ರಷ್ಟೃವಿಗೆ ವಿಷಯವಾದದ್ದು.]

**ಬುದ್ಧಿರ್ಬುದ್ಧೀಂದ್ರಿಯೈಃ ಸಾರ್ಧಂ ಸವೃತ್ತಿಃ ಕರ್ತೃಲಕ್ಷಣಃ ।**
**ವಿಜ್ಞಾನಮಯಕೋಶಃ ಸ್ಯಾತ್ ಪುಂಸಃ ಸಂಸಾರಕಾರಣಮ್**
**॥ ೧೮೪ ॥**

**ಬುದ್ಧೀಂದ್ರಿಯೈಃ ಸಾರ್ಧಂ**=ಜ್ಞಾನೇಂದ್ರಿಯಗಳಿಂದ ಕೂಡಿರುವ **ಸವೃತ್ತಿಃ**= ವೃತ್ತಿಸಹಿತವಾದ **ಬುದ್ಧಿಃ**=ಬುದ್ಧಿಯು **ಕರ್ತೃಲಕ್ಷಣಃ**=ಕರ್ತೃವಿನ ಲಕ್ಷಣವುಳ್ಳ **ವಿಜ್ಞಾನಮಯಕೋಶಃ ಸ್ಯಾತ್**=ವಿಜ್ಞಾನಮಯಕೋಶವಾಗುತ್ತದೆ; [ಇದು] **ಪುಂಸಃ**=ಮನುಷ್ಯನ **ಸಂಸಾರ-ಕಾರಣಮ್**=ಸಂಸಾರಕ್ಕೆ ಕಾರಣವಾಗಿರುತ್ತದೆ.

**೧೮೪.** ಜ್ಞಾನೇಂದ್ರಿಯಗಳಿಂದ ಕೂಡಿದ, ವೃತ್ತಿಸಹಿತವಾದ ಬುದ್ಧಿಯು[1] ಕರ್ತೃವಿನ ಲಕ್ಷಣವುಳ್ಳ ವಿಜ್ಞಾನಮಯಕೋಶವಾಗುತ್ತದೆ.[2] ಇದು ಮನುಷ್ಯನ ಸಂಸಾರಕ್ಕೆ ಕಾರಣವು.

[ಇಲ್ಲಿಂದ ವಿಜ್ಞಾನಮಯಕೋಶದ ವಿವೇಚನವನ್ನು ಹೇಳಿದೆ.
[1] ನಿಶ್ಚಯರೂಪವಾದ ವೃತ್ತಿಯಿಂದ ಕೂಡಿರುವ. ಅಧ್ಯವಸಾಯಲಕ್ಷಣವುಳ್ಳ ಈ ವಿಜ್ಞಾನವು ಅಂತಃಕರಣದ ಧರ್ಮವಾಗಿರುತ್ತದೆ. ಪ್ರಮಾಣಸ್ವರೂಪವಾದ ನಿಶ್ಚಯವಿಜ್ಞಾನಗಳಿಂದ ಉತ್ಪನ್ನನಾಗಿರುವ ಆತ್ಮನು ವಿಜ್ಞಾನಮಯನು.
[2] 'ಈ ಮನೋಮಯನಾದ ಆತ್ಮನಿಗಿಂತ ಬೇರೆಯವನೂ ಒಳಗಿರುವವನೂ ವಿಜ್ಞಾನಮಯನೂ ಆದ ಆತ್ಮನಿರುವನು' ತಸ್ಮಾದ್ವಾ ಏತಸ್ಮಾನ್ಮನೋಮಯಾತ್ ಅನ್ಯೋಽಂತರ ಆತ್ಮಾ ವಿಜ್ಞಾನಮಯಃ (ತೈತ್ತಿರೀಯ ಉ. ೨. ೪).]

**ಅನುವ್ರಜಚ್ಚಿತ್ಪ್ರತಿಬಿಂಬಶಕ್ತಿ-**
**ರ್ವಿಜ್ಞಾನಸಂಜ್ಞಃ ಪ್ರಕೃತೇರ್ವಿಕಾರಃ ।**
**ಜ್ಞಾನಕ್ರಿಯಾವಾನಹಮಿತ್ಯಜಸ್ರಂ**
**ದೇಹೇಂದ್ರಿಯಾದಿಷ್ವಭಿಮನ್ಯತೇ ಭೃಶಮ್**
**॥ ೧೮೫ ॥**

**ಅನುವ್ರಜತ್-ಚಿತ್-ಪ್ರತಿಬಿಂಬ-ಶಕ್ತಿಃ**=ಅನುಸರಿಸುತ್ತಿರುವ ಚಿತ್‌ಪ್ರತಿಬಿಂಬದ ಶಕ್ತಿಯುಳ್ಳ **ವಿಜ್ಞಾನಸಂಜ್ಞಃ**=ವಿಜ್ಞಾನವೆಂಬ ಹೆಸರುಳ್ಳ **ಪ್ರಕೃತೇಃ**=ಪ್ರಕೃತಿಯ **ವಿಕಾರಃ**=ವಿಕಾರವು **ಜ್ಞಾನಕ್ರಿಯಾವಾನ್**=ಜ್ಞಾನಕ್ರಿಯೆಗಳುಳ್ಳದ್ದು; **ಅಜಸ್ರಂ**=

ಯಾವಾಗಲೂ **ದೇಹೇಂದ್ರಿಯಾದಿಷು**=ದೇಹೇಂದ್ರಿಯಾದಿಗಳಲ್ಲಿ **ಅಹಮ್ ಇತಿ**='ನಾನು' ಎಂದು **ಭೃಶಂ**=ಬಹಳವಾಗಿ **ಅಭಿಮನ್ಯತೇ**=ಅಭಿಮಾನವನ್ನು ಮಾಡುತ್ತದೆ.

**೧೮೫.** ಚಿದಾತ್ಮನ ಪ್ರತಿಬಿಂಬದ ಶಕ್ತಿಯಿಂದ ಅನುಸರಿಸಲ್ಪಟ್ಟ[1] ವಿಜ್ಞಾನವೆಂಬ ಪ್ರಕೃತಿಯ ವಿಕಾರವು ಜ್ಞಾನಕ್ರಿಯೆಗಳುಳ್ಳದ್ದು. ಇದು ದೇಹ ಇಂದ್ರಿಯ ಇವೇ ಮೊದಲಾದುವುಗಳಲ್ಲಿ 'ನಾನು' ಎಂಬ ಅಭಿಮಾನ ವನ್ನು ಪಡೆಯುತ್ತದೆ.

[[1] ವಿಜ್ಞಾನಮಯಕೋಶವು ನಿಜವಾಗಿಯೂ ಅಚೇತನವಾದದ್ದು. ಚಿತ್‌ಶಕ್ತಿಯ ಪ್ರತಿಬಿಂಬದಿಂದ ಚೇತನವಾಗಿರುವಂತೆ ಕಾಣುತ್ತದೆ.]

**ಅನಾದಿಕಾಲೋಽಯಮಹಂಸ್ವಭಾವೋ**
**ಜೀವಃ ಸಮಸ್ತವ್ಯವಹಾರವೋಢಾ**
**ಕರೋತಿ ಕರ್ಮಾಣ್ಯಪಿ ಪೂರ್ವವಾಸನಃ**
**ಪುಣ್ಯಾನ್ಯಪುಣ್ಯಾನಿ ಚ ತತ್ಫಲಾನಿ** ॥ ೧೮೬ ॥
**ಭುಂಕ್ತೇ ವಿಚಿತ್ರಾಸ್ವಪಿ ಯೋನಿಷು ವ್ರಜ-**
**ನ್ನಾಯಾತಿ ನಿರ್ಯಾತ್ಯಧ ಊರ್ಧ್ವಮೇಷಃ ।**
**ಅಸ್ಯೈವ ವಿಜ್ಞಾನಮಯಸ್ಯ ಜಾಗ್ರತ್-**
**ಸ್ವಪ್ನಾದ್ಯವಸ್ಥಾಃ ಸುಖದುಃಖಭೋಗಃ** ॥ ೧೮೭ ॥

**ಅನಾದಿಕಾಲಃ**=ಅನಾದಿಕಾಲದಿಂದ ಬಂದಿರುವ **ಅಹಂಸ್ವಭಾವಃ**='ನಾನು' ಎಂಬ ಸ್ವಭಾವವುಳ್ಳ **ಅಯಂ ಜೀವಃ**=ಈ ಜೀವನು **ಸಮಸ್ತ-ವ್ಯವಹಾರ-ವೋಢಾ**=ಸಮಸ್ತ ವ್ಯವಹಾರಗಳನ್ನು ನಿರ್ವಹಿಸುತ್ತಿರುವವನಾಗಿ **ಪೂರ್ವವಾಸನಃ**=ಪೂರ್ವವಾಸನೆಗಳುಳ್ಳವನಾಗಿ **ಪುಣ್ಯಾನಿ ಅಪುಣ್ಯಾನಿ ಕರ್ಮಾಣಿ ಅಪಿ**=ಸುಕೃತ-ದುಷ್ಕೃತರೂಪವಾದ ಕರ್ಮಗಳನ್ನು **ಕರೋತಿ**=ಮಾಡುತ್ತಾನೆ **ತತ್-ಫಲಾನಿ ಚ**=ಮತ್ತು ಅವುಗಳ ಫಲಗಳನ್ನು **ಭುಂಕ್ತೇ**=ಅನುಭವಿಸುತ್ತಾನೆ; **ಏಷಃ**=ಇವನು **ವಿಚಿತ್ರಾಸು ಯೋನಿಷು**=ಬಗೆಬಗೆಯಾದ ಯೋನಿಗಳಲ್ಲಿ **ವ್ರಜನ್**=ಪ್ರವೇಶಿಸು ವವನಾಗಿ **ಅಧಃ ಆಯಾತಿ**=ಕೆಳಕ್ಕೆ ಬರುತ್ತಾನೆ, **ಊರ್ಧ್ವಂ ನಿರ್ಯಾತಿ**=ಮೇಲಕ್ಕೆ ಹೋಗುತ್ತಾನೆ; **ಅಸ್ಯ ವಿಜ್ಞಾನಮಯಸ್ಯ ಏವ**=ಈ ವಿಜ್ಞಾನಮಯನಿಗೇ **ಜಾಗ್ರತ್-ಸ್ವಪ್ನಾದಿ-ಅವಸ್ಥಾಃ**=ಜಾಗ್ರತ್ ಸ್ವಪ್ನ ಮೊದಲಾದ ಅವಸ್ಥೆಗಳೂ **ಸುಖ-ದುಃಖ ಭೋಗಃ**=ಸುಖದುಃಖಗಳ ಅನುಭವವೂ [ಆಗುತ್ತವೆ].

**೧೮೬–೧೮೭.** ಈ (ವಿಜ್ಞಾನಮಯನಿಗೆ) ಆದಿಯಿಲ್ಲ. ಇವನು (ದೇಹೇಂದ್ರಿ ಯಾದಿಗಳಲ್ಲಿ) 'ನಾನು' ಎಂಬ ಬುದ್ಧಿಯುಳ್ಳವನು, ಜೀವನೆಂಬ ಹೆಸರುಳ್ಳ ವನು, ಸಮಸ್ತ ವ್ಯವಹಾರಗಳನ್ನು ನಿರ್ವಹಿಸುತ್ತಾನೆ;[1] ಇವನು **ಪೂರ್ವ**

ವಾಸನೆಗಳಿಂದ[೨] ಸುಕೃತ-ದುಷ್ಕೃತಗಳನ್ನು ಮಾಡುತ್ತಾನೆ ಮತ್ತು ಅವುಗಳ ಫಲಗಳನ್ನು ಅನುಭವಿಸುತ್ತಾನೆ. ಬಗೆಬಗೆಯ ಯೋನಿಗಳಲ್ಲಿ ಪ್ರವೇಶಿಸಿ ಕೆಳಕ್ಕೆ ಬರುತ್ತಾನೆ, ಮೇಲಕ್ಕೆ ಹೋಗುತ್ತಾನೆ.[೩] ಈ ವಿಜ್ಞಾನಮಯನಿಗೇ ಜಾಗ್ರತ್-ಸ್ವಪ್ನಗಳೇ ಮೊದಲಾದ ಅವಸ್ಥೆಗಳೂ ಸುಖದುಃಖಗಳ ಅನುಭವವೂ (ಉಂಟಾಗುತ್ತವೆ).

[೧ 'ವಿಜ್ಞಾನವು ಯಜ್ಞವನ್ನು ಮಾಡುತ್ತದೆ, ಕರ್ಮಗಳನ್ನೂ ಮಾಡುತ್ತದೆ' **ವಿಜ್ಞಾನಂ ಯಜ್ಞಂ ತನುತೇ ಕರ್ಮಾಣಿ ತನುತೇಽಪಿ ಚ** (ತೈತ್ತಿರೀಯ ಉ. ೨. ೫).
೨ ಪೂರ್ವಜನ್ಮಗಳಲ್ಲಿ ಮಾಡಿದ ಶುಭಾಶುಭ-ಕರ್ಮಗಳ ಸಂಸ್ಕಾರದಿಂದ ಕೂಡಿ.
೩ ನರಕಕ್ಕೆ ಬೀಳುವುದು, ಸ್ವರ್ಗಕ್ಕೆ ಏರುವುದು ಎಂದರ್ಥ.]

**ದೇಹಾದಿ-ನಿಷ್ಠಾಶ್ರಮ-ಧರ್ಮ-ಕರ್ಮ-**
**ಗುಣಾಭಿಮಾನಂ ಸತತಂ ಮಮೇತಿ ।**
**ವಿಜ್ಞಾನಕೋಶೋಽಯಮತಿಪ್ರಕಾಶಃ**
**ಪ್ರಕೃಷ್ಟ-ಸಾನ್ನಿಧ್ಯ-ವಶಾತ್ ಪರಾತ್ಮನಃ ।**
**ಅತೋ ಭವತ್ಯೇಷ ಉಪಾಧಿರಸ್ಯ**
**ಯದಾತ್ಮಧೀಃ ಸಂಸರತಿ ಭ್ರಮೇಣ ॥ ೧೮೮ ॥**

**ಸತತಂ** = ಯಾವಾಗಲೂ **ಮಮ ಇತಿ**='ನನ್ನದು' ಎಂದು **ದೇಹಾದಿ-ನಿಷ್ಠ-ಆಶ್ರಮ-ಧರ್ಮ-ಕರ್ಮ-ಗುಣ-ಅಭಿಮಾನಂ** = ದೇಹಾದಿಗಳಲ್ಲಿರುವ ಆಶ್ರಮಗಳ ಧರ್ಮಗಳು, ಕರ್ಮಗಳು, ಗುಣಗಳು—ಇವುಗಳಲ್ಲಿ ಅಭಿಮಾನವನ್ನು [ಮಾಡುತ್ತಾನೆ]. **ಅಯಂ ವಿಜ್ಞಾನಕೋಶಃ** = ಈ ವಿಜ್ಞಾನಕೋಶವು **ಪರಾತ್ಮನಃ** = ಪರಮಾತ್ಮನ **ಪ್ರಕೃಷ್ಟಸಾನ್ನಿಧ್ಯವಶಾತ್** = ಪ್ರಬಲವಾದ ಸಾಮೀಪ್ಯದಿಂದ **ಅತಿಪ್ರಕಾಶಃ** = ಅತಿ ಪ್ರಕಾಶವುಳ್ಳದ್ದಾಗಿರುತ್ತದೆ; **ಅತಃ**=ಆದುದರಿಂದ **ಅಸ್ಯ** = ಈ ಆತ್ಮನಿಗೆ **ಏಷಃ**=ಇದು **ಉಪಾಧಿಃ ಭವತಿ** = ಉಪಾಧಿಯಾಗಿರುತ್ತದೆ, **ಯತ್-ಆತ್ಮಧೀಃ**=ಯಾವ ಉಪಾಧಿಯಿಂದಲೇ ತಾದಾತ್ಮ್ಯಬುದ್ಧಿಯುಳ್ಳವನಾಗಿ **ಭ್ರಮೇಣ** = ಭ್ರಮೆಯಿಂದ **ಸಂಸರತಿ** = ಸಂಸರಿಸುತ್ತಾನೆ.

**೧೮೮.** ಇದು ದೇಹಾದಿ-ಸಂಘಾತಗಳಲ್ಲಿ ಕಲ್ಪಿತವಾದ ವರ್ಣಾಶ್ರಮ ಧರ್ಮಗಳ ಕರ್ಮಗಳು ಗುಣಗಳು—ಇವುಗಳಲ್ಲಿ ಯಾವಾಗಲೂ 'ನನ್ನವು' ಎಂದು ಅಭಿಮಾನವನ್ನು ಮಾಡುತ್ತದೆ. ಈ ವಿಜ್ಞಾನಮಯಕೋಶವು ಪರಮಾತ್ಮನ ಪ್ರಬಲಸಾಮೀಪ್ಯದಿಂದ ವಿಶೇಷಪ್ರಕಾಶವುಳ್ಳದ್ದಾಗಿರುತ್ತದೆ. ಆದುದರಿಂದ ಈ ಆತ್ಮನಿಗೆ ಇದು ಉಪಾಧಿಯಾಗಿರುತ್ತದೆ. ಈ ಉಪಾಧಿಯಲ್ಲಿ 'ನಾನು' ಎಂಬ ಬುದ್ಧಿಯುಳ್ಳವನಾಗಿ ಆತ್ಮನು ಭ್ರಮೆಯಿಂದ ಸಂಸರಿಸುತ್ತಾನೆ.

**ಯೋಽಯಂ ವಿಜ್ಞಾನಮಯಃ ಪ್ರಾಣೇಷು ಹೃದಿ ಸ್ಫುರತ್ಯಯಂ ಜ್ಯೋತಿಃ ।**
**ಕೂಟಸ್ಥಃ ಸನ್ನಾತ್ಮಾ ಕರ್ತಾ ಭೋಕ್ತಾ ಭವತ್ಯುಪಾಧಿಸ್ಥಃ ॥ ೧೮೯ ॥**

**ಯಃ** = ಯಾವ **ಅಯಂ ವಿಜ್ಞಾನಮಯಃ** = ಈ ವಿಜ್ಞಾನಮಯನು **ಜ್ಯೋತಿಃ** = ಜ್ಯೋತೀರೂಪನಾಗಿ **ಪ್ರಾಣೇಷು** = ಇಂದ್ರಿಯಗಳಲ್ಲಿಯೂ **ಹೃದಿ** = ಬುದ್ಧಿಯಲ್ಲಿಯೂ **ಸ್ಫುರತಿ** = ಪ್ರಕಾಶಿಸುತ್ತಾನೆಯೊ **ಅಯಮ್ ಆತ್ಮಾ** = ಈ ಆತ್ಮನು **ಕೂಟಸ್ಥಃ ಸನ್** = ನಿರ್ವಿಕಾರನಾಗಿದ್ದರೂ **ಉಪಾಧಿಸ್ಥಃ** = ಉಪಾಧಿಯಲ್ಲಿರುವವನಾಗಿ **ಕರ್ತಾ ಭೋಕ್ತಾ ಭವತಿ** = ಕರ್ತೃವೂ ಭೋಕ್ತೃವೂ ಆಗುತ್ತಾನೆ.

೧೮೯. ಯಾವ ಈ ವಿಜ್ಞಾನಮಯನು ಜ್ಯೋತೀರೂಪನಾಗಿ ಇಂದ್ರಿಯಗಳಲ್ಲಿಯೂ[೧] ಬುದ್ಧಿಯಲ್ಲಿಯೂ ಪ್ರಕಾಶಿಸುತ್ತಾನೆಯೊ ಆ ಈ ಆತ್ಮನು ನಿರ್ವಿಕಾರನಾಗಿದ್ದರೂ ಉಪಾಧಿವಶದಿಂದ ಕರ್ತೃವೂ ಭೋಕ್ತೃವೂ ಆಗುತ್ತಾನೆ.

[ಈ ಶ್ಲೋಕದ ಪೂರ್ವಭಾಗವು ಬೃಹದಾರಣ್ಯಕೋಪನಿಷತ್ತಿನಲ್ಲಿ (೪. ೩. ೭) ಬರುತ್ತದೆ. ಜನಕನು ಆ ಆತ್ಮನು ಯಾರೆಂದು ಪ್ರಶ್ನಿಸಿದಾದ ಯಾಜ್ಞವಲ್ಕ್ಯನು ವಿಜ್ಞಾನಮಯನೂ ಇಂದ್ರಿಯಗಳಿಗಿಂತ ವ್ಯತಿರಿಕ್ತನೂ ಸ್ವಯಂಜ್ಯೋತಿಯೂ ಆದ ಈ ಪುರುಷನೇ ಆತ್ಮನೆಂದು ಹೇಳಿರುತ್ತಾನೆ. ವಿಜ್ಞಾನಮಯ-ಶಬ್ದದಲ್ಲಿರುವ ಮಯಟ್-ಪ್ರತ್ಯಯವು ವಿಕಾರವನ್ನು ಸೂಚಿಸುವುದಿಲ್ಲ; ಏಕೆಂದರೆ ಆತ್ಮನು ವಿಜ್ಞಾನದ ವಿಕಾರವಲ್ಲ, ವಿಜ್ಞಾನಪ್ರಾಯನು ಎಂದರ್ಥ. ಗಾಜಿನ ಗೋಳದಲ್ಲಿರುವ ದೀಪವು ಗೋಳದ ರೂಪ-ವರ್ಣಗಳನ್ನು ಪಡೆಯುವಂತೆ ಆತ್ಮನು ವಿಜ್ಞಾನದ ರೂಪವನ್ನು ಪಡೆದಿರುತ್ತಾನೆ ಎಂದು ಅಭಿಪ್ರಾಯ.

[೧] ಎಂದರೆ ಅವುಗಳಿಗಿಂತ ವ್ಯತಿರಿಕ್ತನಾಗಿ.]

**ಸ್ವಯಂ ಪರಿಚ್ಛೇದಮುಪೇತ್ಯ ಬುದ್ಧೇ-**
**ಸ್ತಾದಾತ್ಮ್ಯದೋಷೇಣ ಪರಂ ಮೃಷಾತ್ಮನಃ ।**
**ಸರ್ವಾತ್ಮಕಃ ಸನ್ನಪಿ ವೀಕ್ಷತೇ ಸ್ವಯಂ**
**ಸ್ವತಃ ಪೃಥಕ್ತ್ವೇನ ಮೃದೋ ಘಟಾನಿವ ॥ ೧೯೦ ॥**

[ಇವನು] **ಸರ್ವಾತ್ಮಕಃ ಸನ್ ಅಪಿ** = ಸರ್ವಾತ್ಮನಾಗಿದ್ದರೂ **ಬುದ್ಧೇಃ** = ವಿಜ್ಞಾನಮಯದ **ಪರಿಚ್ಛೇದಂ** = ಅವಚ್ಛಿನ್ನಭಾವವನ್ನು **ಸ್ವಯಂ** = ತಾನೇ **ಉಪೇತ್ಯ** = ಹೊಂದಿ **ಪರಂ** = ಅಧಿಕವಾಗಿ **ಮೃಷಾತ್ಮನಃ** = ಮಿಥ್ಯಾಸ್ವರೂಪವಾದ ದೇಹಾದಿ ಸಂಘಾತದಲ್ಲಿರುವ **ತಾದಾತ್ಮ್ಯದೋಷೇಣ** = ತಾದಾತ್ಮ್ಯದೋಷದಿಂದ — **ಮೃದಃ** =

ಮಣ್ಣಿಗಿಂತ **ಘಟಾನ್ ಇವ** = ಗಡಿಗೆಗಳನ್ನು ಹೇಗೋ ಹಾಗೆ— **ಸ್ವತಃ** = ತನ್ನನ್ನೇ **ಪೃಥಕ್ತ್ವೇನ** = ಭಿನ್ನಭಾವದಿಂದ **ವೀಕ್ಷತೇ** = ನೋಡುತ್ತಾನೆ.

**೧೯೦.** ಇವನು ಸರ್ವಾತ್ಮನಾಗಿದ್ದರೂ ವಿಜ್ಞಾನಮಯದ ಅವಚ್ಛಿನ್ನ ಭಾವವನ್ನು ತಾನೇ ಹೊಂದಿ ಮತ್ತು ಅಧಿಕವಾಗಿ ಮಿಥ್ಯಾಸ್ವರೂಪವಾದ ದೇಹಾದಿಸಂಘಾತದಲ್ಲಿರುವ ತಾದಾತ್ಮ್ಯದೋಷದಿಂದ— ಮಣ್ಣಿಗಿಂತ ಗಡಿಗೆಗಳು ಬೇರೆ ಎಂದು ಜನರು ಅರಿಯುವಂತೆ— ತನ್ನನ್ನೇ ತನಗಿಂತ ಬೇರೆಯಾಗಿ[೧] ನೋಡುತ್ತಾನೆ.

[[೧] ಅಜ್ಞನು ಮಣ್ಣಿನಿಂದ ಮಾಡಲ್ಪಟ್ಟ ಗಡಿಗೆಗಳು ಮಣ್ಣಿಗಿಂತ ಬೇರೆ ಎಂದು ಅರಿಯುವಂತೆ ಆತ್ಮನು ತನಗಿಂತ ಭಿನ್ನವಾದ ಯಾವ ವಸ್ತುವೂ ಇಲ್ಲದಿದ್ದರೂ 'ನಾನು, ನೀನು' ಎಂಬ ಭೇದಬುದ್ಧಿಯನ್ನು ಪಡೆದಿರುತ್ತಾನೆ.]

**ಉಪಾಧಿ-ಸಂಬಂಧ-ವಶಾತ್ ಪರಾತ್ಮಾ**
**ಹ್ಯುಪಾಧಿ-ಧರ್ಮಾನನುಭಾತಿ ತದ್ಗುಣಃ ।**
**ಅಯೋವಿಕಾರಾನವಿಕಾರಿ-ವಹ್ನಿವತ್**
**ಸದೈಕರೂಪೋಽಪಿ ಪರಃ ಸ್ವಭಾವಾತ್ ॥ ೧೯೧ ॥**

**ಪರಾತ್ಮಾ** = ಪರಮಾತ್ಮನು **ಸ್ವಭಾವಾತ್** = ಸ್ವಭಾವದಿಂದಲೇ **ಪರಃ** = ಶ್ರೇಷ್ಠನಾಗಿದ್ದರೂ **ಸದಾ ಏಕರೂಪಃ ಅಪಿ** = ಯಾವಾಗಲೂ ನಿರ್ವಿಕಾರ-ಸ್ವಭಾವದವನಾಗಿದ್ದರೂ **ಉಪಾಧಿ-ಸಂಬಂಧ-ವಶಾತ್** = ಉಪಾಧಿಸಂಬಂಧದ ದೆಸೆಯಿಂದ **ತದ್ಗುಣಃ** [**ಸನ್**] = ಆ ಗುಣಗಳುಳ್ಳವನಾಗಿ **ಅಯೋವಿಕಾರಾನ್** = ಕಬ್ಬಿಣದ ವಿಕಾರಗಳನ್ನು **ಅವಿಕಾರಿ-ವಹ್ನಿವತ್** = ವಿಕಾರವಿಲ್ಲದ ಅಗ್ನಿಯು ಹೇಗೋ ಹಾಗೆ **ಉಪಾಧಿ-ಧರ್ಮಾನ್** = ಉಪಾಧಿಯ ಧರ್ಮಗಳನ್ನು **ಅನುಭಾತಿ ಹಿ** = ಅನುಸರಿಸಿ ಪ್ರಕಾಶಿಸುತ್ತಾನೆ.

**೧೯೧.** ಪರಮಾತ್ಮನು ಸ್ವಭಾವದಿಂದಲೇ ಶ್ರೇಷ್ಠನಾಗಿದ್ದರೂ[೧] ಸದಾ ನಿರ್ವಿಕಾರ-ಸ್ವಭಾವದವನಾಗಿದ್ದರೂ ಉಪಾಧಿಸಂಬಂಧದಿಂದ ಅದರ ಗುಣಗಳುಳ್ಳವನಾಗಿ— ವಿಕಾರವಿಲ್ಲದ ಅಗ್ನಿಯು ಕಬ್ಬಿಣದ ವಿಕಾರಗಳನ್ನು ಅನುಸರಿಸುವಂತೆ[೨]— ಉಪಾಧಿಯ ಧರ್ಮಗಳನ್ನು ಅನುಸರಿಸಿ[೩] ಪ್ರಕಾಶಿಸುತ್ತಾನೆ.

[ನಿರ್ವಿಕಾರಿಯಾದ ಆತ್ಮನಿಗೆ ಸವಿಕಾರತ್ವವು ಹೇಗೆ ಬರುತ್ತದೆಂದು ದೃಷ್ಟಾಂತದ ಮೂಲಕ ಹೇಳಿದೆ.

[೧] ನಿತ್ಯ-ಶುದ್ಧ-ಬುದ್ಧ-ಮುಕ್ತ-ಸ್ವಭಾವನಾಗಿದ್ದರೂ.

[೨] ಕಬ್ಬಿಣದ ಹಾಗೆ ಉದ್ದವಾಗುವುದು, ವರ್ತುಲಾಕಾರವನ್ನು ಪಡೆಯುವುದು ಇತ್ಯಾದಿ.

[೩] 'ನಾನು ಸುಖಿ, ದುಃಖಿ' ಇತ್ಯಾದಿ.]

ಶಿಷ್ಯ ಉವಾಚ

**ಭ್ರಮೇಣಾಪ್ಯನ್ಯಥಾ ವಾಽಸ್ತು ಜೀವಭಾವಃ ಪರಾತ್ಮನಃ ।**
**ತದುಪಾಧೇರನಾದಿತ್ವಾನ್ನಾನಾದೇರ್ನಾಶ ಇಷ್ಯತೇ　　॥ ೧೯೨ ॥**

**ಅತೋಽಸ್ಯ ಜೀವಭಾವೋಽಪಿ ನಿತ್ಯೋ ಭವತಿ ಸಂಸೃತಿಃ ।**
**ನ ನಿವರ್ತೇತ ತನ್ಮೋಕ್ಷಃ ಕಥಂ ಮೇ ಶ್ರೀಗುರೋ ವದ ॥ ೧೯೩ ॥**

**ಶಿಷ್ಯಃ** = ಶಿಷ್ಯನು **ಉವಾಚ** = ಕೇಳಿದನು— **ಶ್ರೀಗುರೋ** = ಹೇ ಗುರುವೆ, **ಪರಾತ್ಮನಃ**= ಪರಮಾತ್ಮನಿಗೆ **ಭ್ರಮೇಣ ಅಪಿ**= ಭ್ರಾಂತಿಯಿಂದಾಗಲಿ **ಅನ್ಯಥಾವಾ**= ಬೇರೆ ಯಾವ ಕಾರಣದಿಂದಾಗಲಿ **ಜೀವಭಾವಃ** = ಜೀವಭಾವವು **ಅಸ್ತು** = ಉಂಟಾಗಿರಲಿ, **ತತ್-ಉಪಾಧೇಃ ಅನಾದ್ವಿತಾತ್** = ಆ ಉಪಾಧಿಯು ಅನಾದಿಯಾಗಿರುವುದರಿಂದ **ಅನಾದೇಃ** = ಅನಾದಿಯಾದ ಅದಕ್ಕೆ **ನಾಶಃ ನ ಇಷ್ಯತೇ** = ನಾಶವನ್ನು ಅಪೇಕ್ಷಿಸಕೂಡದಷ್ಟೆ? **ಅತಃ** = ಆದುದರಿಂದ **ಅಸ್ಯ** = ಇವನ **ಜೀವಭಾವಃ ಅಪಿ** = ಜೀವಭಾವವು ಕೂಡ **ನಿತ್ಯಃ ಭವತಿ** = ನಿತ್ಯವಾಗುತ್ತದೆ, **ಸಂಸೃತಿಃ** = ಸಂಸಾರವು **ನ ನಿವರ್ತೇತ** = ಹೋಗುವುದಿಲ್ಲ; **ತತ್** = ಹೀಗಿರುವಾಗ **ಮೋಕ್ಷಃ** = ಮೋಕ್ಷವು **ಕಥಂ** = ಹೇಗೆ ಸಂಭವಿಸುತ್ತದೆ? [ಇದನ್ನು] **ಮೇ** = ನನಗೆ **ವದ** = ಹೇಳು.

**೧೯೨-೧೯೩.** ಶಿಷ್ಯನು ಪ್ರಶ್ನಿಸಿದನು: ಶ್ರೀಗುರುವೆ, ಪರಮಾತ್ಮನ ಜೀವತ್ವವು ಭ್ರಾಂತಿಯಿಂದಾಗಲಿ ಅಥವಾ ಬೇರೆ ಯಾವ ಕಾರಣದಿಂದಾಗಲಿ ಉಂಟಾಗಿರಲಿ. ಉಪಾಧಿಯು ಅನಾದಿಯಾಗಿರುವುದರಿಂದ ಅನಾದಿಯಾದ ಉಪಾಧಿಗೆ ನಾಶವನ್ನು ಅಪೇಕ್ಷಿಸಕೂಡದಷ್ಟೆ? ಆದುದರಿಂದ ಇವನ ಜೀವತ್ವವೂ ನಿತ್ಯವಾಗುತ್ತದೆ, ಸಂಸಾರವು ಹೋಗುವುದೇ ಇಲ್ಲ. ಹೀಗಿರುವಾಗ ಇವನಿಗೆ ಮೋಕ್ಷವು ಹೇಗೆ ಸಂಭವಿಸುತ್ತದೆ? ಇದನ್ನು ನನಗೆ ಹೇಳು.

ಶ್ರೀಗುರುರುವಾಚ

**ಸಮ್ಯಕ್ ಪೃಷ್ಟಂ ತ್ವಯಾ ವಿದ್ವನ್ ಸಾವಧಾನೇನ ತಚ್ಛೃಣು ।**
**ಪ್ರಾಮಾಣಿಕೀ ನ ಭವತಿ ಭ್ರಾಂತ್ಯಾ ಮೋಹಿತಕಲ್ಪನಾ ॥ ೧೯೪ ॥**

**ಶ್ರೀಗುರುಃ**= ಗುರುವು **ಉವಾಚ** = ಹೇಳಿದನು— **ವಿದ್ವನ್** = ಬುದ್ಧಿವಂತನೆ, **ತ್ವಯಾ** = ನಿನ್ನಿಂದ **ಸಮ್ಯಕ್ ಪೃಷ್ಟಂ** = ಚೆನ್ನಾಗಿ ಪ್ರಶ್ನಿಸಲ್ಪಟ್ಟಿತು, **ತತ್** = ಅದನ್ನು **ಸಾವಧಾನೇನ** = ಸಾವಧಾನವಾಗಿ **ಶೃಣು** = ಕೇಳು; **ಭ್ರಾಂತ್ಯಾ** = ಭ್ರಾಂತಿಯಿಂದ **ಮೋಹಿತ-ಕಲ್ಪನಾ** = ಮೋಹಗೊಳಿಸಲ್ಪಟ್ಟವರ ಕಲ್ಪನೆಯು **ಪ್ರಾಮಾಣಿಕೀ ನ ಭವತಿ** = ನಿಜವಾಗುವುದಿಲ್ಲ.

**೧೯೪.** ಶ್ರೀಗುರುವು ಹೇಳಿದನು— ಎಲೈ ಬುದ್ಧಿವಂತನೆ, ನೀನು ಚೆನ್ನಾಗಿ ಪ್ರಶ್ನಿಸಿರುವೆ. ಅದನ್ನು ಸಾವಧಾನವಾಗಿ ಕೇಳು: ಭ್ರಾಂತಿಯಿಂದ ಮೋಹಿತರಾದವರ ಕಲ್ಪನೆಯು ನಿಜವಾಗುವುದಿಲ್ಲ.

**ಭ್ರಾಂತಿಂ ವಿನಾ ತ್ವಸಂಗಸ್ಯ ನಿಷ್ಕ್ರಿಯಸ್ಯ ನಿರಾಕೃತೇಃ ।**
**ನ ಘಟೇತಾರ್ಥಸಂಬಂಧೋ ನಭಸೋ ನೀಲತಾದಿವತ್ ॥ ೧೯೫ ॥**

**ತು** = ಆದರೆ **ಅಸಂಗಸ್ಯ** = ಅಸಂಗನಾದ **ನಿಷ್ಕ್ರಿಯಸ್ಯ** = ನಿಷ್ಕ್ರಿಯನಾದ **ನಿರಾಕೃತೇಃ** = ನಿರಾಕಾರನಾದ [ಆತ್ಮನಿಗೆ] **ಭ್ರಾಂತಿಂ ವಿನಾ** = ಭ್ರಾಂತಿಯನ್ನು ಬಿಟ್ಟರೆ— **ನಭಸಃ** = ಆಕಾಶಕ್ಕೆ **ನೀಲತಾದಿವತ್** = ನೀಲತ್ವವೇ ಮೊದಲಾದುವುಗಳ ಸಂಬಂಧದ ಹಾಗೆ— **ಅರ್ಥಸಂಬಂಧಃ** = ದೃಶ್ಯವಸ್ತುಗಳ ಸಂಬಂಧವು **ನ ಘಟೇತ** = ಉಂಟಾಗಲಾರದು.

**೧೯೫.** ಆದರೆ ಅಸಂಗನೂ[1] ನಿಷ್ಕ್ರಿಯನೂ[2] ನಿರಾಕಾರನೂ[3] ಆದ ಆತ್ಮನಿಗೆ ಭ್ರಾಂತಿಯಿಂದಲ್ಲದೆ[4]— ಆಕಾಶಕ್ಕೆ ನೀಲತ್ವವೇ ಮೊದಲಾದುವುಗಳ ಸಂಬಂಧದಂತೆ[5]— ದೃಶ್ಯವಸ್ತುಗಳ ಸಂಬಂಧವು ಉಂಟಾಗಲಾರದು.

[[1] 'ಈ ಪುರುಷನು ಅಸಂಗನು' **ಅಸಂಗೋ ಹ್ಯಯಂ ಪುರುಷಃ** (ಬೃಹದಾರಣ್ಯಕ ಉ. ೪. ೩. ೧೫).

[2] 'ಅವನು ನಿಷ್ಕಲನು ಮತ್ತು ನಿಷ್ಕ್ರಿಯನು' **ನಿಷ್ಕಲಂ ನಿಷ್ಕ್ರಿಯಮ್** (ಶ್ವೇತಾಶ್ವತರ ಉ. ೬. ೧೯).

[3] 'ಅದು ಅಸ್ಥೂಲ, ಅನಣು' **ಅಸ್ಥೂಲಮನಣು** (ಬೃಹದಾರಣ್ಯಕ ಉ. ೩. ೮. ೮).

[4] ಸ್ಥೂಲ-ಸೂಕ್ಷ್ಮ-ಕಾರಣ-ಶರೀರಗಳಲ್ಲಿ ಇರುವ ಅಭಿಮಾನದಿಂದಲ್ಲದೆ.

[5] ಅವಿವೇಕಿಗಳು ಆಕಾಶವು ನೀಲವು, ಕೆಂಪುಬಣ್ಣವುಳ್ಳದ್ದು ಎಂದು ಕಲ್ಪಿಸಿಕೊಂಡರೆ ಆ ಗುಣಗಳು ನಿಜವಾಗುವುದಿಲ್ಲ. ಹೀಗೆಯೇ ಪರಮಾತ್ಮನಲ್ಲಿ ಜೀವಭಾವವೂ ಕೂಡ ಅಪ್ರಾಮಾಣಿಕವು.]

**ಸ್ವಸ್ಯ ದ್ರಷ್ಟುರ್ನಿರ್ಗುಣಸ್ಯಾಕ್ರಿಯಸ್ಯ**
**ಪ್ರತ್ಯಗ್ಬೋಧಾನಂದರೂಪಸ್ಯ ಬುದ್ಧೇಃ ।**
**ಭ್ರಾಂತ್ಯಾ ಪ್ರಾಪ್ತೋ ಜೀವಭಾವೋ ನ ಸತ್ಯೋ**
**ಮೋಹಾಪಾಯೇ ನಾಸ್ತ್ಯವಸ್ತುಸ್ವಭಾವಾತ್ ॥ ೧೯೬ ॥**

**ದ್ರಷ್ಟುಃ** = ಸಾಕ್ಷಿಯಾದ **ನಿರ್ಗುಣಸ್ಯ** = ನಿರ್ಗುಣನಾದ **ಅಕ್ರಿಯಸ್ಯ** = ಕ್ರಿಯಾಶೂನ್ಯನಾದ **ಪ್ರತ್ಯಕ್-ಬೋಧ-ಆನಂದ-ರೂಪಸ್ಯ** = ಒಳಗೆ ಚಿದಾನಂದಸ್ವರೂಪನಾಗಿ

ಹೊಳೆಯುವ **ಸ್ವಸ್ಯ** = ಆತ್ಮನಿಗೆ **ಬುದ್ಧೇಃ** = ಬುದ್ಧಿಯ **ಭ್ರಾಂತ್ಯಾ** = ಭ್ರಾಂತಿಯಿಂದ **ಜೀವಭಾವಃ** = ಜೀವತ್ವವು **ಪ್ರಾಪ್ತಃ** = ಉಂಟಾಗಿದೆ, **ನ ಸತ್ಯಃ** = ಸತ್ಯವಾದುದಲ್ಲ; **ಅವಸ್ತು-ಸ್ವಭಾವಾತ್** = ಸ್ವಭಾವದಿಂದಲೇ ಅಸತ್ಯವಾಗಿರುವುದರಿಂದ **ಮೋಹ-ಅಪಾಯೇ** = ಮೋಹವು ತೊಲಗಿದರೆ **ನ ಅಸ್ತಿ** = [ಇದೂ] ಇರುವುದಿಲ್ಲ.

**೧೯೬.** ಸಾಕ್ಷಿಸ್ವರೂಪನೂ ನಿರ್ಗುಣನೂ ಕ್ರಿಯಾಶೂನ್ಯನೂ ಒಳಗೆ ಚಿದಾನಂದಸ್ವರೂಪನಾಗಿ ಹೊಳೆಯುವವನೂ ಆದ ಆತ್ಮನಿಗೆ ಬುದ್ಧಿಯ ಭ್ರಾಂತಿಯಿಂದ ಜೀವತ್ವವು ಉಂಟಾಗಿದೆ, ಸತ್ಯವಾದುದಲ್ಲ. ಇದು ಸ್ವಭಾವದಿಂದಲೇ ಅಸತ್ಯವಾಗಿರುವುದರಿಂದ ಮೋಹವು ತೊಲಗಿದಮೇಲೆ ಇರುವುದೇ ಇಲ್ಲ.

**ಯಾವದ್ಭ್ರಾಂತಿಸ್ತಾವದೇವಾಸ್ಯ ಸತ್ತಾ**
**ಮಿಥ್ಯಾಜ್ಞಾನೋಜ್ಜೃಂಭಿತಸ್ಯ ಪ್ರಮಾದಾತ್ ।**
**ರಜ್ಜ್ವಾಂ ಸರ್ಪೋ ಭ್ರಾಂತಿಕಾಲೀನ ಏವ**
**ಭ್ರಾಂತೇರ್ನಾಶೇ ನೈವ ಸರ್ಪೋಽಪಿ ತದ್ವತ್ ॥ ೧೯೭ ॥**

**ರಜ್ಜ್ವಾಂ** = ಹಗ್ಗದಲ್ಲಿ **ಸರ್ಪಃ** = ಸರ್ಪವು **ಭ್ರಾಂತಿಕಾಲೀನಃ ಏವ** = ಭ್ರಾಂತಿ ಕಾಲದಲ್ಲಿ ಮಾತ್ರವೇ ಇರತಕ್ಕದ್ದು, **ಭ್ರಾಂತೇಃ ನಾಶೇ** [**ಸತಿ**] = ಭ್ರಾಂತಿಯು ನಾಶವಾದಾಗ **ಸರ್ಪಃ ಅಪಿ** = ಸರ್ಪವೂ ಕೂಡ **ನ ಏವ** = ಇರುವುದಿಲ್ಲ; **ತದ್ವತ್** = ಹಾಗೆಯೇ **ಪ್ರಮಾದಾತ್** = ಪ್ರಮಾದದಿಂದ **ಮಿಥ್ಯಾಜ್ಞಾನ-ಉಜ್ಜೃಂಭಿತಸ್ಯ ಅಸ್ಯ** = ಮಿಥ್ಯಾಜ್ಞಾನದ ಮೂಲಕ ಮೆರೆಯುತ್ತಿರುವ ಇದಕ್ಕೆ **ಯಾವತ್ ಭ್ರಾಂತಿಃ** = ಎಲ್ಲಿಯ ವರೆಗೆ ಭ್ರಾಂತಿಯಿರುವುದೋ **ತಾವತ್ ಏವ ಸತ್ತಾ** = ಅಲ್ಲಿಯ ವರೆಗೇ ಅಸ್ತಿತ್ವವು.

**೧೯೭.** ಹಗ್ಗದಲ್ಲಿ ಸರ್ಪವು ಭ್ರಾಂತಿಕಾಲದಲ್ಲಿ ಮಾತ್ರ ತೋರುತ್ತದೆ; ಭ್ರಾಂತಿಯು ನಾಶವಾದಾಗ ಸರ್ಪವೂ ಇರುವುದಿಲ್ಲ. ಹಾಗೆಯೇ ಪ್ರಮಾದದಿಂದ ಮಿಥ್ಯಾಜ್ಞಾನದ ಮೂಲಕ ಮೆರೆಯುತ್ತಿರುವ ಈ ಜೀವತ್ವಕ್ಕೆ ಎಲ್ಲಿಯ ವರೆಗೆ ಭ್ರಾಂತಿಯಿರುವುದೋ ಅಲ್ಲಿಯ ವರೆಗೆ ಮಾತ್ರ ಅಸ್ತಿತ್ವವಿರುವುದು.

[ಹಿಂದಿನ ಶ್ಲೋಕದ ನಾಲ್ಕನೆಯ ಪಾದದ ಅರ್ಥವನ್ನು ಇಲ್ಲಿ ವಿವರಿಸಿದೆ.]

**ಅನಾದಿತ್ವಮವಿದ್ಯಾಯಾಃ ಕಾರ್ಯಸ್ಯಾಪಿ ತಥೇಷ್ಯತೇ ।**
**ಉತ್ಪನ್ನಾಯಾಂ ತು ವಿದ್ಯಾಯಾಮಾವಿದ್ಯಕಮನಾದ್ಯಪಿ ॥ ೧೯೮ ॥**

**ಪ್ರಬೋಧೇ ಸ್ವಪ್ನವತ್ ಸರ್ವಂ ಸಹಮೂಲಂ ವಿನಶ್ಯತಿ ।**
**ಅನಾದ್ಯಪೀದಂ ನೋ ನಿತ್ಯಂ ಪ್ರಾಗಭಾವ ಇವ ಸ್ಫುಟಮ್**
**॥ ೧೯೯ ॥**

**ಅವಿದ್ಯಾಯಾಃ** = ಅವಿದ್ಯೆಯ **ಕಾರ್ಯಸ್ಯ ಅಪಿ**= ಕಾರ್ಯವೂ ಕೂಡ **ಅನಾದಿತ್ವಂ** = ಅನಾದಿ ಎಂಬುದು **ತಥಾ ಇಷ್ಯತೇ**= ಹೀಗೆಯೇ ಒಪ್ಪುತ್ತದೆ; **ವಿದ್ಯಾಯಾಂ ಉತ್ಪನ್ನಾಯಾಂ ತು** = ಆದರೆ ಜ್ಞಾನವು ಉತ್ಪನ್ನವಾದಾಗ **ಸರ್ವಮ್ ಆವಿದ್ಯಕಂ** = ಅವಿದ್ಯಾಕಾರ್ಯವೆಲ್ಲ **ಅನಾದಿ ಅಪಿ** = ಅನಾದಿಯಾಗಿದ್ದರೂ—**ಪ್ರಬೋಧೇ ಸ್ವಪ್ನವತ್**= ಎಚ್ಚೆತ್ತಾಗ ಸ್ವಪ್ನವು ಹೇಗೋ ಹಾಗೆ— **ಸಹಮೂಲಂ**= ಸಮೂಲವಾಗಿ **ವಿನಶ್ಯತಿ** = ನಾಶವಾಗುತ್ತದೆ; **ಇದಂ** = **ಈ** ಅವಿದ್ಯೆಯ ಕಾರ್ಯವು **ಅನಾದಿ ಅಪಿ** = ಅನಾದಿಯಾಗಿದ್ದರೂ **ಪ್ರಾಕ್-ಅಭಾವಃ ಇವ** = ಪ್ರಾಗಭಾವದಂತೆ **ನ ಉ ನಿತ್ಯಂ**= ನಿತ್ಯವಲ್ಲವೆಂಬುದು **ಸ್ಫುಟಂ** = ಸ್ಫುಟವಾಗಿದೆ.

**೧೯೮-೧೯೯.** ಹೀಗೆಯೇ ಅವಿದ್ಯೆಯ ಕಾರ್ಯವೂ ಕೂಡ ಅನಾದಿ ಎಂಬುದು ಒಪ್ಪುತ್ತದೆ. ಜ್ಞಾನವು ಉತ್ಪನ್ನವಾದಾಗ ಅವಿದ್ಯಾಕಾರ್ಯವೆಲ್ಲ ಅನಾದಿಯಾಗಿದ್ದರೂ—ಎಚ್ಚೆತ್ತಾಗ ಸ್ವಪ್ನವು ನಾಶವಾಗುವಂತೆ—ಸಮೂಲವಾಗಿ[1] ನಾಶವಾಗುತ್ತದೆ. ಅವಿದ್ಯೆಯ ಕಾರ್ಯವು ಅನಾದಿಯಾಗಿದ್ದರೂ ಪ್ರಾಗಭಾವದಂತೆ[2] ನಿತ್ಯವಲ್ಲವೆಂಬುದು ಸ್ಫುಟವಾಗಿದೆ.

[೧೯೨-೧೯೩ನೆಯ ಶ್ಲೋಕಗಳಲ್ಲಿ ಉಪಾಧಿಯು ಅನಾದಿಯಾಗಿರುವುದರಿಂದ ಅನಾದಿಯಾದ ಉಪಾಧಿಗೆ ನಾಶವನ್ನು ಅಪೇಕ್ಷಿಸಕೂಡದೆಂದು ಶಿಷ್ಯನು ಹೇಳಿದ್ದನು. ಅದಕ್ಕೆ ಉತ್ತರವನ್ನು ಇಲ್ಲಿ ಹೇಳಿದೆ.

[1] ತನ್ನ ಕಾರಣವಾದ ಅವಿದ್ಯೆಯೊಂದಿಗೆ.

[2] ಯಾವುದೊ ಒಂದು ಕಾಲದಲ್ಲಿ ಒಂದು ವಸ್ತುವು ಉತ್ಪನ್ನವಾದರೆ ಆ ವಸ್ತುವು ತನ್ನ ಉತ್ಪತ್ತಿಯ ಕಾಲಕ್ಕೆ ಮೊದಲು ಇರಲಿಲ್ಲವೆಂಬುದು ಸ್ಫುಟವಾಗಿದೆ. ಈ ಪ್ರಾಕ್-ಅಭಾವಕ್ಕೆ ಆದಿಯಿಲ್ಲ. ಆದರೆ ವಸ್ತುವು ಉತ್ಪನ್ನವಾದ ಕೂಡಲೇ ಪ್ರಾಕ್-ಅಭಾವವು ನಾಶವಾಗುತ್ತದೆ. ಹೀಗೆಯೇ ಅವಿದ್ಯೆಗೆ ಆದಿಯಿಲ್ಲದಿದ್ದರೂ ಜ್ಞಾನವು ಉತ್ಪನ್ನವಾದ ಕೂಡಲೇ ಅದು ಮಾಯವಾಗುತ್ತದೆ.]

**ಅನಾದೇರಪಿ ವಿಧ್ವಂಸಃ ಪ್ರಾಗಭಾವಸ್ಯ ವೀಕ್ಷಿತಃ।**
**ಯದ್ಬುದ್ಧ್ಯುಪಾಧಿಸಂಬಂಧಾತ್ ಪರಿಕಲ್ಪಿತಮಾತ್ಮನಿ ॥ ೨೦೦ ॥**

**ಜೀವತ್ವಂ ನ ತತೋಽನ್ಯಸ್ತು ಸ್ವರೂಪೇಣ ವಿಲಕ್ಷಣಃ ।**
**ಸಂಬಂಧಸ್ತ್ವಾತ್ಮನೋ ಬುದ್ಧ್ಯಾ ಮಿಥ್ಯಾಜ್ಞಾನ-ಪುರಃಸರಃ ॥ ೨೦೧ ॥**

**ಅನಾದೇಃ ಅಪಿ** = ಅನಾದಿಯಾಗಿದ್ದರೂ **ಪ್ರಾಗಭಾವಸ್ಯ** = ಪ್ರಾಗಭಾವದ ುಧ್ವಂಸಃ=ನಾಶವು ವೀಕ್ಷಿತಃ=ನೋಡಲ್ಪಟ್ಟಿದೆ; **ಬುದ್ಧಿ-ಉಪಾಧಿ-ಸಂಬಂಧಾತ್**= ುದ್ಧಿಯೆಂಬ ಉಪಾಧಿಯ ಸಂಬಂಧದಿಂದ **ಯುತ್** = ಯಾವುದು **ಆತ್ಮನಿ** = ಆತ್ಮ ಲ್ಲಿ **ಪರಿಕಲ್ಪಿತಂ** = ಕಲ್ಪಿತವಾಗಿರುವುದೊ **ಜೀವತ್ವಂ** = [ಅ] ಜೀವತ್ವವು **ನ** = ಜವಲ್ಲ, **ತತಃ** = ಅದಕ್ಕಿಂತ **ಅನ್ಯಃ** = ಬೇರೆಯಾದ [ಆತ್ಮನು] **ಸ್ವರೂಪೇಣ** = ್ವರೂಪದಿಂದ **ವಿಲಕ್ಷಣಃ** = ವಿಲಕ್ಷಣನು; **ತು** = ಆದರೆ **ಬುದ್ಧ್ಯಾ** = ಬುದ್ಧಿ ೊಡನೆ **ಆತ್ಮನಃ** = ಆತ್ಮನ **ಸಂಬಂಧಃ** = ಸಂಬಂಧವು **ಮಿಥ್ಯಾಜ್ಞಾನ-ಪುರಃಸರಃ**= ುಥ್ಯಾಜ್ಞಾನಪೂರ್ವಕವಾದದ್ದು.

**೨೦೦-೨೦೧.** ಪ್ರಾಗಭಾವವು ಅನಾದಿಯಾಗಿದ್ದರೂ ಅದಕ್ಕೆ ನಾಶವಿರು ುದು ಕಂಡುಬರುತ್ತದೆ. ಬುದ್ಧಿಯೆಂಬ ಉಪಾಧಿಯ ಸಂಬಂಧದಿಂದ ತ್ಮನಲ್ಲಿ ಯಾವ ಜೀವತ್ವವು ಪರಿಕಲ್ಪಿತವಾಗಿದೆಯೊ ಅದು ನಿಜವಲ್ಲ; ದರೆ ಉಪಾಧಿಗಿಂತ ಬೇರೆಯಾದ ಆತ್ಮನು ಸ್ವರೂಪದಿಂದ ವಿಲಕ್ಷಣನು. ುದ್ಧಿಯೊಡನೆ ಆತ್ಮನ ಸಂಬಂಧವು ಮಿಥ್ಯಾಜ್ಞಾನಪೂರ್ವಕವಾದದ್ದು.

**ನಿವೃತ್ತಿರ್ಭವೇತ್ತಸ್ಯ ಸಮ್ಯಗ್ಜ್ಞಾನೇನ ನಾನ್ಯಥಾ ।**
**್ರಹ್ಮಾತ್ಮೈಕತ್ವವಿಜ್ಞಾನಂ ಸಮ್ಯಗ್ಜ್ಞಾನಂ ಶ್ರುತೇರ್ಮತಮ್**
**॥ ೨೦೨ ॥**

**ತಸ್ಯ** = ಆ ಉಪಾಧಿಯ **ವಿನಿವೃತ್ತಿಃ** = ನಿವೃತ್ತಿಯು **ಸಮ್ಯಗ್ಜ್ಞಾನೇನ** = ಮ್ಯಗ್ಜ್ಞಾನದಿಂದ **ಭವೇತ್** = ಉಂಟಾಗತಕ್ಕದ್ದು, **ನ ಅನ್ಯಥಾ** = ಬೇರೆ ರೀತಿ ುಂದಲ್ಲ, **ಬ್ರಹ್ಮ-ಆತ್ಮ-ಏಕತ್ವ-ವಿಜ್ಞಾನಂ** = ಜೀವ-ಬ್ರಹ್ಮರ ಅಭೇದಜ್ಞಾನವೇ **ಮ್ಯಕ್-ಜ್ಞಾನಂ** = ಸಮ್ಯಗ್ಜ್ಞಾನವೆಂದು **ಶ್ರುತೇಃ** = ಶ್ರುತಿಯ **ಮತಂ** = ಭಿಪ್ರಾಯವು.

**೨೦೨.** ಆ ಉಪಾಧಿಯ ನಿವೃತ್ತಿಯು ಸಮ್ಯಗ್ಜ್ಞಾನದಿಂದ ಉಂಟಾಗ ೇಕೇ ಹೊರತು ಬೇರೆ ರೀತಿಯಿಂದಲ್ಲ. ಜೀವಾತ್ಮ ಪರಮಾತ್ಮ—ಇವರ ಅಭೇದ ್ಞಾನವೇ ಸಮ್ಯಗ್ಜ್ಞಾನವೆಂದು ಶ್ರುತಿಯ ಅಭಿಪ್ರಾಯವಾಗಿರುತ್ತದೆ.[೧]

[[೧] 'ನಾನು ಬ್ರಹ್ಮವಾಗಿರುತ್ತೇನೆ' **ಅಹಂ ಬ್ರಹ್ಮಾಸ್ಮಿ** (ಬೃಹದಾರಣ್ಯಕ ಉ. ೧. . ೧೦), 'ಅದು ನೀನಾಗಿರುವೆ' **ತತ್ ತ್ವಮಸಿ** (ಛಾಂದೋಗ್ಯ ಉ. ೬. ೮. ೭), ಈ ಆತ್ಮನು ಬ್ರಹ್ಮ' **ಅಯಮಾತ್ಮಾ ಬ್ರಹ್ಮ** (ಮಾಂಡೂಕ್ಯ ಉ. ೧. ೨), ್ರಜ್ಞಾನವು ಬ್ರಹ್ಮ' **ಪ್ರಜ್ಞಾನಂ ಬ್ರಹ್ಮ** (ಐತರೇಯ ಉ. ೩. ೧. ೩).]

**ದಾತ್ಮಾನಾತ್ಮನೋಃ ಸಮ್ಯಗ್ವಿವೇಕೇನೈವ ಸಿಧ್ಯತಿ ।**
**ತೋ ವಿವೇಕಃ ಕರ್ತವ್ಯಃ ಪ್ರತ್ಯಗಾತ್ಮಾಸದಾತ್ಮನೋಃ ॥ ೨೦೩ ॥**

ತತ್ = ಆ ಸಮ್ಯಗ್‌ಜ್ಞಾನವು **ಆತ್ಮ-ಅನಾತ್ಮನೋಃ** = ಆತ್ಮ, ಅನಾತ್ಮ— ಇವುಗಳ **ಸಮ್ಯಕ್-ವಿವೇಕೇನ ಏವ** = ಸರಿಯಾದ ವಿವೇಚನದಿಂದಲೇ **ಸಿಧ್ಯತಿ** = ಸಿದ್ಧಿಸುತ್ತದೆ; **ತತಃ** = ಆದುದರಿಂದ **ಪ್ರತ್ಯಗಾತ್ಮ-ಅಸದಾತ್ಮನೋಃ** = ಪ್ರತ್ಯಗಾತ್ಮ ಮತ್ತು ಮಿಥ್ಯಾತ್ಮ ಇವರ **ವಿವೇಕಃ** = ವಿವೇಚನವು **ಕರ್ತವ್ಯಃ** = ಮಾಡತಕ್ಕದ್ದು.

**೨೦೩.** ಜೀವಾತ್ಮ-ಪರಮಾತ್ಮರ ಅಭೇದಜ್ಞಾನವು ಆತ್ಮ-ಅನಾತ್ಮ-ವಸ್ತುಗಳ ವಿವೇಚನದಿಂದಲೇ ಸಿದ್ಧಿಸುತ್ತದೆ. ಆದುದರಿಂದ ಪ್ರತ್ಯಗಾತ್ಮ ಮತ್ತು ಅನಾತ್ಮ— ಇವೆರಡರ ವಿವೇಚನವನ್ನು ಮಾಡಬೇಕು.

**ಜಲಂ ಪಂಕವದತ್ಯಂತಂ ಪಂಕಾಪಾಯೇ ಜಲಂ ಸ್ಫುಟಮ್ ।**
**ಯಥಾ ಭಾತಿ ತಥಾಽಽತ್ಮಾಪಿ ದೋಷಾಭಾವೇ ಸ್ಫುಟಪ್ರಭಃ**
**॥ ೨೦೪ ॥**

**ಅತ್ಯಂತಂ ಪಂಕವತ್ ಜಲಂ** = ಬಹಳ ಕೆಸರಾಗಿರುವ ನೀರು **ಪಂಕ-ಅಪಾಯೇ** = ಕೆಸರು ಹೋದಮೇಲೆ **ಯಥಾ** = ಹೇಗೆ **ಜಲಂ** = ನೀರು **ಸ್ಫುಟಂ ಭಾತಿ** = ಸ್ವಚ್ಛವಾಗಿ ತೋರುವುದೊ **ತಥಾ** = ಹಾಗೆಯೇ **ಆತ್ಮಾ ಅಪಿ** = ಆತ್ಮನೂ ಕೂಡ **ದೋಷ-ಅಭಾವೇ** = ದೋಷವಿಲ್ಲದಿರುವಾಗ **ಸ್ಫುಟಪ್ರಭಃ** = ಸ್ವಚ್ಛವಾಗಿ ಪ್ರಕಾಶಿಸುತ್ತಾನೆ.

**೨೦೪.** ಬಹಳ ಕೆಸರಾಗಿರುವ ನೀರು ಕೆಸರು ಹೋದಮೇಲೆ ಹೇಗೆ ಸ್ವಚ್ಛವಾಗಿ ತೋರುವುದೊ ಹಾಗೆಯೇ ಆತ್ಮನೂ ಕೂಡ ದೋಷವಿಲ್ಲದಿರುವಾಗ ಸ್ಫುಟವಾಗಿ ಪ್ರಕಾಶಿಸುತ್ತಾನೆ.[೧]

[[೧] '(ಆತ್ಮನು) ನೀರಿನಂತೆ (ಸ್ವಚ್ಛನಾಗಿರುತ್ತಾನೆ)' **ಸಲಿಲ ಏಕಃ** (ಬೃಹದಾರಣ್ಯಕ ಉ. ೪. ೩. ೩೨). ]

**ಅಸನ್ನಿವೃತ್ತೌ ತು ಸದಾತ್ಮನಾ ಸ್ಫುಟಂ**
**ಪ್ರತೀತಿರೇತಸ್ಯ ಭವೇತ್ ಪ್ರತೀಚಃ ।**
**ತತೋ ನಿರಾಸಃ ಕರಣೀಯ ಏವಾ-**
**ಸದಾತ್ಮನಃ ಸಾಧ್ವಹಮಾದಿವಸ್ತುನಃ ॥ ೨೦೫ ॥**

**ಅಸತ್-ನಿವೃತ್ತೌ ತು** = ಅಸದ್ವಸ್ತುವು ತೊಲಗಿದಾಗ **ಏತಸ್ಯ ಪ್ರತೀಚಃ** = ಈ ಪ್ರತ್ಯಗಾತ್ಮನಿಗೆ **ಸದಾತ್ಮನಾ** = ಸದ್ರೂಪದಿಂದ **ಪ್ರತೀತಿಃ** = ಸಾಕ್ಷಾತ್ಕಾರವು **ಭವೇತ್** = ಉಂಟಾಗುತ್ತದೆ; **ತತಃ** = ಆದುದರಿಂದ **ಅಸದಾತ್ಮನಃ** = ಅಸದ್ರೂಪವಾದ **ಅಹಮಾದಿ-ವಸ್ತುನಃ** = ಅಹಂಕಾರಾದಿ ವಸ್ತುವಿನ **ನಿರಾಸಃ** = ನಿರಾಕರಣವು **ಸಾಧು ಕರಣೀಯಃ ಏವ** = ಮಾಡಲ್ಪಡಲೇ ಬೇಕು.

**೨೦೫.** ಅಸದ್ವಸ್ತುವು ತೊಲಗಿದಾಗ ಈ ಪ್ರತ್ಯಗಾತ್ಮನಿಗೆ ಸದ್ರೂಪದಿಂದ ಸಾಕ್ಷಾತ್ಕಾರವು ಉಂಟಾಗುತ್ತದೆ. ಆದುದರಿಂದ ಅಸದ್ರೂಪವಾದ ಅಹಂಕಾರಾದಿ ವಸ್ತುಗಳ ನಿರಾಕರಣವನ್ನು ಮಾಡಲೇ ಬೇಕು.

**ಅತೋ ನಾಯಂ ಪರಾತ್ಮಾ ಸ್ಯಾದ್ವಿಜ್ಞಾನಮಯ-ಶಬ್ದಭಾಕ್ ।**
**ವಿಕಾರಿತ್ವಾಜ್ಜಡತ್ವಾಚ್ಚ ಪರಿಚ್ಛಿನ್ನತ್ವಹೇತುತಃ ।**
**ದೃಶ್ಯತ್ವಾದ್ ವ್ಯಭಿಚಾರಿತ್ವಾನ್ನಾನಿತ್ಯೋ ನಿತ್ಯ ಇಷ್ಯತೇ ॥ ೨೦೬ ॥**

**ಅತಃ** = ಆದುದರಿಂದ **ಅಯಂ ವಿಜ್ಞಾನಮಯ-ಶಬ್ದಭಾಕ್** = ಈ ವಿಜ್ಞಾನಮಯಶಬ್ದವಾಚ್ಯವಾದ [ಕೋಶವು] **ಪರಾತ್ಮಾ ನ ಸ್ಯಾತ್** = ಪರಮಾತ್ಮನಾಗಲಾರದು: **ವಿಕಾರಿತ್ವಾತ್** = ವಿಕಾರಗಳುಳ್ಳದ್ದರಿಂದಲೂ, **ಜಡತ್ವಾತ್ ಚ** = ಜಡವಾಗಿರುವುದರಿಂದಲೂ **ಪರಿಚ್ಛಿನ್ನತ್ವ-ಹೇತುತಃ** = ಪರಿಚ್ಛಿನ್ನವಾಗಿರುವುದೆಂಬ ಕಾರಣದಿಂದಲೂ **ದೃಶ್ಯತ್ವಾತ್** = ದೃಶ್ಯವಾಗಿರುವುದರಿಂದಲೂ **ವ್ಯಭಿಚಾರಿತ್ವಾತ್** = ಯಾವಾಗಲೂ ತೋರುವುದಿಲ್ಲವಾದುದರಿಂದಲೂ; **ಅನಿತ್ಯಃ** = ಅನಿತ್ಯವಸ್ತುವು **ನಿತ್ಯಃ** = ನಿತ್ಯವೆಂದು **ನ ಇಷ್ಯತೇ** = ಹೇಳಲಾಗುವುದಿಲ್ಲ.

**೨೦೬.** ಆದುದರಿಂದ ಈ ವಿಜ್ಞಾನಮಯಕೋಶವು ಪರಮಾತ್ಮನಾಗಲಾರದು: ಏಕೆಂದರೆ ಇದು ವಿಕಾರಗಳನ್ನು ಪಡೆಯುತ್ತದೆ, ಜಡವಾಗಿರುತ್ತದೆ, ಪರಿಚ್ಛಿನ್ನವಾಗಿದೆ, ದೃಶ್ಯವಸ್ತುವಾಗಿದೆ ಮತ್ತು ಯಾವಾಗಲೂ ತೋರುವಂಥದ್ದಲ್ಲ.[೧] ಅನಿತ್ಯವಸ್ತುವನ್ನು ನಿತ್ಯವೆಂದು ಹೇಳಲಾಗುವುದಿಲ್ಲ.

[ವಿಜ್ಞಾನಮಯಕೋಶದ ಅನಾತ್ಮತ್ವವನ್ನು ಇಲ್ಲಿ ಉಪಸಂಹರಿಸಿದೆ.
೧ ಸುಷುಪ್ತಿಯಲ್ಲಿ ಆತ್ಮಪ್ರಕಾಶವಿದ್ದರೂ ವಿಜ್ಞಾನಮಯವು ತೋರುವುದಿಲ್ಲ.]

**ಆನಂದ-ಪ್ರತಿಬಿಂಬ-ಚುಂಬಿತ-ತನುರ್ವೃತ್ತಿಸ್ತಮೋಜ್ಜೃಂಭಿತಾ ।**
**ಸ್ಯಾದಾನಂದಮಯಃ ಪ್ರಿಯಾದಿಗುಣಕಃ ಸ್ವೇಷ್ಟಾರ್ಥ-ಲಾಭೋದಯಃ ।**
**ಪುಣ್ಯಸ್ಯಾನುಭವೇ ವಿಭಾತಿ ಕೃತಿನಾಮಾನಂದರೂಪಃ ಸ್ವಯಂ ।**
**ಭೂತ್ವಾಽಽನಂದತಿ ಯತ್ರ ಸಾಧು ತನುಭೃನ್ಮಾತ್ರಃ ಪ್ರಯತ್ನಂ ವಿನಾ ॥ ೨೦೭ ॥**

**ಆನಂದ-ಪ್ರತಿಬಿಂಬ-ಚುಂಬಿತ-ತನುಃ** = ಆನಂದದ ಪ್ರತಿಬಿಂಬದಿಂದ ವ್ಯಾಪ್ತವಾದ ಸ್ವರೂಪವುಳ್ಳ **ತಮೋಜ್ಜೃಂಭಿತಾ** = [ಅವಿದ್ಯೆಯೆಂಬ] ತಮಸ್ಸಿನಿಂದ ಹುಟ್ಟಿದ **ವೃತ್ತಿಃ** = ವೃತ್ತಿಯು **ಆನಂದಮಯಃ ಸ್ಯಾತ್** = ಆನಂದಮಯಕೋಶವಾಗುತ್ತದೆ; [ಇದು] **ಪ್ರಿಯಾದಿಗುಣಕಃ** = ಪ್ರಿಯವೇ ಮೊದಲಾದ ಗುಣಗಳುಳ್ಳದ್ದು. **ಸ್ವ-**

**ಇಷ್ಟಾರ್ಥ-ಲಾಭೋದಯಃ** = ಇಷ್ಟಾರ್ಥವು ಕೈಗೂಡಿದಾಗ ಉಂಟಾಗತಕ್ಕದ್ದು, **ಕೃತಿನಾಂ** = ಪುಣ್ಯವಂತರಿಗೆ **ಪುಣ್ಯಸ್ಯ** = ಪುಣ್ಯದ **ಅನುಭವೇ** = ಅನುಭವವಾದಾಗ **ವಿಭಾತಿ** = ತೋರಿಕೊಳ್ಳುತ್ತದೆ, **ಯತ್ರ** = ಯಾವುದರಲ್ಲಿ **ತನುಭೃತ್-ಮಾತ್ರಃ** = ಶರೀರ ಮಾತ್ರವೇ ಉಳ್ಳವನು, **ಸ್ವಯಮ್ ಆನಂದರೂಪಃ** = ತಾನೇ ಆನಂದರೂಪನಾಗಿ **ಪ್ರಯತ್ನಂ ವಿನಾ** = ಪ್ರಯತ್ನವಿಲ್ಲದೆಯೇ **ಸಾಧು ನಂದತಿ** = ಚೆನ್ನಾಗಿ ಸಂತೋಷಿಸುತ್ತಾನೆಯೊ.

**೨೦೭.** ಆನಂದದ ಪ್ರತಿಬಿಂಬದಿಂದ ವ್ಯಾಪ್ತವಾದ ಸ್ವರೂಪವುಳ್ಳ ಅವಿದ್ಯೆಯೆಂಬ ತಮಸ್ಸಿನಿಂದ ಹುಟ್ಟಿದ ವೃತ್ತಿಯು[೧] ಆನಂದಮಯಕೋಶವಾಗುತ್ತದೆ.[೨] ಇದು ಪ್ರಿಯವೇ ಮೊದಲಾದ ಗುಣಗಳನ್ನು ಪಡೆದಿದೆ,[೩] ಇಷ್ಟಾರ್ಥವು ಕೈಗೂಡಿದಾಗ ಉದಯವಾಗುತ್ತದೆ, ಪುಣ್ಯವಂತರಿಗೆ ಪುಣ್ಯಕರ್ಮಫಲದ ಅನುಭವವಾದಾಗ ತೋರಿಕೊಳ್ಳುತ್ತದೆ; ಈ ಆನಂದಮಯಕೋಶದಲ್ಲಿ ಶರೀರವುಳ್ಳವನು ಪ್ರಯತ್ನಮಾಡದೆಯೇ[೪] ಸ್ವಯಂ ಆನಂದರೂಪನಾಗಿ ಚೆನ್ನಾಗಿ ಸಂತೋಷಿಸುತ್ತಾನೆ.

[ಇಲ್ಲಿಂದ ಆನಂದಮಯಕೋಶವನ್ನು ನಿರೂಪಿಸಿದೆ.

೧ ಎಂದರೆ ಅವಿದ್ಯಾಪರಿಣಾಮರೂಪವಾದ ವೃತ್ತಿಯು; ಇದರಲ್ಲಿ ಆತ್ಮಚೈತನ್ಯವು ಪ್ರತಿಬಿಂಬಿಸುತ್ತದೆ.

೨ 'ಆ ಈ ವಿಜ್ಞಾನಮಯನಾದ ಆತ್ಮನಿಗಿಂತ ಅನ್ಯನೂ ಅಂತರನೂ ಆನಂದಮಯನೂ ಆದ ಆತ್ಮನಿರುವನು' **ತಸ್ಮಾದ್ವಾ ಏತಸ್ಮಾದ್ವಿಜ್ಞಾನಮಯಾದನ್ಯೋಽಂತರ ಆತ್ಮಾಽನಂದಮಯಃ** (ತೈತ್ತಿರೀಯ ಉ. ೨. ೫).

೩ 'ಅವನಿಗೆ ಪ್ರಿಯವೇ ತಲೆ . . . ಆನಂದವು ಮಧ್ಯಭಾಗ' **ತಸ್ಯ ಪ್ರಿಯಮೇವ ಶಿರಃ . . . ಆನಂದ ಆತ್ಮಾ** (ತೈತ್ತಿರೀಯ ಉ. ೨. ೫).

೪ ತಾತ್ಕಾಲಿಕ-ಪ್ರಯತ್ನವಿಲ್ಲದೆ ಎಂದರ್ಥ. ಈಗಿನ ಅನುಭವವು ಪೂರ್ವ ಪ್ರಯತ್ನದ ಫಲವೆಂದು ಅರಿತುಕೊಳ್ಳಬೇಕು.]

**ಆನಂದಮಯಕೋಶಸ್ಯ ಸುಷುಪ್ತೌ ಸ್ಫೂರ್ತಿರುತ್ಕಟಾ ।**
**ಸ್ವಪ್ನಜಾಗರಯೋರೀಷದಿಷ್ಟಸಂದರ್ಶನಾದಿನಾ ॥ ೨೦೮ ॥**

**ಸುಷುಪ್ತೌ** = ಸುಷುಪ್ತಿಯಲ್ಲಿ **ಆನಂದಮಯಕೋಶಸ್ಯ** = ಆನಂದಮಯಕೋಶದ **ಸ್ಫೂರ್ತಿಃ** = ಸ್ಫೂರ್ತಿಯು **ಉತ್ಕಟಾ** = ಪೂರ್ಣವಾದದ್ದು; **ಸ್ವಪ್ನಜಾಗರಯೋಃ** = ಸ್ವಪ್ನ-ಜಾಗ್ರದವಸ್ಥೆಗಳಲ್ಲಿ **ಇಷ್ಟಸಂದರ್ಶನಾದಿನಾ** = ಪ್ರಿಯವಸ್ತುಗಳನ್ನು ನೋಡಿದ್ದೇ ಮೊದಲಾದುವುಗಳಿಂದ [ಸ್ಫೂರ್ತಿಯು] **ಈಷತ್** = ಸ್ವಲ್ಪವಾಗಿ [ಉಂಟಾಗುತ್ತದೆ].

**೨೦೮.** ಸುಷುಪ್ತಿಯಲ್ಲಿ ಆನಂದಮಯಕೋಶದ ಸ್ಫೂರ್ತಿಯು ಪೂರ್ಣವಾಗಿರುತ್ತದೆ. ಕನಸು ಎಚ್ಚರ— ಇವುಗಳಲ್ಲಿ ಪ್ರಿಯವಸ್ತುಗಳ ದರ್ಶನವೇ[೧] ಮೊದಲಾದ ಕಾರಣಗಳಿಂದ ಸ್ವಲ್ಪವಾಗಿ ತೋರುತ್ತದೆ.

[[೧] ಎಚ್ಚರದಲ್ಲಿ ಪ್ರತ್ಯಕ್ಷಾನುಭವದಿಂದಲೂ ಕನಸಿನಲ್ಲಿ ಸ್ಮೃತಿಸಂಸ್ಕಾರದಿಂದಲೂ.]

**ನೈವಾನಂದಮಯಃ ಪರಾತ್ಮಾ**
**ಸೋಪಾಧಿಕತ್ವಾತ್ ಪ್ರಕೃತೇರ್ವಿಕಾರಾತ್ ।**
**ಕಾರ್ಯತ್ವಹೇತೋಃ ಸುಕೃತಕ್ರಿಯಾಯಾ**
**ವಿಕಾರ-ಸಂಘಾತ-ಸಮಾಹಿತತ್ವಾತ್ ॥ ೨೦೯ ॥**

**ಅಯಮ್ ಆನಂದಮಯಃ** = ಈ ಆನಂದಮಯಕೋಶವು **ಸೋಪಾಧಿಕತ್ವಾತ್** = ಉಪಾಧಿಯನ್ನು ಹೊಂದಿರುವುದರಿಂದಲೂ **ಪ್ರಕೃತೇಃ ವಿಕಾರಾತ್** = ಪ್ರಕೃತಿಯ ವಿಕಾರವಾಗಿರುವುದರಿಂದಲೂ **ಸುಕೃತಕ್ರಿಯಾಯಾಃ** = ಪುಣ್ಯಕರ್ಮದ **ಕಾರ್ಯತ್ವಹೇತೋಃ** = ಫಲವಾಗಿರುವುದರಿಂದಲೂ **ವಿಕಾರ-ಸಂಘಾತ-ಸಮಾಹಿತತ್ವಾತ್** = ವಿಕಾರಗಳಾದ ಇತರ ಕೋಶಗಳಿಂದ ಆವರಿಸಲ್ಪಟ್ಟಿರುವುದರಿಂದಲೂ **ಪರಾತ್ಮಾ** = ಪರಮಾತ್ಮನು **ನ ಏವ** = ಅಲ್ಲವೇ ಅಲ್ಲ.

**೨೦೯.** ಈ ಆನಂದಮಯಕೋಶವೂ ಪರಮಾತ್ಮನಲ್ಲ; ಏಕೆಂದರೆ ಇದು ಉಪಾಧಿಯಿಂದ ಕೂಡಿದೆ, ಪ್ರಕೃತಿಯ ವಿಕಾರವಾಗಿದೆ, ಪುಣ್ಯಕರ್ಮದ ಫಲವಾಗಿದೆ ಮತ್ತು ವಿಕಾರಗಳಾದ ಇತರ ಕೋಶಗಳಿಂದ ಆವರಿಸಲ್ಪಟ್ಟಿದೆ.

[ಇಲ್ಲಿ ಆನಂದಮಯಕೋಶದ ಅನಾತ್ಮತ್ವವನ್ನು ಹೇಳಿದೆ.]

**ಪಂಚಾನಾಮಪಿ ಕೋಶಾನಾಂ ನಿಷೇಧೇ ಯುಕ್ತಿತಃ ಶ್ರುತೇಃ ।**
**ತನ್ನಿಷೇಧಾವಧಿಃ ಸಾಕ್ಷೀ ಬೋಧರೂಪೋಽವಶಿಷ್ಯತೇ ॥ ೨೧೦ ॥**

**ಶ್ರುತೇಃ** = ಶ್ರುತಿಯಿಂದಲೂ **ಯುಕ್ತಿತಃ** = ಯುಕ್ತಿಯಿಂದಲೂ **ಪಂಚಾನಾಂ ಕೋಶಾನಾಮ್ ಅಪಿ** = ಪಂಚಕೋಶಗಳ **ನಿಷೇಧೇ [ಸತಿ]** = ನಿರಾಕರಣವು ಆದಾಗ **ತತ್-ನಿಷೇಧ-ಅವಧಿಃ** = ಅವುಗಳ ನಿಷೇಧವೇ ಅವಧಿಯಾಗಿರುವ **ಸಾಕ್ಷೀ** = ಸಾಕ್ಷಿರೂಪನಾಗಿರುವ **ಬೋಧರೂಪಃ** = ಕೇವಲ ಜ್ಞಾನಸ್ವರೂಪನಾಗಿರುವ [ಪರಮಾತ್ಮನು] **ಅವಶಿಷ್ಯತೇ** = ಉಳಿದುಕೊಳ್ಳುತ್ತಾನೆ.

**೨೧೦.** ಶ್ರುತಿಯಿಂದಲೂ[೧] ಯುಕ್ತಿಯಿಂದಲೂ ಈ ಐದು ಕೋಶಗಳನ್ನೂ ನಿರಾಕರಿಸಿದರೆ, ಅವುಗಳ ನಿಷೇಧವೇ ಎಲ್ಲೆಯಾಗಿ ಸಾಕ್ಷಿಯೂ ಜ್ಞಾನಸ್ವರೂಪನೂ ಆದ ಪರಮಾತ್ಮನು ಉಳಿದುಕೊಳ್ಳುತ್ತಾನೆ.

[[೧] 'ಇದಲ್ಲ ಇದಲ್ಲ' **ನೇತಿ ನೇತಿ** (ಬೃಹದಾರಣ್ಯಕ ಉ. ೨. ೩. ೬) .]

**ಯೋಽಯಮಾತ್ಮಾ ಸ್ವಯಂಜ್ಯೋತಿಃ ಪಂಚಕೋಶವಿಲಕ್ಷಣಃ ।**
**ಅವಸ್ಥಾತ್ರಯಸಾಕ್ಷೀ ಸನ್ನಿರ್ವಿಕಾರೋ ನಿರಂಜನಃ ।**
**ಸದಾನಂದಃ ಸ ವಿಜ್ಞೇಯಃ ಸ್ವಾತ್ಮತ್ವೇನ ವಿಪಶ್ಚಿತಾ ॥ ೨೧೧ ॥**

**ಸ್ವಯಂಜ್ಯೋತಿಃ** = ಸ್ವಯಂಪ್ರಕಾಶನಾಗಿರುವ **ಪಂಚಕೋಶವಿಲಕ್ಷಣಃ** = ಪಂಚಕೋಶಗಳಿಗಿಂತ ಭಿನ್ನನಾಗಿರುವ **ಅವಸ್ಥಾತ್ರಯಸಾಕ್ಷೀ ಸನ್** = ಮೂರು ಅವಸ್ಥೆಗಳಿಗೂ ಸಾಕ್ಷಿಯಾಗಿರುವ **ನಿರ್ವಿಕಾರಃ** = ನಿರ್ವಿಕಾರನಾಗಿರುವ **ನಿರಂಜನಃ** = ನಿರ್ಲಿಪ್ತನಾಗಿರುವ **ಸದಾನಂದಃ** = ನಿತ್ಯಾನಂದಸ್ವರೂಪನಾಗಿರುವ **ಯಃ ಅಯಮ್ ಆತ್ಮಾ** = ಯಾವ ಈ ಆತ್ಮನಿರುವನೊ **ಸಃ** = ಅವನೇ **ವಿಪಶ್ಚಿತಾ** = ವಿವೇಕಕುಶಲನಿಂದ **ಸ್ವ-ಆತ್ಮತ್ವೇನ** = ತನ್ನ ಆತ್ಮಸ್ವರೂಪದಿಂದ **ವಿಜ್ಞೇಯಃ** = ತಿಳಿಯಲ್ಪಡತಕ್ಕವನು.

**೨೧೧.** ಸ್ವಯಂಪ್ರಕಾಶನೂ ಪಂಚಕೋಶಗಳಿಗಿಂತ ಭಿನ್ನನೂ[೧] ಅವಸ್ಥಾತ್ರಯಸಾಕ್ಷಿಯೂ ವಿಕಾರಶೂನ್ಯನೂ ನಿರ್ಲಿಪ್ತನೂ ನಿತ್ಯಾನಂದಸ್ವರೂಪನೂ ಆದ ಯಾವ ಈ ಆತ್ಮನಿರುವನೊ[೨] ಅವನೇ ತನ್ನ ಆತ್ಮನೆಂದು ವಿವೇಕಕುಶಲನು ಅರಿತುಕೊಳ್ಳಬೇಕು.

[೧ ಏತಮನ್ನಮಯಮಾತ್ಮಾನಮುಪಸಂಕ್ರಾಮತಿ ಎಂಬಲ್ಲಿಂದ ಏತಮಾನಂದಮಯಮಾತ್ಮಾನಮುಪಸಂಕ್ರಾಮತಿ (ತೈತ್ತಿರೀಯ ಉ. ೩. ೮) ಎಂಬಲ್ಲಿಯ ವರೆಗೆ ಸಂಕ್ರಮಣ-ಶಬ್ದವು ಆತ್ಮನು ಪಂಚಕೋಶಗಳಿಗಿಂತ ಭಿನ್ನನೆಂದು ತಿಳಿಸುತ್ತದೆ.
೨ ಇವನನ್ನೇ ತೈತ್ತಿರೀಯೋಪನಿಷತ್ತು 'ಬ್ರಹ್ಮವು ಪುಚ್ಛ ಮತ್ತು ಪ್ರತಿಷ್ಠೆ' (೨. ೫) ಎಂದು ಹೇಳುತ್ತದೆ.]

## ಶಿಷ್ಯ ಉವಾಚ

**ಮಿಥ್ಯಾತ್ವೇನ ನಿಷಿದ್ಧೇಷು ಕೋಶೇಷ್ವೇತೇಷು ಪಂಚಸು ।**
**ಸರ್ವಾಭಾವಂ ವಿನಾ ಕಿಂಚಿನ್ನ ಪಶ್ಯಾಮ್ಯತ್ರ ಹೇ ಗುರೋ ।**
**ವಿಜ್ಞೇಯಂ ಕಿಮು ವಸ್ತ್ವಸ್ತಿ ಸ್ವಾತ್ಮನಾಽತ್ರ ವಿಪಶ್ಚಿತಾ ॥ ೨೧೨ ॥**

**ಶಿಷ್ಯಃ ಉವಾಚ** = ಶಿಷ್ಯನು ಪ್ರಶ್ನಿಸಿದನು—**ಹೇ ಗುರೋ** = ಹೇ ಗುರುವೆ, **ಏತೇಷು ಪಂಚಸು ಕೋಶೇಷು** = ಈ ಪಂಚಕೋಶಗಳು **ಮಿಥ್ಯಾತ್ವೇನ ನಿಷಿದ್ಧೇಷು** [ಸತ್ಸು] = ಮಿಥ್ಯೆಯೆಂದು ನಿರಾಕರಿಸಲ್ಪಟ್ಟಾಗ **ಅತ್ರ** = ಇಲ್ಲಿ **ಸರ್ವ-ಅಭಾವಂ ವಿನಾ** = ಸರ್ವಶೂನ್ಯತೆಯೊಂದನ್ನು ಬಿಟ್ಟು **ಕಿಂಚಿತ್** = ಬೇರೆ ಯಾವುದೊಂದನ್ನೂ **ನ ಪಶ್ಯಾಮಿ** = ಕಾಣೆನು; **ವಿಪಶ್ಚಿತಾ** = ವಿವೇಕಿಯಾದವನಿಂದ **ಸ್ವಾತ್ಮನಾ** = ತನ್ನ ಆತ್ಮನೆಂದು **ಅತ್ರ** = ಇಲ್ಲಿ **ವಿಜ್ಞೇಯಂ** = ತಿಳಿಯಲ್ಪಡತಕ್ಕ **ಕಿಮ್ ಉ ವಸ್ತು ಅಸ್ತಿ** = ಯಾವ ವಸ್ತುವಿರುವುದು?

**೨೧೨.** ಶಿಷ್ಯನು ಪ್ರಶ್ನಿಸಿದನು: ಹೇ ಗುರುವೆ, ಈ ಪಂಚಕೋಶಗಳನ್ನು ಮಿಥ್ಯೆಯೆಂದು ನಿರಾಕರಿಸಿದಮೇಲೆ ಇಲ್ಲಿ ಸರ್ವಶೂನ್ಯತೆಯೊಂದನ್ನು ಬಿಟ್ಟು ನನಗೆ ಮತ್ತೆ ಯಾವುದೂ ತೋರುವುದಿಲ್ಲ! ಇಲ್ಲಿ ವಿವೇಕಿಯಾದವನು ತನ್ನ ಆತ್ಮನೆಂದು ಅರಿತುಕೊಳ್ಳತಕ್ಕ ವಸ್ತು ಯಾವುದಿರುವುದು?

[ಇಲ್ಲಿ ಶೂನ್ಯವಾದಿಗಳ ಮತವನ್ನು ಪೂರ್ವಪಕ್ಷವಾಗಿ ಹೇಳಿದೆ. ಇದಕ್ಕೆ ಉತ್ತರವನ್ನು ಮುಂದಿನ ಕೆಲವು ಶ್ಲೋಕಗಳಲ್ಲಿ ಹೇಳಿದೆ.]

ಶ್ರೀಗುರುರುವಾಚ

**ಸತ್ಯಮುಕ್ತಂ ತ್ವಯಾ ವಿದ್ವನ್ ನಿಪುಣೋಽಸಿ ವಿಚಾರಣೇ ।**
**ಅಹಮಾದಿ-ವಿಕಾರಾಸ್ತೇ ತದಭಾವೋಽಯಮಪ್ಯಥ ॥ ೨೧೩ ॥**

**ಸರ್ವೇ ಯೇನಾನುಭೂಯಂತೇ ಯಃ ಸ್ವಯಂ ನಾನುಭೂಯತೇ ।**
**ತಮಾತ್ಮಾನಂ ವೇದಿತಾರಂ ವಿದ್ಧಿ ಬುದ್ಧ್ಯಾ ಸುಸೂಕ್ಷ್ಮಯಾ ॥೨೧೪॥**

**ಶ್ರೀಗುರುಃ ಉವಾಚ**—**ವಿದ್ವನ್**=ವಿವೇಕಿಯೆ, **ತ್ವಯಾ**=ನಿನ್ನಿಂದ **ಸತ್ಯಂ**=ಸತ್ಯವು **ಉಕ್ತಂ**=ಹೇಳಲ್ಪಟ್ಟಿತು; **ವಿಚಾರೇ**-ವಿಚಾರಮಾಡುವುದರಲ್ಲಿ **ನಿಪುಣಃ ಅಸಿ**-ನಿಪುಣನಾಗಿರುವೆ; **ತೇ ಅಹಮ್-ಆದಿ-ವಿಕಾರಾಃ**=ಆ ಅಹಂಕಾರವೇ ಮೊದಲಾದ ವಿಕಾರಗಳೂ **ಅಥ**=ಮತ್ತು **ಅಯಂ ತತ್-ಅಭಾವಃ**=ಅವುಗಳ ಈ ಅಭಾವವೂ **ಸರ್ವೇ**=ಎಲ್ಲವೂ **ಯೇನ**=ಯಾವನಿಂದ **ಅನುಭೂಯಂತೇ**=ಅನುಭವಿಸಲ್ಪಡುತ್ತವೆಯೊ, **ಯಃ**=ಯಾವನು **ಸ್ವಯಂ**=ತಾನೇ **ನ ಅನುಭೂಯತೇ**=[ಇತರರಿಂದ] ಅನುಭವಿಸಲ್ಪಡುವುದಿಲ್ಲವೊ **ತಂ**=ಅಂಥ **ವೇದಿತಾರಂ**=ಸರ್ವಸಾಕ್ಷಿಯಾದ **ಆತ್ಮಾನಂ**=ಆತ್ಮನನ್ನು **ಸುಸೂಕ್ಷ್ಮಯಾ**=ಅತಿ ಸೂಕ್ಷ್ಮವಾದ **ಬುದ್ಧ್ಯಾ**=ಬುದ್ಧಿಯಿಂದ **ವಿದ್ಧಿ**=ಅರಿತುಕೊ.

**೨೧೩-೨೧೪.** ಶ್ರೀಗುರುವು ಹೇಳಿದನು: ವಿವೇಕಿಯೆ, ನೀನು ಹೇಳಿದ್ದು ಸತ್ಯವೇ. ನೀನು ವಿವೇಚನೆಮಾಡುವುದರಲ್ಲಿ ನಿಪುಣನಾಗಿರುವೆ. ಅಹಂಕಾರವೇ ಮೊದಲಾದ ವಿಕಾರಗಳು ಮತ್ತು ಅವುಗಳ ಅಭಾವವು—ಇವೆಲ್ಲವನ್ನೂ ಯಾವನು ಅನುಭವಿಸುತ್ತಾನೆಯೊ, ಯಾವನನ್ನು ಮಾತ್ರ ಅನುಭವಿಸಲು ಮತ್ತೆ ಯಾವುದರಿಂದಲೂ ಆಗುವುದಿಲ್ಲವೋ ಆ ಸರ್ವಸಾಕ್ಷಿಯಾದ ಆತ್ಮನನ್ನು ಅತಿ ಸೂಕ್ಷ್ಮವಾದ ಬುದ್ಧಿಯಿಂದ[೧] ಅರಿತುಕೊ.

[೧ 'ಏಕಾಗ್ರವಾದ ಸೂಕ್ಷ್ಮವಾದ ಬುದ್ಧಿಯಿಂದ' **ಅಗ್ರ್ಯಯಾ ಬುದ್ಧ್ಯಾ ಸೂಕ್ಷ್ಮಯಾ** (ಕಠ ಉ. ೧. ೩. ೧೨) ಎಂಬುದರ ಛಾಯೆ.]

**ತತ್ಸಾಕ್ಷಿಕಂ ಭವೇತ್ ತತ್ತದ್ ಯದ್ಯದ್ ಯೇನಾನುಭೂಯತೇ ।**
**ಕಸ್ಯಾಪ್ಯನನುಭೂತಾರ್ಥೇ ಸಾಕ್ಷಿತ್ವಂ ನೋಪಯುಜ್ಯತೇ ॥ ೨೧೫ ॥**

**ಯತ್ ಯತ್** = ಯಾವಯಾವುದು **ಯೇನ** = ಯಾವನಿಂದ **ಅನುಭೂಯತೇ** = ಅನುಭವಿಸಲ್ಪಡುತ್ತದೆಯೊ **ತತ್ ತತ್** = ಅದದು **ತತ್-ಸಾಕ್ಷಿಕಂ ಭವೇತ್** = ಆಯಾ ಸಾಕ್ಷಿಯುಳ್ಳದ್ದಾಗುವುದು; **ಅನನುಭೂತಾರ್ಥೇ** = ಅನುಭವಿಸಲ್ಪಡದಿರುವ ವಿಷಯದಲ್ಲಿ **ಕಸ್ಯ ಅಪಿ** = ಯಾವನಿಗೂ **ಸಾಕ್ಷಿತ್ವಂ** = ಸಾಕ್ಷಿತ್ವವು **ನ ಉಪಯುಜ್ಯತೇ** = ಉಪಯುಕ್ತವಾಗುವುದಿಲ್ಲ.

**೨೧೫.** ಯಾವಯಾವನು ಯಾವಯಾವುದನ್ನು ಅನುಭವಿಸುತ್ತಾನೆಯೊ ಅದದಕ್ಕೆ ಅವನೇ ಸಾಕ್ಷಿಯಾಗಿರುತ್ತಾನೆ. ವಿಷಯಗಳು ಅನುಭವಿಸಲ್ಪಡದಿದ್ದರೆ ಯಾವನಿಗೂ ಸಾಕ್ಷಿತ್ವವು ಸಂಭವಿಸುವುದಿಲ್ಲ.

**ಅಸೌ ಸ್ವಸಾಕ್ಷಿಕೋ ಭಾವೋ ಯತಃ ಸ್ವೇನಾನುಭೂಯತೇ ।**
**ಅತಃ ಪರಂ ಸ್ವಯಂ ಸಾಕ್ಷಾತ್ ಪ್ರತ್ಯಗಾತ್ಮಾ ನ ಚೇತರಃ ॥ ೨೧೬ ॥**

**ಅಸೌ ಭಾವಃ** = ಈ ಆತ್ಮನು **ಸ್ವಸಾಕ್ಷಿಕಃ** = ತನಗೆ ತಾನೇ ಸಾಕ್ಷಿಯಾಗಿರುತ್ತಾನೆ; **ಯತಃ** = ಏಕೆಂದರೆ **ಸ್ವೇನ** = ತನ್ನಿಂದಲೇ **ಅನುಭೂಯತೇ** = ಅನುಭವಿಸಲ್ಪಡುತ್ತಾನೆ; **ಅತಃ** = ಆದುದರಿಂದ **ಪ್ರತ್ಯಗಾತ್ಮಾ** = ಪ್ರತ್ಯಗಾತ್ಮನು **ಸ್ವಯಂ** = ತಾನೇ **ಸಾಕ್ಷಾತ್** = ಸಾಕ್ಷಾತ್ತಾಗಿ **ಪರಂ** = ಪರಬ್ರಹ್ಮ **ನ ಚ ಇತರಃ** = ಇನ್ನೊಬ್ಬನಲ್ಲ.

**೨೧೬.** ಈ ಆತ್ಮನು ತನಗೆ ತಾನೇ ಸಾಕ್ಷಿಯಾಗಿರುತ್ತಾನೆ, ಏಕೆಂದರೆ ತನ್ನನ್ನು ತಾನೇ ಅನುಭವಿಸುತ್ತಾನೆ. ಆದುದರಿಂದ ಪ್ರತ್ಯಗಾತ್ಮನು ತಾನೇ ಸಾಕ್ಷಾತ್ತಾಗಿ ಬ್ರಹ್ಮವಾಗಿರುತ್ತಾನೆ,[೧] ಇನ್ನೊಬ್ಬನಲ್ಲ.

[೧ 'ಯಾವುದು ಸಾಕ್ಷಾತ್ತಾಗಿರುವ ಅಪರೋಕ್ಷವಾದ ಬ್ರಹ್ಮವೊ' **ಯತ್ ಸಾಕ್ಷಾದಪರೋಕ್ಷಾದ್ಬ್ರಹ್ಮ** (ಬೃಹದಾರಣ್ಯಕ ಉ. ೩. ೪. ೧).]

**ಜಾಗ್ರತ್-ಸ್ವಪ್ನ-ಸುಷುಪ್ತಿಷು ಸ್ಫುಟತರಂ ಯೋಽಸೌ ಸಮುಜ್ಜೃಂಭತೇ**
**ಪ್ರತ್ಯಗ್ರೂಪತಯಾ ಸದಾಽಹಮಹಮಿತ್ಯಂತಃ ಸ್ಫುರನ್ನೇಕಧಾ ।**
**ನಾನಾಕಾರ-ವಿಕಾರ-ಭಾಗಿನ ಇಮಾನ್ ಪಶ್ಯನ್ನಹಂಧೀಮುಖಾನ್**
**ನಿತ್ಯಾನಂದ-ಚಿದಾತ್ಮನಾ ಸ್ಫುರತಿ ತಂ ವಿದ್ಧಿ ಸ್ವಮೇತಂ ಹೃದಿ ॥ ೨೧೭ ॥**

**ಯಃ ಅಸೌ** = ಯಾವ ಇವನು **ಜಾಗ್ರತ್-ಸ್ವಪ್ನ-ಸುಷುಪ್ತಿಷು** = ಜಾಗ್ರತ್-ಸ್ವಪ್ನ-ಸುಷುಪ್ತಿಗಳಲ್ಲಿ **ಸ್ಫುಟತರಂ** = ಸ್ಫುಟವಾಗಿ **ಸಮುಜ್ಜೃಂಭತೇ** = ವ್ಯಕ್ತವಾಗು

ತ್ತಾನೆಯೊ **ಸದಾ**=ಯಾವಾಗಲೂ **ಅಹಮ್ ಅಹಮ್ ಇತಿ**='ನಾನು, ನಾನು' ಎಂದು **ಏಕಧಾ**=ಒಂದೇ ವಿಧವಾಗಿ **ಪ್ರತ್ಯಗ್-ರೂಪತಯಾ**=ಪ್ರತ್ಯಗಾತ್ಮಸ್ವರೂಪದಿಂದ **ಅಂತಃ**=ಒಳಗೆ **ಸ್ಫುರನ್**=ಪ್ರಕಾಶಿಸುವವನಾಗಿ **ನಾನಾ-ಆಕಾರ-ವಿಕಾರ-ಭಾಗಿನಃ**= ನಾನಾ ವಿಧವಾದ ಆಕಾರಗಳನ್ನೂ ವಿಕಾರಗಳನ್ನೂ ಹೊಂದುತ್ತಿರುವ **ಅಹಂ-ಧೀ-ಮುಖಾನ್ ಇಮಾನ್**=ಅಹಂಕಾರ ಬುದ್ಧಿ ಮೊದಲಾದ ಇವುಗಳನ್ನು **ಪಶ್ಯನ್**=ನೋಡುವವನಾಗಿ **ನಿತ್ಯಾನಂದ-ಚಿದಾತ್ಮನಾ** = ನಿತ್ಯಾನಂದ-ಜ್ಞಾನರೂಪದಿಂದ **ಸ್ಫುರತಿ**= ಪ್ರಕಾಶಿಸುತ್ತಿರುವನೊ **ತಮ್ ಏತಂ**=ಅಂಥ ಇವನನ್ನೇ **ಹೃದಿ**=ಹೃದಯದಲ್ಲಿ **ಸ್ವಂ**= ಆತ್ಮನನ್ನಾಗಿ **ವಿದ್ಧಿ** = ತಿಳಿದುಕೊ.

**೨೧೭.** ಯಾವ ಇವನು ಜಾಗ್ರತ್-ಸ್ವಪ್ನ-ಸುಷುಪ್ತಿಗಳಲ್ಲಿ ಸ್ಫುಟವಾಗಿ ವ್ಯಕ್ತವಾಗುತ್ತಾನೆಯೊ, ಯಾವಾಗಲೂ 'ನಾನು, ನಾನು' ಎಂದು ಒಂದೇ ವಿಧವಾಗಿ ಪ್ರತ್ಯಗಾತ್ಮಸ್ವರೂಪದಿಂದ ಒಳಗೆ ಪ್ರಕಾಶಿಸುತ್ತ, ನಾನಾ ವಿಧವಾದ ಆಕಾರಗಳನ್ನೂ ವಿಕಾರಗಳನ್ನೂ ಹೊಂದುತ್ತಿರುವ ಅಹಂಕಾರ ಬುದ್ಧಿ ಮೊದಲಾದುವುಗಳನ್ನು ನೋಡುತ್ತ, ನಿತ್ಯಾನಂದ-ಜ್ಞಾನರೂಪದಿಂದ ಪ್ರಕಾಶಿಸುತ್ತಿರುವನೊ ಅಂಥ ಇವನನ್ನೇ ಹೃದಯದಲ್ಲಿರುವ ನಿನ್ನ ಆತ್ಮನೆಂದು ತಿಳಿದುಕೊ.

[ಹಿಂದಿನ ಶ್ಲೋಕದಲ್ಲಿ ಹೇಳಿರುವ ಅರ್ಥವನ್ನೇ ಇಲ್ಲಿ ವಿವರಿಸಿದೆ.]

**ಘಟೋದಕೇ ಬಿಂಬಿತಮರ್ಕಬಿಂಬ-**
**ಮಾಲೋಕ್ಯ ಮೂಢೋ ರವಿಮೇವ ಮನ್ಯತೇ ।**
**ತಥಾ ಚಿದಾಭಾಸಮುಪಾಧಿ-ಸಂಸ್ಥಂ**
**ಭ್ರಾಂತ್ಯಾಽಹಮಿತ್ಯೇವ ಜಡೋಽಭಿಮನ್ಯತೇ ॥ ೨೧೮ ॥**

**ಮೂಢಃ**=ಮೂಢನಾದವನು **ಘಟೋದಕೇ**=ಗಡಿಗೆಯ ನೀರಿನಲ್ಲಿ **ಬಿಂಬಿತಂ**= ಪ್ರತಿಬಿಂಬಿಸಿರುವ **ಅರ್ಕಬಿಂಬಂ** = ಸೂರ್ಯಬಿಂಬವನ್ನು **ಆಲೋಕ್ಯ** = ನೋಡಿ **ರವಿಮ್ ಏವ** = ಸೂರ್ಯನೆಂದೇ **ಮನ್ಯತೇ** = ಭಾವಿಸುತ್ತಾನೆ; **ತಥಾ** = ಹಾಗೆಯೇ **ಜಡಃ** = ಅಜ್ಞಾನಿಯು **ಉಪಾಧಿ-ಸಂಸ್ಥಂ**=ಉಪಾಧಿಯಲ್ಲಿ ಪ್ರತಿಬಿಂಬಿಸಿರುವ **ಚಿದಾಭಾಸಂ**=ಚಿತ್‌ಪ್ರತಿಬಿಂಬವನ್ನು **ಭ್ರಾಂತ್ಯಾ**=ಅವಿವೇಕದಿಂದ **ಅಹಮ್ ಇತಿ ಏವ**= 'ನಾನು' ಎಂದೇ **ಅಭಿಮನ್ಯತೇ** = ಅಭಿಮಾನಪಡುತ್ತಾನೆ.

**೨೧೮.** ಮೂಢನು ಗಡಿಗೆಯ ನೀರಿನಲ್ಲಿ ಪ್ರತಿಬಿಂಬಿಸಿರುವ ಸೂರ್ಯಬಿಂಬವನ್ನು ನೋಡಿ ಅದನ್ನು ಸೂರ್ಯನೆಂದೇ ಭಾವಿಸುತ್ತಾನೆ; ಹಾಗೆಯೇ ಅಜ್ಞಾನಿಯು (ಬುದ್ಧಿಯೆ ಮೊದಲಾದ) ಉಪಾಧಿಯಲ್ಲಿ ಪ್ರತಿಬಿಂಬಿಸಿರುವ ಚಿತ್-ಪ್ರತಿಬಿಂಬವನ್ನು 'ನಾನು' ಎಂದೇ ತಿಳಿಯುತ್ತಾನೆ.

ಘಟಂ ಜಲಂ ತದ್ಗತಮರ್ಕಬಿಂಬಂ
ವಿಹಾಯ ಸರ್ವಂ ವಿನಿರೀಕ್ಷ್ಯತೇಽರ್ಕಃ ।
ತಟಸ್ಥ ಏತತ್ತ್ರಿತಯಾವಭಾಸಕಃ
ಸ್ವಯಂಪ್ರಕಾಶೋ ವಿದುಷಾ ಯಥಾ ತಥಾ ॥ ೨೧೯ ॥

**ಘಟಂ** = ಗಡಿಗೆಯನ್ನು **ಜಲಂ** = ನೀರನ್ನು **ತದ್ಗತಮ್ ಅರ್ಕಬಿಂಬಂ** = ಅದರಲ್ಲಿ ತೋರುವ ಸೂರ್ಯಬಿಂಬವನ್ನು—**ಸರ್ವಂ ವಿಹಾಯ** = ಇವೆಲ್ಲವನ್ನೂ ಬಿಟ್ಟು **ತಟಸ್ಥಃ** = ಈ ಮೂರರಿಂದಲೂ ಭಿನ್ನನಾದ **ಏತತ್-ತ್ರಿತಯ-ಅವಭಾಸಕಃ** = ಈ ಮೂರನ್ನೂ ಪ್ರಕಾಶಪಡಿಸುವ **ಸ್ವಯಂಪ್ರಕಾಶಃ** = ಸ್ವಯಂಪ್ರಕಾಶನಾದ **ಅರ್ಕಃ** = ಸೂರ್ಯನು **ವಿದುಷಾ** = ವಿವೇಕಿಯಿಂದ **ಯಥಾ** = ಹೇಗೆ **ವಿನಿರೀಕ್ಷ್ಯತೇ** = ನೋಡಲ್ಪಡುತ್ತಾನೆಯೊ **ತಥಾ** = ಹಾಗೆಯೇ—

**೨೧೯.** ಗಡಿಗೆ, ನೀರು, ಅದರಲ್ಲಿ ತೋರುವ ಸೂರ್ಯಪ್ರತಿಬಿಂಬ—ಇವೆಲ್ಲವನ್ನೂ ಬಿಟ್ಟು, ಈ ಮೂರಕ್ಕಿಂತ ಭಿನ್ನನಾದ, ಈ ಮೂರನ್ನೂ ಪ್ರಕಾಶಪಡಿಸುವ ಮತ್ತು ಸ್ವಯಂಪ್ರಕಾಶನಾದ ಸೂರ್ಯನನ್ನು ವಿವೇಕಿಯು ಹೇಗೆ ನೋಡುವನೊ—

ದೇಹಂ ಧಿಯಂ ಚಿತ್ಪ್ರತಿಬಿಂಬಮೇವಂ
ವಿಸೃಜ್ಯ ಬುದ್ಧೌ ನಿಹಿತಂ ಗುಹಾಯಾಮ್ ।
ದ್ರಷ್ಟಾರಮಾತ್ಮಾನಮಖಂಡಬೋಧಂ
ಸರ್ವಪ್ರಕಾಶಂ ಸದಸದ್ವಿಲಕ್ಷಣಮ್ ॥ ೨೨೦ ॥

ನಿತ್ಯಂ ವಿಭುಂ ಸರ್ವಗತಂ ಸುಸೂಕ್ಷ್ಮ-
ಮಂತರ್ಬಹಿಃಶೂನ್ಯಮನನ್ಯಮಾತ್ಮನಃ ।
ವಿಜ್ಞಾಯ ಸಮ್ಯಙ್ನಿಜರೂಪಮೇತತ್
ಪುಮಾನ್ ವಿಪಾಪ್ಮಾ ವಿರಜೋ ವಿಮೃತ್ಯುಃ ॥ ೨೨೧ ॥

ವಿಶೋಕ ಆನಂದಘನೋ ವಿಪಶ್ಚಿತ್
ಸ್ವಯಂ ಕುತಶ್ಚಿನ್ನ ಬಿಭೇತಿ ಕಶ್ಚಿತ್ ।
ನಾನ್ಯೋಽಸ್ತಿ ಪಂಥಾ ಭವಬಂಧಮುಕ್ತೇ-
ರ್ವಿನಾ ಸ್ವತತ್ತ್ವಾವಗಮಂ ಮುಮುಕ್ಷೋಃ ॥ ೨೨೨ ॥

**ಏವಂ** = ಹೀಗೆಯೇ **ದೇಹಂ** = ಶರೀರವನ್ನೂ **ಧಿಯಂ** = ಬುದ್ಧಿಯನ್ನೂ **ಚಿತ್ಪ್ರತಿಬಿಂಬಂ** = ಚಿದಾಭಾಸವನ್ನೂ **ವಿಸೃಜ್ಯ** = ಬಿಟ್ಟು, **ಬುದ್ಧೌ ಗುಹಾಯಾಮ್** =

ಬುದ್ಧಿಯೆಂಬ ಗುಹೆಯಲ್ಲಿ ನಿಹಿತಂ = ನೆಲೆಗೊಂಡಿರುವ **ದ್ರಷ್ಟಾರಂ** = ಸರ್ವಸಾಕ್ಷಿಯಾದ **ಅಖಂಡಬೋಧಂ** = ಅಖಂಡಜ್ಞಾನಸ್ವರೂಪನಾಗಿರುವ **ಸರ್ವಪ್ರಕಾಶಂ** = ಸರ್ವಪ್ರಕಾಶನಾದ **ಸತ್-ಅಸತ್-ವಿಲಕ್ಷಣಂ** = ಸ್ಥೂಲಸೂಕ್ಷ್ಮವಸ್ತುಗಳಿಗಿಂತ ಭಿನ್ನನಾದ **ನಿತ್ಯಂ** = ನಿತ್ಯನಾದ **ವಿಭುಂ** = ಸರ್ವವ್ಯಾಪಕನಾದ **ಸರ್ವಗತಂ** = ಸರ್ವಗತನಾದ **ಸುಸೂಕ್ಷ್ಮಂ** = ಅತ್ಯಂತ ಸೂಕ್ಷ್ಮನಾದ **ಅಂತರ್ಬಹಿಃಶೂನ್ಯಂ** = ಒಳಗು ಹೊರಗು ಎಂಬುದಿಲ್ಲದವನಾದ **ಆತ್ಮನಃ ಅನನ್ಯಂ** = ತನಗಿಂತ ಬೇರೆಯಲ್ಲದವನಾದ **ಏತತ್ ನಿಜರೂಪಂ** = ಈ ನಿಜರೂಪನಾದ **ಆತ್ಮಾನಂ** = ಆತ್ಮನನ್ನು **ಸಮ್ಯಕ್ ವಿಜ್ಞಾಯ** ಚೆನ್ನಾಗಿ ಅರಿತುಕೊಂಡು **ಪುಮಾನ್** = ಮನುಷ್ಯನು **ವಿಪಾಪ್ಮಾ** = ಪಾಪರಹಿತನೂ **ವಿರಜಃ** = ರಜಸ್ಸಿಲ್ಲದವನೂ **ವಿಮೃತ್ಯುಃ** = ಮೃತ್ಯುರಹಿತನೂ **ವಿಶೋಕಃ** = ಶೋಕರಹಿತನೂ **ಆನಂದಘನಃ** = ಆನಂದಘನನೂ **ಆದ ಕಶ್ಚಿತ್ ವಿಪಶ್ಚಿತ್** = ಒಬ್ಬ ಜ್ಞಾನಿಯಾಗಿ **ಕುತಶ್ಚಿತ್** = ಯಾವುದರಿಂದಲೂ **ನ ಬಿಭೇತಿ** = ಹೆದರುವುದಿಲ್ಲ; **ಮುಮುಕ್ಷೋಃ** = ಮುಮುಕ್ಷುವಿಗೆ **ಸ್ವ-ತತ್ತ್ವ-ಅವಗಮಂ ವಿನಾ** = ನಿಜಸ್ವರೂಪದ ತಿಳಿವಳಿಕೆಯನ್ನು ಬಿಟ್ಟು **ಭವಬಂಧಮುಕ್ತೇಃ** = ಸಂಸಾರಬಂಧದ ಬಿಡುಗಡೆಗೆ **ಅನ್ಯಃ** = ಬೇರೆ **ಪಂಥಾಃ** = ದಾರಿಯು **ನ ಅಸ್ತಿ** = ಇಲ್ಲವೇ ಇಲ್ಲವು.

**೨೨೦–೨೨೨.** ಹಾಗೆಯೇ ಶರೀರವನ್ನೂ ಬುದ್ಧಿಯನ್ನೂ ಚಿದಾಭಾಸವನ್ನೂ[೧] ಬಿಟ್ಟು, ಬುದ್ಧಿಯೆಂಬ ಗುಹೆಯಲ್ಲಿ ನೆಲೆಗೊಂಡಿರುವ ಸರ್ವಸಾಕ್ಷಿಯೂ ಅಖಂಡಜ್ಞಾನಸ್ವರೂಪನೂ ಸರ್ವಪ್ರಕಾಶಕನೂ ಸ್ಥೂಲಸೂಕ್ಷ್ಮಗಳಿಗಿಂತ ಭಿನ್ನನೂ ನಿತ್ಯನೂ[೨] ವಿಭುವೂ[೩] ಸರ್ವಗತನೂ ಅತ್ಯಂತ ಸೂಕ್ಷ್ಮನೂ[೪] ಒಳಗೆ ಹೊರಗೆ ಎಂಬುದಿಲ್ಲದವನೂ[೫] ತನಗಿಂತ ಬೇರೆಯಲ್ಲದವನೂ[೬] ಆದ ಈ ನಿಜರೂಪನಾದ ಆತ್ಮನನ್ನು ಚೆನ್ನಾಗಿ ಅರಿತುಕೊಂಡು ಮನುಷ್ಯನು ಪಾಪರಹಿತನೂ[೭] ರಜಸ್ಸಿಲ್ಲದವನೂ ಮೃತ್ಯುರಹಿತನೂ ಶೋಕರಹಿತನೂ[೮] ಆನಂದಘನನೂ ಆದ ಜ್ಞಾನಿಯಾಗಿ ಯಾವುದಕ್ಕೂ ಹೆದರದೆ ಇರುತ್ತಾನೆ.[೯] ಮುಮುಕ್ಷುವಿಗೆ ನಿಜಸ್ವರೂಪದ ತಿಳಿವಳಿಕೆಯನ್ನು ಬಿಟ್ಟು ಸಂಸಾರಬಂಧದ ಬಿಡುಗಡೆಗೆ ಬೇರೆ ಯಾವ ದಾರಿಯೂ ಇರುವುದಿಲ್ಲ.

[೧ 'ನಾನು' ಎಂದು ತೋರಿಕೊಳ್ಳುವ ಆಭಾಸ.

೨ ಕಾಲ-ಪರಿಚ್ಛೇದ-ಶೂನ್ಯನೂ.

೩ ದೇಶ-ಪರಿಚ್ಛೇದ-ಶೂನ್ಯನೂ.

೪ 'ಎಲ್ಲಾ ಪ್ರಾಣಿಗಳಲ್ಲಿಯೂ ಗೂಢನಾಗಿರುವ ಈ ಆತ್ಮನು ಪ್ರಕಾಶಿಸುವುದಿಲ್ಲ' **ಏಷ ಸರ್ವೇಷು ಭೂತೇಷು ಗೂಢೋ ಆತ್ಮಾ ನ ಪ್ರಕಾಶತೇ** (ಕಠ ಉ. ೧. ೩. ೧೨).

೫ 'ಅದು ಅನಂತರವು ಅಬಾಹ್ಯವು' **ಅನಂತರಮಬಾಹ್ಯಮ್** (ಬೃಹದಾರಣ್ಯಕ ಉ. ೩. ೮. ೮).

[6] ಆತ್ಮನಿಗೂ ಬ್ರಹ್ಮಕ್ಕೂ ಯಾವ ಭೇದವೂ ಇಲ್ಲ. 'ಈ ಆತ್ಮನು ಬ್ರಹ್ಮ' **ಅಯಮಾತ್ಮಾ ಬ್ರಹ್ಮ** (ಮಾಂಡೂಕ್ಯ ಉ. ೧. ೨).

[7] ಪಾಪಪುಣ್ಯಗಳಿಲ್ಲದವನು.

[8] 'ಮೃತ್ಯುರಹಿತನೂ ಶೋಕರಹಿತನೂ' **ವಿಮೃತ್ಯುರ್ವಿಶೋಕಃ** (ಛಾಂದೋಗ್ಯ ಉ. ೮. ೭. ೧).

[9] 'ಅವನು ಯಾವುದಕ್ಕೂ ಹೆದರುವುದಿಲ್ಲ' **ನ ಬಿಭೇತಿ ಕುತಶ್ಚನೇತಿ** (ತೈತ್ತಿರೀಯ ಉ. ೨. ೯).]

## ಬ್ರಹ್ಮಾಭಿನ್ನತ್ವವಿಜ್ಞಾನಂ ಭವಮೋಕ್ಷಸ್ಯ ಕಾರಣಮ್ ।
## ಯೇನಾದ್ವಿತೀಯಮಾನಂದಂ ಬ್ರಹ್ಮ ಸಂಪದ್ಯತೇ ಬುಧೈಃ ॥ ೨೨೩ ॥

**ಬ್ರಹ್ಮ-ಅಭಿನ್ನತ್ವ-ವಿಜ್ಞಾನಂ** = ಬ್ರಹ್ಮ-ಆತ್ಮೈಕ್ಯಜ್ಞಾನವೇ **ಭವಮೋಕ್ಷಸ್ಯ** = ಸಂಸಾರಬಂಧದ ಬಿಡುಗಡೆಗೆ **ಕಾರಣಂ** = ಕಾರಣವು; **ಯೇನ** = ಯಾವುದರಿಂದ **ಅದ್ವಿತೀಯಂ** = ಅದ್ವಯವೂ **ಆನಂದಂ** = ಆನಂದಸ್ವರೂಪವೂ ಆದ **ಬ್ರಹ್ಮ** = ಬ್ರಹ್ಮವು **ಬುಧೈಃ** = ಜ್ಞಾನಿಗಳಿಂದ **ಸಂಪದ್ಯತೇ** = ಹೊಂದಲ್ಪಡುತ್ತದೆಯೊ.

**೨೨೩.** ಜೀವಾತ್ಮ ಪರಮಾತ್ಮ — ಇವರ ಐಕ್ಯಜ್ಞಾನವೇ[1] ಸಂಸಾರದಿಂದ ಬಿಡುಗಡೆಯನ್ನು ಹೊಂದಲು ಕಾರಣವಾಗಿರುತ್ತದೆ. ಜ್ಞಾನಿಗಳು ಈ ಐಕ್ಯ ಜ್ಞಾನದಿಂದಲೇ ಅದ್ವಯವೂ ಆನಂದಸ್ವರೂಪವೂ ಆದ ಬ್ರಹ್ಮವನ್ನು ಸಾಕ್ಷಾತ್ಕರಿಸುತ್ತಾರೆ.

[[1] 'ನಾನೇ ಬ್ರಹ್ಮವಾಗಿದ್ದೇನೆ' **ಅಹಂ ಬ್ರಹ್ಮಾಸ್ಮಿ** (ಬೃಹದಾರಣ್ಯಕ ಉ. ೧. ೪. ೧೦). ]

## ಬ್ರಹ್ಮಭೂತಸ್ತು ಸಂಸೃತ್ಯೈ ವಿದ್ವಾನ್ನಾವರ್ತತೇ ಪುನಃ ।
## ವಿಜ್ಞಾತವ್ಯಮತಃ ಸಮ್ಯಗ್ಬ್ರಹ್ಮಾಭಿನ್ನತ್ವಮಾತ್ಮನಃ ॥ ೨೨೪ ॥

**ತು** = ಆದರೆ **ಬ್ರಹ್ಮಭೂತಃ** = ಬ್ರಹ್ಮಸ್ವರೂಪನಾದ **ವಿದ್ವಾನ್** = ಜ್ಞಾನಿಯು **ಸಂಸೃತ್ಯೈ** = ಸಂಸಾರಕ್ಕೆ **ಪುನಃ** = ಮತ್ತೆ **ನ ಆವರ್ತತೇ** = ಬರುವುದಿಲ್ಲ; **ಅತಃ** = ಆದುದರಿಂದ **ಆತ್ಮನಃ** = ತನ್ನ **ಬ್ರಹ್ಮ-ಅಭಿನ್ನತ್ವಂ** = ಬ್ರಹ್ಮೈಕ್ಯವು **ಸಮ್ಯಕ್** = ಚೆನ್ನಾಗಿ **ವಿಜ್ಞಾತವ್ಯಂ** = ತಿಳಿಯಲ್ಪಡತಕ್ಕದ್ದು.

**೨೨೪.** ಆದರೆ ಬ್ರಹ್ಮಸ್ವರೂಪನಾದ ಜ್ಞಾನಿಯು ಪುನಃ ಸಂಸಾರಕ್ಕೆ ಬರುವುದಿಲ್ಲ.[1] ಆದುದರಿಂದ ತಾನು ಬ್ರಹ್ಮಕ್ಕಿಂತ ಬೇರೆಯಲ್ಲವೆಂಬುದನ್ನು ಚೆನ್ನಾಗಿ ತಿಳಿದುಕೊಳ್ಳಬೇಕು.

[[1] 'ಅವನು ಹಿಂತಿರುಗುವುದಿಲ್ಲ' **ನ ಚ ಪುನರಾವರ್ತತೇ** (ಛಾಂದೋಗ್ಯ ಉ. ೮. ೧೫. ೧). ]

**ಸತ್ಯಂ ಜ್ಞಾನಮನಂತಂ ಬ್ರಹ್ಮ ವಿಶುದ್ಧಂ ಪರಂ ಸ್ವತಃಸಿದ್ಧಮ್ ।**
**ನಿತ್ಯಾನಂದೈಕರಸಂ ಪ್ರತ್ಯಗಭಿನ್ನಂ ನಿರಂತರಂ ಜಯತಿ ॥ ೨೨೫ ॥**

**ವಿಶುದ್ಧಂ**=ವಿಶುದ್ಧವೂ **ಪರಂ**=ಮಾಯಾತೀತವೂ **ಸ್ವತಃಸಿದ್ಧಂ**=ಸ್ವತಃಸಿದ್ಧವೂ **ನಿತ್ಯಾನಂದ-ಏಕರಸಂ**=ನಿತ್ಯಾನಂದಸ್ವರೂಪವೂ **ಪ್ರತ್ಯಕ್-ಅಭಿನ್ನಂ**=ಪ್ರತ್ಯಗಾತ್ಮನಿಗಿಂತ ಅಭಿನ್ನವೂ **ನಿರಂತರಂ**=ಅಂತರಶೂನ್ಯವೂ **ಸತ್ಯಂ**=ಸತ್ಯವೂ **ಜ್ಞಾನಂ**=ಜ್ಞಾನವೂ **ಅನಂತಂ**=ಅನಂತವೂ ಆದ **ಬ್ರಹ್ಮ**=ಬ್ರಹ್ಮವು **ಜಯತಿ**=ಸರ್ವೋತ್ಕೃಷ್ಟವಾಗಿದೆ.

**೨೨೫.** ವಿಶುದ್ಧವೂ ಮಾಯಾತೀತವೂ ಸ್ವತಃಸಿದ್ಧವೂ ನಿತ್ಯಾನಂದೈಕಸ್ವರೂಪವೂ ಪ್ರತ್ಯಗಾತ್ಮನಿಗಿಂತ ಅಭಿನ್ನವೂ ಅಂತರಶೂನ್ಯವೂ ಸತ್ಯಜ್ಞಾನಾನಂತ ಸ್ವರೂಪವೂ[೧] ಆದ ಬ್ರಹ್ಮವು ಸರ್ವೋತ್ಕೃಷ್ಟವಾಗಿರುತ್ತದೆ.

[[೧] ಸತ್ಯಂ ಜ್ಞಾನಮನಂತಂ ಬ್ರಹ್ಮ (ತೈತ್ತಿರೀಯ ಉ. ೨. ೧). ]

**ಸದಿದಂ ಪರಮಾದ್ವೈತಂ ಸ್ವಸ್ಮಾದನ್ಯಸ್ಯ ವಸ್ತುನೋಽಭಾವಾತ್ ।**
**ನ ಹ್ಯನ್ಯದಸ್ತಿ ಕಿಂಚಿತ್ ಸಮ್ಯಕ್ ಪರಮಾರ್ಥ-ತತ್ತ್ವಬೋಧ-**
**ದಶಾಯಾಮ್ ॥ ೨೨೬ ॥**

**ಸ್ವಸ್ಮಾತ್** = ತನಗಿಂತ **ಅನ್ಯಸ್ಯ** **ವಸ್ತುನಃ** = ಬೇರೊಂದಾದ ವಸ್ತುವಿನ **ಅಭಾವಾತ್** = ಅಭಾವದಿಂದ **ಇದಂ** **ಪರಮ-ಅದ್ವೈತಂ** = ಈ ಪರಮಾದ್ವೈತವು **ಸತ್** = ಸದ್ವಸ್ತುವು; **ಸಮ್ಯಕ್** **ಪರಮಾರ್ಥತತ್ತ್ವ-ಬೋಧ-ದಶಾಯಾಂ** = ಪರಮಾರ್ಥತತ್ತ್ವವನ್ನು ಚೆನ್ನಾಗಿ ಅರಿತುಕೊಂಡಾಗ **ಅನ್ಯತ್ ಕಿಂಚಿತ್**=ಬೇರೆ ಯಾವುದೂ **ನ ಹಿ ಅಸ್ತಿ**=ಇಲ್ಲವು.

**೨೨೬.** ಈ ಪರಮಾದ್ವೈತವೇ ಸದ್ವಸ್ತುವು; ಏಕೆಂದರೆ ತನಗಿಂತ ಬೇರೊಂದಾದ ವಸ್ತುವೇ ಇಲ್ಲ. ಪರಮಾರ್ಥತತ್ತ್ವವನ್ನು ಚೆನ್ನಾಗಿ ಅರಿತುಕೊಂಡಾಗ ಬೇರೆ ಯಾವುದೂ ಇರುವುದಿಲ್ಲ.

**ಯದಿದಂ ಸಕಲಂ ವಿಶ್ವಂ ನಾನಾರೂಪಂ ಪ್ರತೀತಮಜ್ಞಾನಾತ್ ।**
**ತತ್ಸರ್ವಂ ಬ್ರಹ್ಮೈವ ಪ್ರತ್ಯಸ್ತಾಶೇಷ-ಭಾವನಾ-ದೋಷಮ್**
**॥ ೨೨೭ ॥**

**ಅಜ್ಞಾನಾತ್** = ಅಜ್ಞಾನದಿಂದ **ಪ್ರತೀತಂ** = ಕಂಡುಬರುವ **ನಾನಾರೂಪಂ**=ನಾನಾರೂಪವುಳ್ಳ **ಸಕಲಂ** = ಸಮಸ್ತವಾದ **ಯತ್ ಇದಂ ವಿಶ್ವಂ** = ಯಾವ ಈ ವಿಶ್ವ

ವಿದೆಯೊ **ತತ್ ಸರ್ವಂ** = ಅದೆಲ್ಲವೂ **ಪ್ರತ್ಯಸ್ತ-ಅಶೇಷ-ಭಾವನಾ-ದೋಷಂ** = ಸಕಲ-ಕಲ್ಪನಾ-ದೋಷ-ವರ್ಜಿತವಾದ **ಬ್ರಹ್ಮ ಏವ** = ಬ್ರಹ್ಮವೇ.

**೨೨೭.** ಅಜ್ಞಾನದಿಂದ ಕಂಡುಬರುವ ನಾನಾರೂಪವುಳ್ಳ ಈ ಸಮಸ್ತ ವಿಶ್ವವೂ ಸಕಲ-ಕಲ್ಪನಾ-ದೋಷ-ವರ್ಜಿತವಾದ ಬ್ರಹ್ಮವೇ.

**ಮೃತ್ಕಾರ್ಯಭೂತೋಽಪಿ ಮೃದೋ ನ ಭಿನ್ನಃ**
**ಕುಂಭೋಽಸ್ತಿ ಸರ್ವತ್ರ ತು ಮೃತ್ಸ್ವರೂಪಾತ್ ।**
**ನ ಕುಂಭರೂಪಂ ಪೃಥಗಸ್ತಿ ಕುಂಭಃ**
**ಕುತೋ ಮೃಷಾ ಕಲ್ಪಿತ-ನಾಮ-ಮಾತ್ರಃ ॥ ೨೨೮ ॥**

**ಕುಂಭಃ** = ಗಡಿಗೆಯು **ಮೃತ್-ಕಾರ್ಯ-ಭೂತಃ ಅಪಿ** = ಮಣ್ಣಿನ ಕಾರ್ಯವಾಗಿದ್ದರೂ **ಸರ್ವತ್ರ ತು**=ಎಲ್ಲೆಲ್ಲಿಯೂ **ಮೃತ್-ಸ್ವರೂಪಾತ್**= ಮಣ್ಣಿನ ರೂಪವೇ ಆಗಿರುವುದರಿಂದ **ಮೃದಃ** = ಮಣ್ಣಿಗಿಂತ **ನ ಭಿನ್ನಃ ಅಸ್ತಿ** = ಬೇರೆಯಾಗಿರುವುದಿಲ್ಲ; **ಕುಂಭರೂಪಂ** = ಗಡಿಗೆಯ ರೂಪವು **ಪೃಥಕ್ ನ ಅಸ್ತಿ** = ಬೇರೆಯಾಗಿರುವುದಿಲ್ಲ, **ಕುಂಭಃ** = ಗಡಿಗೆಯು **ಕುತಃ** = ಎಲ್ಲಿಂದ ಬಂತು? **ಮೃಷಾ** = ಮಿಥ್ಯೆಯೇ, **ಕಲ್ಪಿತ-ನಾಮ-ಮಾತ್ರಃ** = ಕಲ್ಪಿತವಾದ ಕೇವಲ ಹೆಸರೇ.

**೨೨೮.** ಗಡಿಗೆಯು ಮಣ್ಣಿನ ಕಾರ್ಯವಾಗಿದ್ದರೂ ಎಲ್ಲೆಲ್ಲಿಯೂ ಮಣ್ಣಿನ ರೂಪವೇ ಆಗಿರುವುದರಿಂದ ಮಣ್ಣಿಗಿಂತ ಬೇರೆಯಾಗಿ ಇರುವುದಿಲ್ಲ. ಗಡಿಗೆ ಎಂಬ ರೂಪವು ಬೇರೆಯಾಗಿ ಕಂಡುಬರುವುದಿಲ್ಲ. ಹೀಗಿರುವಾಗ ಗಡಿಗೆಯು ಎಲ್ಲಿಂದ ಬಂತು? ಅದು ಮಿಥ್ಯೆಯೇ, ಕಲ್ಪಿತವಾದ ಕೇವಲ ಹೆಸರೇ.[೧]

[೧ 'ವಸ್ತುವಿನ ಪರಿಣಾಮವು ವಾಕ್ಕನ್ನು ಅವಲಂಬಿಸಿರುವ ಕೇವಲ ಹೆಸರೇ; ಮಣ್ಣೆಂಬುದೇ ಸತ್ಯವು' **ವಾಚಾರಂಭಣಂ ವಿಕಾರೋ ನಾಮಧೇಯಂ ಮೃತ್ತಿಕೇತ್ಯೇವ ಸತ್ಯಮ್** (ಛಾಂದೋಗ್ಯ ಉ. ೬. ೧. ೪). ]

**ಕೇನಾಪಿ ಮೃದ್ಭಿನ್ನತಯಾ ಸ್ವರೂಪಂ**
**ಘಟಸ್ಯ ಸಂದರ್ಶಯಿತುಂ ನ ಶಕ್ಯತೇ ।**
**ಅತೋ ಘಟಃ ಕಲ್ಪಿತ ಏವ ಮೋಹಾ-**
**ನ್ಮೃದೇವ ಸತ್ಯಂ ಪರಮಾರ್ಥಭೂತಮ್ ॥ ೨೨೯ ॥**

**ಮೃತ್-ಭಿನ್ನತಯಾ** = ಮಣ್ಣಿಗಿಂತ ಬೇರೆಯಾಗಿ **ಘಟಸ್ಯ** = ಗಡಿಗೆಯ **ಸ್ವರೂಪಂ** = ಸ್ವರೂಪವನ್ನು **ಸಂದರ್ಶಯಿತುಂ** = ತೋರಿಸಿಕೊಡಲು **ಕೇನ ಅಪಿ**= ಯಾವನಿಂದಲೂ **ನ ಶಕ್ಯತೇ** = ಸಾಧ್ಯವಿಲ್ಲ; **ಅತಃ** = ಆದುದರಿಂದ **ಘಟಃ** = ಗಡಿಗೆ

ಯೆಂಬುದು **ಮೋಹಾತ್** = ಅಜ್ಞಾನದಿಂದ **ಕಲ್ಪಿತಃ** = ಕಲ್ಪಿತವಾಗಿದೆ, **ಮೃತ್ ಏವ** = ಮಣ್ಣೆಂಬುದೇ **ಪರಮಾರ್ಥಭೂತಂ** = ಪರಮಾರ್ಥವಾದ **ಸತ್ಯಂ** = ಸತ್ಯವು.

**೨೨೯.** ಗಡಿಗೆಯ ಸ್ವರೂಪವು ಮಣ್ಣಿಗಿಂತ ಬೇರೆಯೆಂದು ತೋರಿಸಿ ಕೊಡುವುದು ಯಾವನಿಂದಲೂ ಸಾಧ್ಯವಾಗುವುದಿಲ್ಲ; ಆದುದರಿಂದ ಗಡಿಗೆ ಯೆಂಬುದು ಅಜ್ಞಾನದಿಂದ ಕಲ್ಪಿತವಾದುದೇ. ಮಣ್ಣೆಂಬುದೇ ಪರಮಾರ್ಥ ವಾದ ಸತ್ಯವು.

**ಸದ್ಬ್ರಹ್ಮಕಾರ್ಯಂ ಸಕಲಂ ಸದೇವಂ**
**ತನ್ಮಾತ್ರಮೇತನ್ನ ತತೋಽನ್ಯದಸ್ತಿ ।**
**ಅಸ್ತೀತಿ ಯೋ ವಕ್ತಿ ನ ತಸ್ಯ ಮೋಹೋ**
**ವಿನಿರ್ಗತೋ ನಿದ್ರಿತವತ್ಪ್ರಜಲ್ಪಃ ॥ ೨೩೦ ॥**

**ಏವಂ** = ಹೀಗೆ **ಸದ್-ಬ್ರಹ್ಮಕಾರ್ಯಂ** = ಸದ್ಬ್ರಹ್ಮದ ಕಾರ್ಯವಾದ **ಸಕಲಂ** = ಇದೆಲ್ಲವೂ **ಸತ್** = ಸದ್ವಸ್ತುವೇ, **ಏತತ್** = ಇದು **ತತ್-ಮಾತ್ರಂ** = ಅದೇ, **ತತಃ** = ಅದಕ್ಕಿಂತ **ಅನ್ಯತ್** = ಬೇರೊಂದು ವಸ್ತುವು **ನ ಅಸ್ತಿ** = ಇರುವುದಿಲ್ಲ; **ಯಃ** = ಯಾವನು **ಅಸ್ತಿ ಇತಿ** = ಇದೆ ಎಂದು **ವಕ್ತಿ** = ಹೇಳುತ್ತಾನೆಯೊ **ತಸ್ಯ** = ಅವನ **ಮೋಹಃ** = ಅಜ್ಞಾನವು **ನ ವಿನಿರ್ಗತಃ** = ಹೋಗಿರುವುದಿಲ್ಲ; **ನಿದ್ರಿತವತ್** = ನಿದ್ರಿಸು ತ್ತಿರುವವನಂತೆ **ಪ್ರಜಲ್ಪಃ** = ಕನವರಿಕೆಯ ಮಾತೇ.

**೨೩೦.** ಹೀಗೆ ಸದ್ಬ್ರಹ್ಮದ ಕಾರ್ಯವಾದ ಈ ಸಮಸ್ತ ಜಗತ್ತೂ ಸದ್ವಸ್ತುವೇ, ಅದಕ್ಕಿಂತಲೂ ಬೇರೆಯಾದ ವಸ್ತುವು ಇರುವುದಿಲ್ಲ. ಯಾವನು (ಬ್ರಹ್ಮಕ್ಕಿಂತ ಭಿನ್ನವಾದುದು) ಇದೆ ಎಂದು ಹೇಳುತ್ತಾನೆಯೊ ಅವನ ಅಜ್ಞಾನವು ಅವನನ್ನು ಬಿಟ್ಟು ಹೋಗಿರುವುದಿಲ್ಲ. ಅವನ ಮಾತುಗಳು ನಿದ್ರಿಸುತ್ತಿರುವವನ ಕನವರಿಕೆಯ ಮಾತಿನಂತೆ.

**ಬ್ರಹ್ಮೈವೇದಂ ವಿಶ್ವಮಿತ್ಯೇವ ವಾಣೀ**
**ಶ್ರೌತೀ ಬ್ರೂತೇಽಥರ್ವನಿಷ್ಠಾ ವರಿಷ್ಠಾ ।**
**ತಸ್ಮಾದೇತದ್ ಬ್ರಹ್ಮಮಾತ್ರಂ ಹಿ ವಿಶ್ವಂ**
**ನಾಧಿಷ್ಠಾನಾದ್ ಭಿನ್ನತಾಽರೋಪಿತಸ್ಯ ॥ ೨೩೧ ॥**

**ಇದಂ ವಿಶ್ವಂ** = ಈ ಜಗತ್ತೆಲ್ಲವೂ **ಬ್ರಹ್ಮ ಏವ** = ಬ್ರಹ್ಮವೇ **ಇತಿ ಏವ** = ಎಂದೇ **ಅಥರ್ವನಿಷ್ಠಾ** = ಅಥರ್ವಶಿರಸ್ಸಿನಲ್ಲಿರುವ **ವರಿಷ್ಠಾ** = ಶ್ರೇಷ್ಠವಾದ **ಶ್ರೌತೀ ವಾಣೀ** = ಶ್ರುತಿಯ ವಾಣಿಯು **ಬ್ರೂತೇ** = ಹೇಳುತ್ತಿರುವುದು; **ತಸ್ಮಾತ್** = ಆದುದ ರಿಂದ **ಏತತ್ ವಿಶ್ವಂ** = ಈ ವಿಶ್ವವು **ಬ್ರಹ್ಮಮಾತ್ರಂ** = ಬ್ರಹ್ಮಮಾತ್ರವೇ, **ಹಿ** =

ಏಕೆಂದರೆ **ಆರೋಪಿತಸ್ಯ** = ಆರೋಪಿತವಾದ ವಸ್ತುವಿಗೆ **ಅಧಿಷ್ಠಾನಾತ್** = ಆಶ್ರಯಕ್ಕಿಂತಲೂ **ಭಿನ್ನತಾ** = ಪೃಥಗ್ಭಾವವು **ನ** = ಇಲ್ಲವು.

**೨೩೧.** 'ಈ ಜಗತ್ತೆಲ್ಲವೂ ಬ್ರಹ್ಮವೇ'[೧] ಎಂದೇ ಅಥರ್ವಶಿರಸ್ಸಿನಲ್ಲಿರುವ ಶ್ರೇಷ್ಠವಾದ ಶ್ರುತಿವಾಣಿಯು ಹೇಳುತ್ತಿರುವುದು. ಆದುದರಿಂದ ಈ ವಿಶ್ವವು ಕೇವಲ ಬ್ರಹ್ಮವೇ; ಏಕೆಂದರೆ ಆರೋಪಿತವಾದ ವಸ್ತುವಿಗೆ ತನ್ನ ಆಶ್ರಯಕ್ಕಿಂತಲೂ ಭಿನ್ನವಾದ ಅಸ್ತಿತ್ವವು ಇರಲಾರದು.[೨]

[[೧] ಛಾಂದೋಗ್ಯಶ್ರುತಿಯು ಪ್ರಕಾರ ಹೇಳಿದ ಅರ್ಥವನ್ನೇ ಆಥರ್ವಣಿಕ-ಶ್ರುತಿಯಿಂದ ಸ್ಪಷ್ಟಪಡಿಸಿದೆ. **ಬ್ರಹ್ಮೈವೇದಂ ವಿಶ್ವಮಿದಂ ವರಿಷ್ಠಮ್** (ಮುಂಡಕ ಉ. ೨. ೨. ೧೨).

[೨] ಹಗ್ಗದಲ್ಲಿ ಆರೋಪಿಸಲ್ಪಟ್ಟ ಹಾವು ತನಗೆ ಆಶ್ರಯವಾಗಿರುವ ಹಗ್ಗಕ್ಕಿಂತ ಬೇರೆಯಾಗಿರಲಾರದು. ಹಾಗೆಯೇ ಬ್ರಹ್ಮದಲ್ಲಿ ಆರೋಪಿತವಾಗಿರುವ ಪ್ರಪಂಚಕ್ಕೆ ಬ್ರಹ್ಮಕ್ಕಿಂತಲೂ ಬೇರೆ ಸ್ಥಿತಿಯು ಇರುವುದಿಲ್ಲ.]

**ಸತ್ಯಂ ಯದಿ ಸ್ಯಾಜ್ಜಗದೇತದಾತ್ಮನೋಽ-**
**ನಂತತ್ವಹಾನಿರ್ನಿಗಮಾಪ್ರಮಾಣತಾ ।**
**ಅಸತ್ಯವಾದಿತ್ವಮಪೀಶಿತುಃ ಸ್ಯಾ-**
**ನ್ನೈತತ್ತ್ರಯಂ ಸಾಧು ಹಿತಂ ಮಹಾತ್ಮನಾಮ್ ॥ ೨೩೨ ॥**

**ಏತತ್ ಜಗತ್** = ಈ ಜಗತ್ತು **ಸತ್ಯಂ ಸ್ಯಾತ್ ಯದಿ** = ಸತ್ಯವಾಗುವುದಾದರೆ **ಆತ್ಮನಃ** = ಆತ್ಮನ **ಅನಂತತ್ವಹಾನಿಃ** = ಅನಂತತ್ವಕ್ಕೆ ಹಾನಿಯುಂಟಾಗುತ್ತದೆ, **ನಿಗಮ-ಅಪ್ರಮಾಣತಾ** = ವೇದವು ಅಪ್ರಮಾಣವಾಗುವುದು, **ಈಶಿತುಃ** = ಈಶ್ವರನಿಗೆ **ಅಸತ್ಯವಾದಿತ್ವಮ್ ಅಪಿ** = ಅಸತ್ಯವಾದಿತ್ವವೂ ಕೂಡ **ಸ್ಯಾತ್** = ಉಂಟಾಗುವುದು; **ಏತತ್ ತ್ರಯಂ** = ಈ ಮೂರು **ಮಹಾತ್ಮನಾಂ** = ಮಹಾತ್ಮರಿಗೆ **ಸಾಧು ಹಿತಂ ನ** = ಸಾಧುವೂ ಅಲ್ಲ, ಹಿತವೂ ಅಲ್ಲ.

**೨೩೨.** ಈ ಜಗತ್ತು ಸತ್ಯವಾಗುವುದಾದರೆ ಆತ್ಮನ ಅನಂತತ್ವಕ್ಕೆ ಹಾನಿಯುಂಟಾಗುತ್ತದೆ,[೧] ಶಾಸ್ತ್ರವು ಅಪ್ರಮಾಣವಾಗುತ್ತದೆ,[೨] ಈಶ್ವರನು ಅಸತ್ಯವನ್ನು ಹೇಳಿದವನಾಗುತ್ತಾನೆ.[೩] ಈ ಮೂರೂ ಮಹಾತ್ಮರಿಗೆ ಸಾಧುವೂ ಅಲ್ಲ, ಹಿತವೂ ಅಲ್ಲ.

[ಇಲ್ಲಿ ಪ್ರಪಂಚವು ಅಸತ್ಯವೆಂದು ಯುಕ್ತಿಯ ಮೂಲಕವೂ ಸಾಧಿಸಿದೆ.
[೧] ಜಗತ್ತಿನಿಂದ ಆತ್ಮನಿಗೆ ಪರಿಚ್ಛೇದವುಂಟಾಗುವುದರಿಂದ.

೨ ಅನಂತತ್ವವು ಹೋದರೆ ಸತ್ಯಂ ಜ್ಞಾನಮ್ ಅನಂತಂ ಬ್ರಹ್ಮ (ತೈತ್ತಿರೀಯ ಉ. ೨. ೧) ಮೊದಲಾದ ವಾಕ್ಯಗಳು ಬಾಧಿತವಾಗುತ್ತವೆ.

೩ ಪರಮ ಆಪ್ತನೂ ಸರ್ವಜ್ಞನೂ ಆದ ಈಶ್ವರನ ಮಾತು ಸುಳ್ಳಾಗಕೂಡದು.]

**ಈಶ್ವರೋ ವಸ್ತುತತ್ತ್ವಜ್ಞೋ ನ ಚಾಹಂ ತೇಷ್ವವಸ್ಥಿತಃ ।**
**ನ ಚ ಮತ್ಸ್ಥಾನಿ ಭೂತಾನೀತ್ಯೇವಮೇವ ವ್ಯಚೀಕ್ಲೃಪತ್ ॥ ೨೩೩ ॥**

**ವಸ್ತುತತ್ತ್ವಜ್ಞಃ** = ವಸ್ತುತತ್ತ್ವವನ್ನು ಬಲ್ಲ **ಈಶ್ವರಃ** = ಈಶ್ವರನು— **ಅಹಂ** = ನಾನು **ತೇಷು** = ಅವುಗಳಲ್ಲಿ **ನ ಅವಸ್ಥಿತಃ** = ಇರುವುದಿಲ್ಲ, **ಚ ಭೂತಾನಿ** = ಮತ್ತು ಪ್ರಾಣಿಗಳು **ನ ಮತ್-ಸ್ಥಾನಿ** = ನನ್ನಲ್ಲಿರುವುದಿಲ್ಲ **ಇತಿ** = ಎಂದು **ಏವಮ್ ಏವ** = ಹೀಗೆಯೇ **ವ್ಯಚೀಕ್ಲೃಪತ್** - ವ್ಯವಸ್ಥೆಮಾಡಿದ್ದಾನೆ.

**೨೩೩.** ವಸ್ತುತತ್ತ್ವವನ್ನು ಬಲ್ಲ ಈಶ್ವರನು 'ನಾನು ಅವುಗಳಲ್ಲಿ ಇಲ್ಲ',[೧] 'ನನ್ನಲ್ಲಿ ಪ್ರಾಣಿಗಳು ಇರುವುದಿಲ್ಲ'[೨] ಎಂದು ಹೀಗೆಯೇ ವ್ಯವಸ್ಥೆಮಾಡಿದ್ದಾನೆ.

[ಪ್ರಪಂಚದ ಮಿಥ್ಯಾತ್ವವನ್ನು ಸಾಧಿಸಲು ಭಗವದ್ಗೀತೆಯನ್ನೂ ಉದಾಹರಿಸಿದೆ.

೧ ಭಗವದ್ಗೀತಾ ೯. ೪.

೨ ಭಗವದ್ಗೀತಾ ೯. ೫.]

**ಯದಿ ಸತ್ಯಂ ಭವೇದ್ವಿಶ್ವಂ ಸುಷುಪ್ತಾವುಪಲಭ್ಯತಾಮ್ ।**
**ಯನ್ನೋಪಲಭ್ಯತೇ ಕಿಂಚಿದತೋಽಸತ್ ಸ್ವಪ್ನವನ್ಮೃಷಾ ॥ ೨೩೪ ॥**

**ವಿಶ್ವಂ** = ವಿಶ್ವವು **ಸತ್ಯಂ ಭವೇತ್ ಯದಿ** = ಸತ್ಯವಾಗಿರುವುದಾದರೆ **ಸುಷುಪ್ತೌ** = ಸುಷುಪ್ತಿಯಲ್ಲಿ **ಉಪಲಭ್ಯತಾಂ** = ಗೋಚರವಾಗಲಿ; **ಯತ್** = ಯಾವ ಕಾರಣದಿಂದ **ಕಿಂಚಿತ್** = ಸ್ವಲ್ಪವೂ **ನ ಉಪಲಭ್ಯತೇ** = ಗೋಚರಿಸುವುದಿಲ್ಲವೊ **ಅತಃ** = ಆ ಕಾರಣ ದಿಂದಲೇ **ಅಸತ್** = ಅಸತ್ತೇ, **ಸ್ವಪ್ನವತ್** = ಸ್ವಪ್ನದಂತೆ **ಮೃಷಾ** = ಸುಳ್ಳು.

**೨೩೪.** ವಿಶ್ವವು ಸತ್ಯವಾಗಿರುವುದಾದರೆ ಸುಷುಪ್ತಿಯಲ್ಲಿ ಗೋಚರ ವಾಗಲಿ! ಅಲ್ಲಿ ಸ್ವಲ್ಪವೂ ಗೋಚರಿಸುವುದಿಲ್ಲವಾದುದರಿಂದ ಅದು ಅಸದ್ವ ಸ್ತುವೇ, ಸ್ವಪ್ನದಂತೆ ಸುಳ್ಳೇ.

**ಅತಃ ಪೃಥಙ್ನಾಸ್ತಿ ಜಗತ್ ಪರಾತ್ಮನಃ**
**ಪೃಥಕ್ ಪ್ರತೀತಿಸ್ತು ಮೃಷಾ ಗುಣಾದಿವತ್ ।**
**ಆರೋಪಿತಸ್ಯಾಸ್ತಿ ಕಿಮರ್ಥವತ್ತಾ-**
**ಧಿಷ್ಠಾನಮಾಭಾತಿ ತಥಾ ಭ್ರಮೇಣ ॥ ೨೩೫ ॥**

**ಅತಃ** = ಆದುದರಿಂದ **ಜಗತ್** = ಜಗತ್ತು **ಪರಾತ್ಮನಃ** = ಪರಮಾತ್ಮನಿಗಿಂತ **ಪೃಥಕ್** = ಬೇರೆಯಾಗಿ **ನ ಅಸ್ತಿ** = ಇರುವುದಿಲ್ಲ; **ಪೃಥಕ್-ಪ್ರತೀತಿಃ**=ಬೇರೆಯಾಗಿರುವಂತೆ ತೋರುವುದು **ಗುಣಾದಿವತ್** = ಗುಣವೇ ಮೊದಲಾದುವುಗಳ ಹಾಗೆ **ಮೃಷಾ ತು**= ಮಿಥ್ಯೆಯು; **ಆರೋಪಿತಸ್ಯ**=ಆರೋಪಿಸಲ್ಪಟ್ಟಿರುವ ವಸ್ತುವಿಗೆ **ಅರ್ಥವತ್ತಾ**= ಪ್ರಯೋಜನವು **ಕಿಮ್ ಅಸ್ತಿ** = ಇದೆಯೆ? **ಅಧಿಷ್ಠಾನಂ** = ಅಧಿಷ್ಠಾನವು **ಭ್ರಮೇಣ**= ಭ್ರಾಂತಿಯಿಂದ **ತಥಾ** = ಹಾಗೆ **ಆಭಾತಿ** = ತೋರುತ್ತದೆ.

**೨೩೫.** ಆದುದರಿಂದ ಜಗತ್ತು ಪರಮಾತ್ಮನಿಗಿಂತಲೂ ಬೇರೆಯಾಗಿರುವುದಿಲ್ಲ. ಬೇರೆಯಾಗಿರುವಂತೆ ತೋರುವುದು— ಗುಣವೇ ಮೊದಲಾದುವುಗಳು ಬೇರೆಯಾಗಿ ತೋರುವಂತೆ[೧]—ಮಿಥ್ಯೆಯಾಗಿರುತ್ತದೆ. (ಅಧಿಷ್ಠಾನವನ್ನು ಬಿಟ್ಟರೆ) ಆರೋಪಿತವಾಗಿರುವ ವಸ್ತುವಿಗೆ ಯಾವ ಪ್ರಯೋಜನವಿದೆ? ಅಧಿಷ್ಠಾನವೇ[೨] ಭ್ರಾಂತಿಯಿಂದ ಹಾಗೆ ತೋರುತ್ತದೆ.

[೧ ಆಕಾಶದಲ್ಲಿ ನೀಲಿಬಣ್ಣವು ಕಾಣುವಂತೆ–**ಗಗನಾದೌ ನೀಲಗುಣಾದಿ-ಪ್ರತೀತಿವತ್.** ೧೯೫ನೆಯ ಶ್ಲೋಕವನ್ನು ನೋಡಿ.

೨ ಅಧಿಷ್ಠಾನವಾದ ಹಗ್ಗವೇ ಹಾವಿನಂತೆ ತೋರುತ್ತದೆ.]

**ಭ್ರಾಂತಸ್ಯ ಯದ್ಯದ್ ಭ್ರಮತಃ ಪ್ರತೀತಂ**
**ಬ್ರಹ್ಮೈವ ತತ್ತದ್ ರಜತಂ ಹಿ ಶುಕ್ತಿಃ ।**
**ಇದಂತಯಾ ಬ್ರಹ್ಮ ಸದೈವ ರೂಪ್ಯತೇ**
**ತ್ವಾರೋಪಿತಂ ಬ್ರಹ್ಮಣಿ ನಾಮ-ಮಾತ್ರಮ್ ॥ ೨೩೬ ॥**

**ಭ್ರಾಂತಸ್ಯ** = ಭ್ರಾಂತಿಗೊಂಡವನಿಗೆ **ಯತ್ ಯತ್** = ಯಾವಯಾವುದು **ಭ್ರಮತಃ** = ಭ್ರಮೆಯಿಂದ **ಪ್ರತೀತಂ**=[ಬೇರೆಯಾಗಿ] ತೋರುವುದೊ **ತತ್ ತತ್**= ಅದೆಲ್ಲವೂ **ಬ್ರಹ್ಮ ಏವ** = ಬ್ರಹ್ಮವೇ; **ರಜತಂ ಹಿ** = ಬೆಳ್ಳಿಯು **ಶುಕ್ತಿಃ** = ಕಪ್ಪೆಯ ಚಿಪ್ಪೇ; **ಬ್ರಹ್ಮ**=ಬ್ರಹ್ಮವು **ಇದಂತಯಾ**='ಇದು' ಎಂಬ ಭಾವದಿಂದ **ಸದಾ ಏವ**= ಯಾವಾಗಲೂ **ರೂಪ್ಯತೇ**=ತೋರುತ್ತಿರುವುದು; **ಬ್ರಹ್ಮಣಿ**=ಬ್ರಹ್ಮದಲ್ಲಿ **ಆರೋಪಿತಂ ತು** = ಆರೋಪಿತವಾಗಿರುವುದು **ನಾಮ-ಮಾತ್ರಮ್** = ಕೇವಲ ಹೆಸರೇ.

**೨೩೬.** ಭ್ರಾಂತಿಗೊಂಡವನಿಗೆ ಯಾವಯಾವುದು ಭ್ರಮೆಯಿಂದ (ಬೇರೆಯಾಗಿ) ತೋರುವುದೊ ಅದೆಲ್ಲವೂ ಬ್ರಹ್ಮವಸ್ತುವೇ. ಬೆಳ್ಳಿಯಂತೆ ತೋರುವುದು ಕಪ್ಪೆಯ ಚಿಪ್ಪೇ. 'ಇದು' ಎಂಬ ಭಾವದಿಂದ ಬ್ರಹ್ಮವು ಯಾವಾಗಲೂ ತೋರುತ್ತಿರುವುದು; ಬ್ರಹ್ಮದಲ್ಲಿ ಆರೋಪಿಸಲ್ಪಟ್ಟ ವಸ್ತುವು ಕೇವಲ ಹೆಸರೇ.

ಅತಃ ಪರಂ ಬ್ರಹ್ಮ ಸದದ್ವಿತೀಯಂ
ವಿಶುದ್ಧ-ವಿಜ್ಞಾನ-ಘನಂ ನಿರಂಜನಮ್ ।
ಪ್ರಶಾಂತಮಾದ್ಯಂತ-ವಿಹೀನಮಕ್ರಿಯಂ
ನಿರಂತರಾನಂದ-ರಸ-ಸ್ವರೂಪಮ್ ॥ ೨೩೭ ॥

ನಿರಸ್ತ-ಮಾಯಾಕೃತ-ಸರ್ವಭೇದಂ
ನಿತ್ಯಂ ಸುಖಂ ನಿಷ್ಕಲಮಪ್ರಮೇಯಮ್ ।
ಅರೂಪಮವ್ಯಕ್ತಮನಾಖ್ಯಮವ್ಯಯಂ
ಜ್ಯೋತಿಃ ಸ್ವಯಂ ಕಿಂಚಿದಿದಂ ಚಕಾಸ್ತಿ ॥ ೨೩೮ ॥

**ಅತಃ** = ಆದುದರಿಂದ **ಪರಂ ಬ್ರಹ್ಮ** = ಪರಬ್ರಹ್ಮವು **ಸತ್** = ಸದ್ವಸ್ತುವು, **ಅದ್ವಿತೀಯಂ** = ಅದ್ವಯವಾದುದು, **ವಿಶುದ್ಧ-ವಿಜ್ಞಾನ-ಘನಂ** = ವಿಶುದ್ಧವಾದ ವಿಜ್ಞಾನಘನವು, **ನಿರಂಜನಂ** = ನಿರಂಜನವು, **ಪ್ರಶಾಂತಂ** = ಪ್ರಶಾಂತವು, **ಆದಿ-ಅಂತ-ವಿಹೀನಂ** = ಆದ್ಯಂತರಹಿತವು, **ಅಕ್ರಿಯಂ** = ಕ್ರಿಯಾಶೂನ್ಯವು, **ನಿರಂತರ-ಆನಂದ-ರಸ-ಸ್ವರೂಪಂ** = ನಿರಂತರವಾದ ಆನಂದರಸ-ಸ್ವರೂಪವು, **ನಿರಸ್ತ-ಮಾಯಾಕೃತ-ಸರ್ವಭೇದಂ** = ಮಾಯಾಕೃತವಾದ ಸರ್ವಭೇದರಹಿತವಾದುದು, **ನಿತ್ಯಂ** = ನಿತ್ಯವು, **ಸುಖಂ** = ಸುಖಸ್ವರೂಪವು, **ನಿಷ್ಕಲಂ** = ಅವಯವರಹಿತವಾದದ್ದು, **ಅಪ್ರಮೇಯಂ** = ಪ್ರಮಾಣಾತೀತವಾದುದು, **ಅರೂಪಂ** = ರೂಪರಹಿತವಾದುದು, **ಅವ್ಯಕ್ತಂ** = ಅವ್ಯಕ್ತವು, **ಅನಾಖ್ಯಂ** = ನಾಮರಹಿತವಾದುದು, **ಅವ್ಯಯಂ** = ನಾಶರಹಿತವು [ಆದ] **ಇದಂ ಕಿಂಚಿತ್ ಜ್ಯೋತಿಃ ಸ್ವಯಂ** = ಯಾವುದೊ ಒಂದು ಸ್ವಯಂಜ್ಯೋತಿಯು **ಚಕಾಸ್ತಿ** = ಪ್ರಕಾಶಿಸುತ್ತಿರುವುದು.

**೨೩೭-೨೩೮.** ಆದುದರಿಂದ ಪರಬ್ರಹ್ಮವು ಸದ್ವಸ್ತುವಾದದ್ದು, ಅದ್ವಯವಾದದ್ದು, ವಿಶುದ್ಧವಾದ ವಿಜ್ಞಾನಘನವಾದದ್ದು, ನಿರಂಜನವೂ ಪ್ರಶಾಂತವೂ ಆದದ್ದು, ಆದ್ಯಂತರಹಿತವೂ ಕ್ರಿಯಾಶೂನ್ಯವೂ ಆದದ್ದು, ಯಾವಾಗಲೂ ಆನಂದರಸದ ಸ್ವರೂಪವಾದದ್ದು, ಮಾಯಾಕೃತವಾದ ಯಾವ ಭೇದಗಳೂ ಇಲ್ಲದ್ದು, ನಿತ್ಯವೂ ಸುಖಸ್ವರೂಪವೂ ಆದದ್ದು, ಅವಯವಗಳಿಲ್ಲದ್ದು, ಪ್ರಮಾಣಾತೀತವಾದದ್ದು, ರೂಪವಿಲ್ಲದ್ದು, ಅವ್ಯಕ್ತವಾದದ್ದು, ನಾಮರಹಿತವಾದದ್ದು, ನಾಶರಹಿತವಾದದ್ದು-ಇಂಥ ಯಾವುದೋ ಒಂದು ಸ್ವಯಂ ಜ್ಯೋತಿಯು ಪ್ರಕಾಶಿಸುತ್ತಿರುವುದು.

ಜ್ಞಾತೃ-ಜ್ಞೇಯ-ಜ್ಞಾನ-ಶೂನ್ಯಮನಂತಂ ನಿರ್ವಿಕಲ್ಪಕಮ್ ।
ಕೇವಲಾಖಂಡ-ಚಿನ್ಮಾತ್ರಂ ಪರಂ ತತ್ತ್ವಂ ವಿದುರ್ಬುಧಾಃ ॥ ೨೩೯ ॥

**ಜ್ಞಾತೃ-ಜ್ಞೇಯ-ಜ್ಞಾನ-ಶೂನ್ಯಂ**= ಜ್ಞಾತೃ-ಜ್ಞೇಯ-ಜ್ಞಾನ-ಶೂನ್ಯವೂ **ಅನಂತಂ** = ಅನಂತವೂ **ನಿರ್ವಿಕಲ್ಪಕಂ** = ನಿರ್ವಿಶೇಷವೂ **ಕೇವಲ-ಅಖಂಡ-ಚಿನ್ಮಾತ್ರಂ**= ಕೇವಲ ಅಖಂಡಚಿನ್ಮಾತ್ರವೂ ಆದ **ಪರಂ ತತ್ತ್ವಂ** = ಪರತತ್ತ್ವವನ್ನು **ಬುಧಾಃ** = ಜ್ಞಾನಿಗಳು **ವಿದುಃ** = ತಿಳಿಯುತ್ತಾರೆ.

**೨೩೯.** ಜ್ಞಾತೃ-ಜ್ಞೇಯ-ಜ್ಞಾನ ಎಂಬ ತ್ರಿಪುಟೀ-ರಹಿತವಾದ ಅನಂತವಾದ[೧] ನಿರ್ವಿಶೇಷವಾದ ಕೇವಲ ಅಖಂಡಚಿನ್ಮಾತ್ರವಾದ ಪರತತ್ತ್ವವನ್ನು ಜ್ಞಾನಿಗಳು ತಿಳಿಯುತ್ತಾರೆ.

[೧ ಪರಿಚ್ಛೇದಗಳಿಲ್ಲದ.]

**ಅಹೇಯಮನುಪಾದೇಯಂ ಮನೋವಾಚಾಮಗೋಚರಮ್ ।**
**ಅಪ್ರಮೇಯಮನಾದ್ಯಂತಂ ಬ್ರಹ್ಮ ಪೂರ್ಣಮಹಂ ಮಹಃ ॥ ೨೪೦ ॥**

**ಅಹೇಯಂ**= ಬಿಡತಕ್ಕದ್ದಲ್ಲ, **ಅನುಪಾದೇಯಂ**= ಗ್ರಹಿಸತಕ್ಕದ್ದಲ್ಲ, **ಮನಃ-ವಾಚಾಮ್-ಅಗೋಚರಮ್** = ವಾಙ್ಮನಸ್ಸುಗಳಿಗೆ ಗೋಚರಿಸತಕ್ಕದ್ದಲ್ಲ, **ಅಪ್ರಮೇಯಂ** = ಅಳೆಯಲು ಅಶಕ್ಯವಾದುದು, **ಅನಾದಿ-ಅಂತಂ** = ಆದ್ಯಂತಗಳಿಲ್ಲದ್ದು, **ಪೂರ್ಣಂ** = ಪೂರ್ಣವಾದದ್ದು, **ಮಹಃ** = ಮಹಾ ಜ್ಯೋತಿಯು [ಆದ] **ಬ್ರಹ್ಮ**= ಬ್ರಹ್ಮವು **ಅಹಂ** = ಪ್ರತ್ಯಗಾತ್ಮನು.

**೨೪೦.** ಬ್ರಹ್ಮವನ್ನು ಬಿಡುವುದಕ್ಕೆ ಆಗುವುದಿಲ್ಲ, ಗ್ರಹಿಸುವುದಕ್ಕೂ ಆಗುವುದಿಲ್ಲ; ಅದು ವಾಙ್ಮನಸ್ಸುಗಳಿಗೆ ಗೋಚರಿಸದು, ಅಳತೆಗೆ ಮೀರಿದುದು, ಆದಿ-ಅಂತಗಳಿಲ್ಲದ್ದು, ಪೂರ್ಣವಾದದ್ದು, ತೇಜೋರೂಪವಾದದ್ದು ಮತ್ತು ಪ್ರತ್ಯಗಾತ್ಮನಿಗಿಂತ ಭಿನ್ನವಲ್ಲ.

**ತತ್-ತ್ವಂ-ಪದಾಭ್ಯಾಮಭಿಧೀಯಮಾನಯೋ-**
**ರ್ಬ್ರಹ್ಮಾತ್ಮನೋಃ ಶೋಧಿತಯೋರ್ಯದೀತ್ಥಮ್ ।**
**ಶ್ರುತ್ಯಾ ತಯೋಸ್ತತ್ತ್ವಮಸೀತಿ ಸಮ್ಯ-**
**ಗೇಕತ್ವಮೇವ ಪ್ರತಿಪಾದ್ಯತೇ ಮುಹುಃ ॥ ೨೪೧ ॥**

**ಐಕ್ಯಂ ತಯೋರ್ಲಕ್ಷಿತಯೋರ್ನ ವಾಚ್ಯಯೋ-**
**ರ್ನಿಗದ್ಯತೇಽನ್ಯೋಽನ್ಯವಿರುದ್ಧಧರ್ಮಿಣೋಃ ।**
**ಖದ್ಯೋತಭಾನ್ವೋರಿವ ರಾಜಭೃತ್ಯಯೋಃ**
**ಕೂಪಾಂಬುರಾಶ್ಯೋಃ ಪರಮಾಣುಮೇರ್ವೋಃ**
**॥ ೨೪೨ ॥**

**ತತ್-ತ್ವಮ್-ಪದಾಭ್ಯಾಂ** = ತತ್ ತ್ವಮ್ ಎಂಬ ಪದಗಳಿಂದ **ಅಭಿಧೀಯಮಾನಯೋಃ** = ಹೇಳಲ್ಪಡುತ್ತಿರುವ **ಇತ್ಥಂ** = ಹೀಗೆ **ಶೋಧಿತಯೋಃ** = ಶೋಧಿತರಾದ **ತಯೋಃ ಬ್ರಹ್ಮಾತ್ಮನೋಃ** = ಆ ಬ್ರಹ್ಮ ಆತ್ಮ ಇವರಿಗೆ **ಶ್ರುತ್ಯಾ** = ಶ್ರುತಿಯಿಂದ **ತತ್-ತ್ವಮ್-ಅಸಿ ಇತಿ** = 'ಅದು ನೀನಾಗಿರುವೆ' ಎಂದು **ಸಮ್ಯಕ್** = ಚೆನ್ನಾಗಿ **ಏಕತ್ವಮ್ ಏವ** = ಅಭೇದವೇ **ಮುಹುಃ** = ಪುನಃ ಪುನಃ **ಪ್ರತಿಪಾದ್ಯತೇ ಯದಿ** = ಉಪದೇಶಿಸಲ್ಪಡುವುದೇ ಆದರೆ **ಲಕ್ಷಿತಯೋಃ** = ಲಕ್ಷಣೆಯಿಂದ ತೋರುವ **ತಯೋಃ** = ಅವೆರಡಕ್ಕೆ **ಐಕ್ಯಂ** = ಐಕ್ಯವು **ನಿಗದ್ಯತೇ** = ಹೇಳಲ್ಪಡುತ್ತದೆ, **ವಾಚ್ಯಯೋಃ** = [ತತ್-ತ್ವಮ್-ಶಬ್ದಗಳಿಗೆ] ವಾಚ್ಯಾರ್ಥವಾಗಿರುವ **ಅನ್ಯೋನ್ಯ-ವಿರುದ್ಧ-ಧರ್ಮಿಣೋಃ** = ಪರಸ್ಪರ ವಿರುದ್ಧಧರ್ಮಗಳುಳ್ಳ— **ಖದ್ಯೋತ-ಭಾನ್ವೋಃ ಇವ** = ಮಿಂಚುಹುಳು—ಸೂರ್ಯರಂತೆ, **ರಾಜ-ಭೃತ್ಯಯೋಃ [ಇವ]** = ರಾಜ-ಭೃತ್ಯರಂತೆ, **ಕೂಪ-ಅಂಬುರಾಶ್ಯೋಃ** = ಬಾವಿ-ಸಮುದ್ರಗಳಂತೆ, **ಪರಮಾಣು-ಮೇರ್ವೋಃ** = ಪರಮಾಣು-ಮೇರುಪರ್ವತಗಳಂತೆ [ಇರುವ] [**ತಯೋಃ** = ಜೀವಬ್ರಹ್ಮರಿಗೆ] **ನ** = ಅಲ್ಲ.

**೨೪೧-೨೪೨.** ತತ್ ತ್ವಮ್ ಎಂಬ ಪದಗಳಿಂದ ಹೇಳಲ್ಪಡುತ್ತಿರುವ ಮತ್ತು ಹೀಗೆ[೧] ಶೋಧಿತರಾದ ಬ್ರಹ್ಮ,[೨] ಆತ್ಮ[೩]—ಇವರಿಗೆ ಶ್ರುತಿಯು 'ಅದು ನೀನಾಗಿರುವೆ' ಎಂದು ಚೆನ್ನಾಗಿ ಅಭೇದವನ್ನೇ ಪುನಃ ಪುನಃ[೪] ಉಪದೇಶಿಸಿದರೆ ಅದು ಲಕ್ಷಣೆಯಿಂದ ತೋರುವ ಅಭೇದವನ್ನು ಸೂಚಿಸುತ್ತದೆಯೇ ಹೊರತು ಆ ತತ್ ತ್ವಮ್ ಎಂಬ ಪದಗಳಿಗೆ ವಾಚ್ಯವಾಗಿರುವ—ಸೂರ್ಯ ಮತ್ತು ಮಿಂಚುಹುಳು, ರಾಜ ಮತ್ತು ಭೃತ್ಯ, ಸಮುದ್ರ ಮತ್ತು ಬಾವಿ, ಮೇರುಪರ್ವತ ಮತ್ತು ಪರಮಾಣು ಇವುಗಳಂತೆ ಪರಸ್ಪರ ವಿರುದ್ಧಧರ್ಮವುಳ್ಳ—ಈಶ್ವರನಿಗೂ ಜೀವನಿಗೂ ಐಕ್ಯವನ್ನು ಹೇಳಿಲ್ಲ.

[ತತ್ ತ್ವಮ್ ಎಂಬ ಪದಗಳ ಅರ್ಥಗಳನ್ನು ಶೋಧಿಸಿ ವಾಕ್ಯಾರ್ಥವನ್ನು ಹೇಳಲು ಪ್ರಾರಂಭಿಸಿದೆ.

೧ ಹಿಂದೆ ಹೇಳಿದ ಪ್ರಕಾರ.

೨ ಜಗತ್ಕರ್ತೃತ್ವವೇ ಮೊದಲಾದುವುಗಳಿಂದ ವಿಶಿಷ್ಟವಾದ.

೩ ಜಾಗ್ರದಾದಿ-ಅವಸ್ಥೆಗಳಿಂದ ವಿಶಿಷ್ಟನಾದ.

೪ ಛಾಂದೋಗ್ಯೋಪನಿಷತ್ತಿನ ಆರನೆಯ ಅಧ್ಯಾಯದಲ್ಲಿ ತತ್ತ್ವಮಸಿ ವಾಕ್ಯವು ಒಂಬತ್ತು ಸಲ ಬಂದಿದೆ.]

**ತಯೋರ್ವಿರೋಧೋಽಯಮುಪಾಧಿಕಲ್ಪಿತೋ**
**ನ ವಾಸ್ತವಃ ಕಶ್ಚಿದುಪಾಧಿರೇಷಃ ।**
**ಈಶಸ್ಯ ಮಾಯಾ ಮಹದಾದಿ-ಕಾರಣಂ**
**ಜೀವಸ್ಯ ಕಾರ್ಯಂ ಶೃಣು ಪಂಚಕೋಶಮ್ ॥ ೨೪೩ ॥**

**ತಯೋಃ** = ಅವರಿಬ್ಬರಿಗೆ [ತೋರುವ] **ಅಯಂ ವಿರೋಧಃ**= ಈ ವಿರೋಧವು **ಉಪಾಧಿಕಲ್ಪಿತಃ**=ಉಪಾಧಿಯಿಂದ ಕಲ್ಪಿತವಾಗಿರುತ್ತದೆ; **ಏಷಃ ಕಶ್ಚಿತ್ ಉಪಾಧಿಃ**= ಈ ಯಾವ ಉಪಾಧಿಯೂ **ನ ವಾಸ್ತವಃ** = ವಾಸ್ತವವಾದುದಲ್ಲ; **ಶೃಣು** = ಕೇಳು, **ಈಶಸ್ಯ**=ಈಶ್ವರನಿಗೆ **ಮಹದಾದಿ-ಕಾರಣಂ**=ಮಹತ್ ಮೊದಲಾದುವುಗಳಿಗೆ ಕಾರಣ ವಾದ **ಮಾಯಾ** = ಮಾಯೆಯೂ, **ಜೀವಸ್ಯ** = ಜೀವನಿಗೆ **ಕಾರ್ಯಂ** = ಕಾರ್ಯ ವಾದ **ಪಂಚಕೋಶಂ** = ಪಂಚಕೋಶವೂ [ಉಪಾಧಿಯು].

**೨೪೩.** ಜೀವ-ಪರಮಾತ್ಮರಿಗೆ ತೋರುವ ಈ ವಿರೋಧವು ಉಪಾಧಿ ಯಿಂದ ಕಲ್ಪಿತವಾಗಿರುತ್ತದೆ. ಈ ಯಾವ ಉಪಾಧಿಯೂ ವಾಸ್ತವವಾದು ದಲ್ಲ. ಕೇಳು, ಈಶ್ವರನಿಗೆ ಮಹತ್[೧] ಮೊದಲಾದುವುಗಳಿಗೆ ಕಾರಣವಾದ ಮಾಯೆಯೂ, ಜೀವನಿಗೆ ಕಾರ್ಯವಾದ ಪಂಚಕೋಶವೂ[೨] (ಉಪಾಧಿಯು).

[[೧] ಇದು ಮಾಯೆಯ ಮೊದಲನೆಯ ಕಾರ್ಯ.
[೨] ೧೨೫ನೆಯ ಶ್ಲೋಕದ ೨ನೆಯ ಟಿಪ್ಪಣಿಯನ್ನು ನೋಡಿ.]

**ಏತಾವುಪಾಧೀ ಪರಜೀವಯೋಸ್ತಯೋಃ**
**ಸಮ್ಯಙ್ನಿರಾಸೇ ನ ಪರೋ ನ ಜೀವಃ ।**
**ರಾಜ್ಯಂ ನರೇಂದ್ರಸ್ಯ ಭಟಸ್ಯ ಖೇಟಕ-**
**ಸ್ತಯೋರಪೋಹೇ ನ ಭಟೋ ನ ರಾಜಾ ॥ ೨೪೪ ॥**

**ತಯೋಃ ಪರ-ಜೀವಯೋಃ** = ಆ ಪರಮಾತ್ಮ-ಜೀವಾತ್ಮರಿಗೆ **ಏತೌ** = ಈ ಎರಡು **ಉಪಾಧೀ** = ಉಪಾಧಿಗಳಾಗಿವೆ, [ಅವುಗಳ] **ಸಮ್ಯಕ್ ನಿರಾಸೇ**=ಚೆನ್ನಾಗಿ ನಿರಾಸವಾದಾಗ **ಪರಃ ನ**= ಈಶ್ವರನೂ ಅಲ್ಲ **ಜೀವಃ ನ**=ಜೀವನೂ ಅಲ್ಲ; **ನರೇಂದ್ರಸ್ಯ**= ರಾಜನಿಗೆ **ರಾಜ್ಯಂ** = ರಾಜ್ಯವೂ **ಭಟಸ್ಯ** = ಯೋಧನಿಗೆ **ಖೇಟಕಃ** = ಗುರಾಣಿಯೂ [ಉಪಾಧಿಗಳು]; **ತಯೋಃ**=ಅವುಗಳ **ಅಪೋಹೇ**= ಪರಿತ್ಯಾಗವಾದಾಗ **ರಾಜಾ ನ**= ರಾಜನೂ ಅಲ್ಲ **ಭಟಃ ನ** = ಯೋಧನೂ ಅಲ್ಲ.

**೨೪೪.** ಮಾಯೆ ಪಂಚಕೋಶ ಎಂಬ ಉಪಾಧಿಗಳನ್ನು ಚೆನ್ನಾಗಿ ತಿರಸ್ಕರಿಸಿದರೆ ಈಶ್ವರನೂ ಅಲ್ಲ, ಜೀವನೂ ಅಲ್ಲ. ರಾಜನಿಗೆ ರಾಜ್ಯವೂ ಯೋಧನಿಗೆ ಗುರಾಣಿಯೂ ಉಪಾಧಿಗಳು; ಅವೆರಡೂ ಇಲ್ಲದಿದ್ದರೆ ರಾಜನೂ ಅಲ್ಲ, ಯೋಧನೂ ಅಲ್ಲ.

**ಅಥಾತ ಆದೇಶ ಇತಿ ಶ್ರುತಿಃ ಸ್ವಯಂ**
**ನಿಷೇಧತಿ ಬ್ರಹ್ಮಣಿ ಕಲ್ಪಿತಂ ದ್ವಯಮ್ ।**
**ಶ್ರುತಿ-ಪ್ರಮಾಣಾನುಗೃಹೀತ-ಬೋಧಾತ್**
**ತಯೋರ್ನಿರಾಸಃ ಕರಣೀಯ ಏವಮ್ ॥ ೨೪೫ ॥**

**ಅಥ** = ಈಗ **ಅತಃ** = ಆದುದರಿಂದ **ಆದೇಶಃ** = ನಿರ್ದೇಶವು **ಇತಿ** = ಎಂಬ **ಶ್ರುತಿಃ** = ಉಪನಿಷದ್ವಾಕ್ಯವು **ಸ್ವಯಂ** = ತಾನಾಗಿಯೇ **ಬ್ರಹ್ಮಣಿ** = ಬ್ರಹ್ಮದಲ್ಲಿ **ಕಲ್ಪಿತಂ** = ಕಲ್ಪಿತವಾದ **ದ್ವಯಂ** = ಎರಡು ಉಪಾಧಿಗಳನ್ನು **ನಿಷೇಧತಿ** = ನಿಷೇಧಿಸುತ್ತದೆ; **ಶ್ರುತಿ-ಪ್ರಮಾಣ-ಅನುಗೃಹೀತ-ಬೋಧಾತ್** = ಶ್ರುತಿಪ್ರಮಾಣದಿಂದ ಅನುಗೃಹೀತವಾದ ಜ್ಞಾನದಿಂದ **ತಯೋಃ** = ಅವೆರಡರ **ನಿರಾಸಃ** = ತಿರಸ್ಕಾರವು **ಏವಮ್** = ಹೀಗೆ **ಕರಣೀಯಃ** = ಮಾಡತಕ್ಕದ್ದು.

**೨೪೫.** 'ಈಗ ಆದುದರಿಂದ (ಬ್ರಹ್ಮದ) ನಿರ್ದೇಶ'[1] ಎಂಬ ಶ್ರುತಿಯು ಬ್ರಹ್ಮದಲ್ಲಿ ಕಲ್ಪಿತವಾದ ಈ ಎರಡು ಉಪಾಧಿಗಳನ್ನು ತಾನೇ ನಿಷೇಧಿಸುತ್ತದೆ. ಶ್ರುತಿಪ್ರಮಾಣದಿಂದ ಅನುಗೃಹೀತವಾದ ಜ್ಞಾನದಿಂದ ಅವೆರಡನ್ನೂ[2] ಹೀಗೆ ನಿರಾಸಮಾಡಬೇಕು.

[[1] 'ಹೀಗಲ್ಲ ಹೀಗಲ್ಲ' **ನೇತಿ ನೇತಿ** (ಬೃಹದಾರಣ್ಯಕ ಉ. ೨. ೩. ೬).
[2] ಜೀವನ ಉಪಾಧಿಯಾದ ಪಂಚಕೋಶಗಳು, ಈಶ್ವರನ ಉಪಾಧಿಯಾದ ಮಾಯೆ—ಇವೆರಡನ್ನೂ.]

**ನೇದಂ ನೇದಂ ಕಲ್ಪಿತತ್ವಾನ್ನ ಸತ್ಯಂ**
**ರಜ್ಜುದೃಷ್ಟ-ವ್ಯಾಲವತ್ ಸ್ವಪ್ನವಚ್ಚ ।**
**ಇತ್ಥಂ ದೃಶ್ಯಂ ಸಾಧುಯುಕ್ತ್ಯಾ ವ್ಯಪೋಹ್ಯ**
**ಜ್ಞೇಯಃ ಪಶ್ಚಾದೇಕಭಾವಸ್ತಯೋರ್ಯಃ ॥ ೨೪೬ ॥**

**ನ ಇದಂ** = ಈ [ಮಾಯೆಯೂ] ಅಲ್ಲ **ನ ಇದಂ** = ಈ [ಪಂಚಕೋಶವೂ] ಅಲ್ಲ, **ರಜ್ಜುದೃಷ್ಟ-ವ್ಯಾಲವತ್** = ಹಗ್ಗದಲ್ಲಿ ಕಂಡುಬರುವ ಹಾವಿನಂತೆಯೂ **ಸ್ವಪ್ನವತ್ ಚ** = ಮತ್ತು ಕನಸಿನಂತೆಯೂ **ಕಲ್ಪಿತತ್ವಾತ್** = ಕಲ್ಪಿತವಾದುದರಿಂದ **ನ ಸತ್ಯಂ** = ಸತ್ಯವಾದುದಲ್ಲ; **ಇತ್ಥಂ** = ಹೀಗೆ **ದೃಶ್ಯಂ** = ದೃಶ್ಯವಾದುದನ್ನು **ಸಾಧು-ಯುಕ್ತ್ಯಾ** = ಸರಿಯಾದ ಯುಕ್ತಿಯಿಂದ **ವ್ಯಪೋಹ್ಯ** = ನಿರಾಕರಿಸಿ **ಪಶ್ಚಾತ್** = ಅನಂತರ **ತಯೋಃ** = ಜೀವ-ಪರರಿಗೆ **ಏಕಭಾವಃ** = ಐಕ್ಯವು **ಜ್ಞೇಯಃ** = ತಿಳಿಯತಕ್ಕದ್ದು.

**೨೪೬.** (ಆತ್ಮನು) ಈ (ಮಾಯೆಯೂ) ಅಲ್ಲ, ಈ (ಪಂಚಕೋಶವೂ) ಅಲ್ಲ. (ಇವೆರಡೂ) ಹಗ್ಗದಲ್ಲಿ ಕಂಡುಬರುವ ಹಾವಿನಂತೆಯೂ, ಕನಸಿನಂತೆಯೂ ಕಲ್ಪಿತವಾಗಿರುವುದರಿಂದ ಸತ್ಯವಲ್ಲ. ಹೀಗೆ ದೃಶ್ಯವಾದ ಜಗತ್ತನ್ನು ಸರಿಯಾದ ಯುಕ್ತಿಯಿಂದ ನಿರಾಕರಿಸಿ ಅನಂತರ ಈ ಜೀವ-ಪರಮಾತ್ಮರಿಗೆ ಐಕ್ಯವನ್ನು ತಿಳಿದುಕೊಳ್ಳಬೇಕು.

**ತತಸ್ತು ತೌ ಲಕ್ಷಣಯಾ ಸುಲಕ್ಷ್ಯೌ**
**ತಯೋರಖಂಡೈಕ-ರಸತ್ವ-ಸಿದ್ಧಯೇ ।**
**ನಾಲಂ ಜಹತ್ಯಾ ನ ತಥಾಽಜಹತ್ಯಾ**
**ಕಿಂತೂಭಯಾರ್ಥಾತ್ಮಿಕಯೈವ ಭಾವ್ಯಮ್ ॥ ೨೪೭ ॥**

**ತತಃ** = ಆದುದರಿಂದ **ತಯೋಃ** = ಆ ಜೀವ-ಪರರ **ಅಖಂಡ-ಏಕರಸತ್ವ-ಸಿದ್ಧಯೇ** = ಅಖಂಡೈಕ-ರಸತ್ವ-ಸಿದ್ಧಿಗೋಸ್ಕರ **ತೌ ತು** = ಅವರಿಬ್ಬರೂ **ಲಕ್ಷಣಯಾ** = ಲಕ್ಷಣೆಯಿಂದ **ಸುಲಕ್ಷ್ಯೌ** = ತೋರತಕ್ಕವರು; **ಜಹತ್ಯಾ** = ಜಹಲ್ಲಕ್ಷಣೆಯಿಂದಲೇ **ನ** = ಸಾಧ್ಯವಲ್ಲವು, **ತಥಾ** = ಹಾಗೆಯೇ **ಅಜಹತ್ಯಾ** = ಅಜಹಲ್ಲಕ್ಷಣೆಯಿಂದಲೂ **ನ ಅಲಂ** = ಸಾಧ್ಯವಲ್ಲವು; **ಕಿಂ ತು** = ಮತ್ತೇನೆಂದರೆ **ಉಭಯಾರ್ಥಾತ್ಮಿಕಯಾ ಏವ** = ಜಹತ್-ಅಜಹತ್-ಉಭಯುಸ್ವರೂಪವಾಗಿರುವ ಲಕ್ಷಣೆಯಿಂದಲೇ **ಭಾವ್ಯಂ** = ಅರಿತುಕೊಳ್ಳತಕ್ಕದ್ದು.

**೨೪೭.** ಆದುದರಿಂದ ಜೀವ-ಪರಮಾತ್ಮರ ಅಖಂಡೈಕ-ರಸತ್ವ-ಸಿದ್ಧಿಗಾಗಿ[೧] ಅವರಿಬ್ಬರನ್ನೂ ಲಕ್ಷಣೆಯಿಂದಲೇ[೨] ತಿಳಿದುಕೊಳ್ಳಬೇಕು. ಆದರೆ ಆ ಸಿದ್ಧಿಯು ಕೇವಲ ಜಹಲ್ಲಕ್ಷಣೆಯಿಂದಲೂ ಆಗುವುದಿಲ್ಲ, ಅಜಹಲ್ಲಕ್ಷಣೆಯಿಂದಲೂ ಆಗುವುದಿಲ್ಲ; ಜಹದಜಹದ್-ಉಭಯುಸ್ವರೂಪವಾಗಿರುವ ಲಕ್ಷಣೆಯಿಂದಲೇ ಆಗಬೇಕಾಗಿದೆ.

[[೧] ಅಸಂಸೃಷ್ಟ-ಕೂಟಸ್ಥ-ಶುದ್ಧಸ್ವರೂಪದ ಸಿದ್ಧಿಗಾಗಿ.

[೨] ಪದದ ಅರ್ಥವು ಎರಡು ವಿಧವಾಗಿದೆ—ಶಕ್ಯ ಮತ್ತು ಲಕ್ಷ್ಯ. ಒಂದು ಪದಕ್ಕೆ ರೂಢಿಯಿಂದ ಬಂದಿರುವ ಅರ್ಥವು ಶಕ್ಯಾರ್ಥ ಅಥವಾ ವಾಚ್ಯಾರ್ಥ ಎನ್ನಿಸುವುದು. 'ಗಂಗೆಯು ಮೇಲೆ ಹಳ್ಳಿಯಿದೆ' ಎಂಬಲ್ಲಿ ನದಿಯು ಮೇಲೆ ಹಳ್ಳಿಯಿರುವುದು ಅಸಾಧ್ಯವಾದುದರಿಂದ ಗಂಗಾತೀರವೆಂಬ ಲಕ್ಷ್ಯಾರ್ಥವನ್ನು ಅರಿತುಕೊಳ್ಳಬೇಕು. ವಾಚ್ಯಾರ್ಥವು ಹೊಂದದಿದ್ದಾಗ ಲಕ್ಷ್ಯಾರ್ಥವನ್ನು ಗ್ರಹಿಸಬೇಕು. ಲಕ್ಷಣೆಯು ಮೂರು ಬಗೆಯಾಗಿದೆ: ಜಹಲ್ಲಕ್ಷಣೆ, ಅಜಹಲ್ಲಕ್ಷಣೆ, ಜಹದಜಹಲ್ಲಕ್ಷಣೆ. ವಾಚ್ಯಾರ್ಥವನ್ನು ಬಿಟ್ಟು ಬೇರೆ ಅರ್ಥವನ್ನು ಹೇಳುವುದು ಜಹಲ್ಲಕ್ಷಣೆಯು. 'ವಿಷವನ್ನು ತಿನ್ನು' ಎಂಬ ಉದಾಹರಣೆಯಲ್ಲಿ ಶತ್ರುವಿನ ಮನೆಯಲ್ಲಿ ಊಟಮಾಡಬಾರದು ಎಂಬ ಅರ್ಥದಲ್ಲಿ 'ತಿನ್ನು' ಎಂಬ ಪ್ರಯೋಗವಿದೆ. ವಾಚ್ಯಾರ್ಥವನ್ನು ಬಿಡದೆ ಬೇರೆ ಅರ್ಥವನ್ನು ಹೇಳುವುದು ಅಜಹಲ್ಲಕ್ಷಣೆ. 'ಬಿಳಿಯು (ಕುದುರೆ) ಓಡುತ್ತಿದೆ' ಎಂಬಲ್ಲಿ 'ಬಿಳಿಯು' ಎಂಬ ಅರ್ಥವನ್ನು ಬಿಡದೆ ಅದಕ್ಕೆ ಸಂಬಂಧಪಟ್ಟ ಕುದುರೆಯನ್ನು ಹೇಳಿದೆ. ಮೂರನೆಯ ಲಕ್ಷಣದಲ್ಲಿ ಕೆಲವು ವಿರುದ್ಧಭಾಗಗಳನ್ನು ಬಿಟ್ಟು ಒಂದಂಶವನ್ನು ಉಳಿಸಿಕೊಳ್ಳಬೇಕು. ಮುಂದಿನ ಶ್ಲೋಕವನ್ನು ನೋಡಿ.]

ಸ ದೇವದತ್ತೋಽಯಮಿತೀಹ ವೈಕತಾ
ವಿರುದ್ಧಧರ್ಮಾಂಶಮಪಾಸ್ಯ ಕಥ್ಯತೇ ।
ಯಥಾ ತಥಾ ತತ್ತ್ವಮಸೀತಿವಾಕ್ಯೇ
ವಿರುದ್ಧಧರ್ಮಾನುಭಯತ್ರ ಹಿತ್ವಾ ॥ ೨೪೮ ॥

ಸಂಲಕ್ಷ್ಯ ಚಿನ್ಮಾತ್ರತಯಾ ಸದಾತ್ಮನೋ-
ರಖಂಡಭಾವಃ ಪರಿಚೀಯತೇ ಬುಧೈಃ ।
ಏವಂ ಮಹಾವಾಕ್ಯಶತೇನ ಕಥ್ಯತೇ
ಬ್ರಹ್ಮಾತ್ಮನೋರೈಕ್ಯಮಖಂಡಭಾವಃ ॥ ೨೪೯ ॥

**ಸಃ ಅಯಂ ದೇವದತ್ತಃ** = ಆ ದೇವದತ್ತನು ಇವನೇ **ಇತಿ ಇಹ ವಾ** = ಎಂಬ ವಾಕ್ಯದಲ್ಲಿ **ವಿರುದ್ಧ-ಧರ್ಮಾಂಶಂ** = ವಿರುದ್ಧವಾದ ಧರ್ಮಗಳ ಭಾಗವನ್ನು **ಅಪಾಸ್ಯ** = ಬಿಟ್ಟು **ಏಕತಾ** = ಐಕ್ಯವು **ಯಥಾ ಕಥ್ಯತೇ** = ಹೇಗೆ ಹೇಳಲ್ಪಡುತ್ತದೆಯೊ **ತಥಾ** = ಹಾಗೆಯೇ **ತತ್ ತ್ವಮ್ ಅಸಿ** = ಅದೇ ನೀನಾಗಿರುವೆ **ಇತಿ ವಾಕ್ಯೇ** = ಎಂಬ ವಾಕ್ಯದಲ್ಲಿಯೂ **ಉಭಯತ್ರ** = ಎರಡು ಕಡೆಯಲ್ಲಿಯೂ **ವಿರುದ್ಧ-ಧರ್ಮಾನ್ ಹಿತ್ವಾ** = ವಿರುದ್ಧಭಾಗಗಳನ್ನು ಬಿಟ್ಟು **ಚಿನ್ಮಾತ್ರತಯಾ** = ಕೇವಲ ಚಿದ್ರೂಪದಿಂದ **ಸಂಲಕ್ಷ್ಯ** = ಗುರುತಿಸಿ **ಸತ್-ಆತ್ಮನೋಃ** = ಈಶ್ವರ-ಜೀವರ **ಅಖಂಡ-ಭಾವಃ** = ಐಕ್ಯವು **ಬುಧೈಃ** = ಜ್ಞಾನಿಗಳಿಂದ **ಪರಿಚೀಯತೇ** = ಗ್ರಹಿಸಲ್ಪಡುತ್ತದೆ; **ಏವಂ** = ಹೀಗೆ **ಬ್ರಹ್ಮ-ಆತ್ಮನೋಃ** = ಬ್ರಹ್ಮ-ಆತ್ಮರ **ಐಕ್ಯಂ** = ಐಕ್ಯವು [ಮತ್ತು] **ಅಖಂಡಭಾವಃ** = ಅಖಂಡಭಾವವು **ಮಹಾವಾಕ್ಯಶತೇನ** = ನೂರಾರು ಮಹಾವಾಕ್ಯಗಳಿಂದ **ಕಥ್ಯತೇ** = ಹೇಳಲ್ಪಡುತ್ತದೆ.

**೨೪೮–೨೪೯.** 'ಆ ದೇವದತ್ತನು ಇವನೇ' ಎಂಬ ವಾಕ್ಯದಲ್ಲಿ ವಿರುದ್ಧ ಧರ್ಮಗಳ ಭಾಗವನ್ನು[೧] ಬಿಟ್ಟು ಐಕ್ಯವನ್ನು ಹೇಗೆ ಸಾಧಿಸುತ್ತಾರೆಯೊ ಹಾಗೆಯೇ 'ಅದೇ ನೀನಾಗಿರುವೆ' ಎಂಬ ವಾಕ್ಯದಲ್ಲಿ ಜ್ಞಾನಿಗಳು ಎರಡು ಕಡೆಯಲ್ಲಿಯೂ ವಿರುದ್ಧಭಾಗಗಳನ್ನು[೨] ಬಿಟ್ಟು (ಜೀವ ಈಶ್ವರ—ಇವರ ಸ್ವರೂಪವಾದ) ಕೇವಲ ಚಿದ್ರೂಪವನ್ನೇ ಗುರುತಿಸಿ ಅವರ ಅಖಂಡಭಾವವನ್ನು ಗ್ರಹಿಸುತ್ತಾರೆ. ಹೀಗೆ ನೂರಾರು ಉಪನಿಷದ್ ವಾಕ್ಯಗಳು ಜೀವ-ಪರಮಾತ್ಮರ ಐಕ್ಯವನ್ನೂ ಅಖಂಡಭಾವವನ್ನೂ ಹೇಳುತ್ತವೆ.

[೧ ಆ ದೇಶ ಈ ದೇಶ, ಆ ಕಾಲ ಈ ಕಾಲ—ಎಂಬ.

೨ ಕಾರಣೋಪಾಧಿ-ಕಾರ್ಯೋಪಾಧಿ, ಪ್ರತ್ಯಕ್ತ್ವ-ಪರೋಕ್ಷತ್ವ, ಅದ್ವಿತೀಯತ್ವ-ಸದ್ವಿತೀಯತ್ವ ಇವೇ ಮೊದಲಾದ ವಿರುದ್ಧಭಾವಗಳನ್ನು.]

ಅಸ್ಥೂಲಮಿತ್ಯೇತದಸನ್ನಿರಸ್ಯ
ಸಿದ್ಧಂ ಸ್ವತೋ ವ್ಯೋಮವದಪ್ರತರ್ಕ್ಯಮ್ ।
ಅತೋ ಮೃಷಾಮಾತ್ರಮಿದಂ ಪ್ರತೀತಂ
ಜಹೀಹಿ ಯತ್ ಸ್ವಾತ್ಮತಯಾ ಗೃಹೀತಮ್ ।
ಬ್ರಹ್ಮಾಹಮಿತ್ಯೇವ ವಿಶುದ್ಧಬುದ್ಧ್ಯಾ
ವಿದ್ಧಿ ಸ್ವಮಾತ್ಮಾನಮಖಂಡಬೋಧಮ್ ॥ ೨೫೦ ॥

**ಅಸ್ಥೂಲಮ್ ಇತಿ** = ಸ್ಥೂಲವಾದುದಲ್ಲ ಎಂದು **ಏತತ್ ಅಸತ್** = ಈ ಅಸತ್ತನ್ನು **ನಿರಸ್ಯ** = ತಿರಸ್ಕರಿಸಿ **ಸ್ವತಃ ಸಿದ್ಧಂ** = ಸ್ವತಃಸಿದ್ಧವಾಗಿರುವ **ವ್ಯೋಮವತ್** = ಆಕಾಶದಂತೆ [ಅಸಂಗನಾದ] **ಅಪ್ರತರ್ಕ್ಯಂ** = ಊಹಿಸಲು ಅಶಕ್ಯನಾದ [ಆತ್ಮನನ್ನು ಸಾಕ್ಷಾತ್ಕರಿಸಿಕೊಳ್ಳಬೇಕು]; **ಅತಃ** = ಆದುದರಿಂದ **ಪ್ರತೀತಂ**-ತೋರುತ್ತಿರುವ **ಮೃಷಾಮಾತ್ರಂ** = ಮಿಥ್ಯಾಸ್ವರೂಪವಾದ **ಯತ್** = ಯಾವುದು **ಸ್ವಾತ್ಮತಯಾ ಗೃಹೀತಂ** = ಆತ್ಮಭಾವದಿಂದ ಗ್ರಹಿಸಲ್ಪಟ್ಟಿದೆಯೊ [ಅಂಥ] **ಇದಂ** = ಈ ಶರೀರವನ್ನು **ಜಹೀಹಿ** = ತೊರೆ, **ಬ್ರಹ್ಮ ಅಹಮ್ ಇತಿ ಏವ** = ನಾನು ಬ್ರಹ್ಮವು ಎಂದೇ **ವಿಶುದ್ಧಬುದ್ಧ್ಯಾ** = ವಿಶುದ್ಧಬುದ್ಧಿಯಿಂದ **ಅಖಂಡಬೋಧಂ** = ಅಖಂಡಜ್ಞಾನಸ್ವರೂಪನಾದ **ಸ್ವಮ್ ಆತ್ಮಾನಂ** = ನಿನ್ನ ಆತ್ಮನನ್ನೇ **ವಿದ್ಧಿ** = ತಿಳಿದುಕೊ.

**೨೫೦.** 'ಸ್ಥೂಲವಾದುದಲ್ಲ'[೧] ಎಂದು ಈ ಅಸತ್ತನ್ನು ತಿರಸ್ಕರಿಸಿ ಸ್ವತಃ ಸಿದ್ಧವಾಗಿರುವ, ಆಕಾಶದಂತೆ (ಅಸಂಗನಾದ), ಊಹಿಸಲು ಅಶಕ್ಯನಾದ, (ಆತ್ಮನನ್ನು ಸಾಕ್ಷಾತ್ಕರಿಸಿಕೊಳ್ಳಬೇಕು). ಆದುದರಿಂದ ತೋರಿಬರುತ್ತಿರುವ, ಮಿಥ್ಯಾಸ್ವರೂಪವಾದ, ಆತ್ಮಭಾವದಿಂದ ಗ್ರಹಿಸಲ್ಪಟ್ಟಿರುವ, ಈ ಶರೀರವನ್ನು ತೊರೆ. 'ನಾನು ಬ್ರಹ್ಮವು' ಎಂದೇ ವಿಶುದ್ಧಬುದ್ಧಿಯಿಂದ ಅಖಂಡಜ್ಞಾನಸ್ವರೂಪನಾದ ನಿನ್ನ ಆತ್ಮನನ್ನೇ ತಿಳಿದುಕೊ.

[೧ ಬೃಹದಾರಣ್ಯಕ ಉ. ೩. ೮. ೮.]

ಮೃತ್ಕಾರ್ಯಂ ಸಕಲಂ ಘಟಾದಿ ಸತತಂ ಮೃನ್ಮಾತ್ರಮೇವಾಹಿತಂ
ತದ್ವತ್ ಸಜ್ಜನಿತಂ ಸದಾತ್ಮಕಮಿದಂ ಸನ್ಮಾತ್ರಮೇವಾಖಿಲಮ್ ।
ಯಸ್ಮಾನ್ನಾಸ್ತಿ ಸತಃ ಪರಂ ಕಿಮಪಿ ತತ್ ಸತ್ಯಂ ಸ ಆತ್ಮಾ ಸ್ವಯಂ
ತಸ್ಮಾತ್ ತತ್ತ್ವಮಸಿ ಪ್ರಶಾಂತಮಮಲಂ ಬ್ರಹ್ಮಾದ್ವಯಂ
ಯತ್ಪರಮ್ ॥ ೨೫೧ ॥

**ಮೃತ್-ಕಾರ್ಯಂ** = ಮಣ್ಣಿನ ಕಾರ್ಯವಾದ **ಘಟಾದಿ** = ಗಡಿಗೆಯೇ ಮೊದಲಾದ **ಸಕಲಂ** = ಸಮಸ್ತವೂ **ಸತತಂ** = ಯಾವಾಗಲೂ **ಮೃತ್-ಮಾತ್ರ-**

**ಮೇವ ಆಹಿತಂ**=ಬರಿಯ ಮಣ್ಣೇ ಆಗಿರುತ್ತದೆ; **ತದ್ವತ್**=ಹಾಗೆಯೇ **ಸತ್-ಜನಿತಂ**=ಸತ್ತಿನಿಂದ ಹುಟ್ಟಿರುವ **ಇದಮ್ ಅಖಿಲಂ**=ಇದೆಲ್ಲವೂ **ಸತ್-ಆತ್ಮಕಂ**=ಸದಾತ್ಮವೇ, **ಸತ್-ಮಾತ್ರಮ್ ಏವ**=ಸನ್ಮಾತ್ರವೇ [ಆಗಿರುತ್ತದೆ]; **ಯಸ್ಮಾತ್**=ಯಾವ ಕಾರಣದಿಂದ **ಸತಃ**=ಸತ್ತಿಗಿಂತಲೂ **ಪರಂ ಕಿಮ್ ಅಪಿ**=ಬೇರೆ ಯಾವುದೂ **ನ ಅಸ್ತಿ**=ಇಲ್ಲವೊ [ಆ ಕಾರಣದಿಂದ] **ತತ್ ಸತ್ಯಂ**=ಅದೇ ಸತ್ಯವು, **ಸಃ**=ಅವನೇ **ಸ್ವಯಂ**=ಸ್ವತಃ **ಆತ್ಮಾ**=ಆತ್ಮನು; **ತಸ್ಮಾತ್**=ಆದುದರಿಂದ **ಯತ್**=ಯಾವುದು **ಪರಂ**=ಶ್ರೇಷ್ಠವೂ **ಪ್ರಶಾಂತಂ**=ಪ್ರಶಾಂತವೂ **ಅಮಲಂ**=ಶುದ್ಧವೂ **ಅದ್ವಯಂ**=ಅದ್ವಯವೂ [ಆಗಿರುವುದೊ] **ತತ್ ಬ್ರಹ್ಮ**=ಆ ಬ್ರಹ್ಮವೇ **ತ್ವಂ**=ನೀನು **ಅಸಿ**=ಆಗಿರುವೆ.

**೨೫೧.** ಮಣ್ಣಿನ ಕಾರ್ಯವಾದ ಗಡಿಗೆಯೇ ಮೊದಲಾದ ಸಮಸ್ತವೂ ಯಾವಾಗಲೂ ಮಣ್ಣೇ ಆಗಿರುತ್ತದೆ. ಹಾಗೆಯೇ ಸದ್ವಸ್ತುವಿನಿಂದ ಉತ್ಪನ್ನವಾದ ಇದೆಲ್ಲವೂ ಸದಾತ್ಮಕವೂ ಸನ್ಮಾತ್ರವೂ ಆಗಿರುತ್ತದೆ. ಸದ್ವಸ್ತುವಿಗಿಂತ ಬೇರೆಯಾಗಿ ಯಾವುದೊಂದೂ ಇಲ್ಲದಿರುವುದರಿಂದ ಅದೇ ಸತ್ಯವು. ಅದೇ ಸ್ವತಃ ಆತ್ಮನು. ಆದುದರಿಂದ ಯಾವುದು ಶ್ರೇಷ್ಠವೂ ಪ್ರಶಾಂತವೂ ಶುದ್ಧವೂ ಅದ್ವಯವೂ ಆದ ಪರಬ್ರಹ್ಮವಾಗಿರುವುದೊ ಅದೇ ನೀನಾಗಿರುವೆ.

[ಛಾಂದೋಗ್ಯೋಪನಿಷತ್ತಿನ ಆರನೆಯ ಅಧ್ಯಾಯದಲ್ಲಿ ಉದ್ದಾಲಕನು ಶ್ವೇತಕೇತುವಿಗೆ ಮಾಡಿರುವ ಉಪದೇಶವನ್ನು ಶಿಷ್ಯನು ಸುಲಭವಾಗಿ ತಿಳಿದುಕೊಳ್ಳಲು ಇಲ್ಲಿ ಸಂಗ್ರಹಿಸಿದೆ.]

**ನಿದ್ರಾ-ಕಲ್ಪಿತ-ದೇಶಕಾಲ-ವಿಷಯ-ಜ್ಞಾತ್ರಾದಿ ಸರ್ವಂ ಯಥಾ**
**ಮಿಥ್ಯಾ ತದ್ವದಿಹಾಪಿ ಜಾಗ್ರತಿ ಜಗತ್ ಸ್ವಾಜ್ಞಾನಕಾರ್ಯತ್ವತಃ ।**
**ಯಸ್ಮಾದೇವಮಿದಂ ಶರೀರ-ಕರಣ-ಪ್ರಾಣಾಹಮಾದ್ಯಪ್ಯಸತ್**
**ತಸ್ಮಾತ್ ತತ್ತ್ವಮಸಿ ಪ್ರಶಾಂತಮಮಲಂ ಬ್ರಹ್ಮಾದ್ವಯಂ ಯತ್**
**ಪರಮ್ ॥ ೨೫೨ ॥**

**ನಿದ್ರಾ-ಕಲ್ಪಿತ-ದೇಶ-ಕಾಲ-ವಿಷಯ-ಜ್ಞಾತೃ-ಆದಿ**=ಕನಸಿನಲ್ಲಿ ಕಲ್ಪಿತವಾಗಿರುವ ದೇಶ ಕಾಲ ವಿಷಯ ಜ್ಞಾತೃ—ಇವೇ ಮೊದಲಾದ **ಸರ್ವಂ**=ಸಮಸ್ತವೂ **ಯಥಾ**=ಹೇಗೆ **ಮಿಥ್ಯಾ**=ಮಿಥ್ಯೆಯೊ, **ತದ್ವತ್**=ಹಾಗೆಯೇ **ಇಹ ಜಾಗ್ರತಿ ಅಪಿ**=ಈ ಜಾಗ್ರದವಸ್ಥೆಯಲ್ಲಿಯೂ **ಜಗತ್**=ಜಗತ್ತು **ಸ್ವ-ಅಜ್ಞಾನಕಾರ್ಯತ್ವತಃ**=ತನ್ನ ಅಜ್ಞಾನದ ಕಾರ್ಯವಾಗಿರುವುದರಿಂದ [ಮಿಥ್ಯೆಯೇ]; **ಯಸ್ಮಾತ್**=ಯಾವ ಕಾರಣದಿಂದ **ಏವಂ**=ಹೀಗೆ **ಇದಂ**=ಈ **ಶರೀರ-ಕರಣ-ಪ್ರಾಣ-ಅಹಮ್-ಆದಿ ಅಪಿ**=ಶರೀರ ಇಂದ್ರಿಯಗಳು ಪ್ರಾಣ ಅಹಂಕಾರ ಮೊದಲಾದುವೂ **ಅಸತ್**=

ಅಸತ್ತಾಗಿರುವುದೊ ತಸ್ಮಾತ್ . . . ತ್ವಮ್ ಅಸಿ [ಅನ್ವಯ ಹಿಂದಿನ ಶ್ಲೋಕ ದಂತೆಯೆ].

೨೫೨. ಕನಸಿನಲ್ಲಿ ಕಲ್ಪಿತವಾಗಿರುವ ದೇಶ ಕಾಲ ವಿಷಯ ಜ್ಞಾತೃ ಮೊದಲಾದುವೆಲ್ಲವೂ ಹೇಗೆ ಮಿಥ್ಯೆಯಾಗಿರುವುವೊ ಹಾಗೆಯೇ ಈ ಜಾಗ್ರದ ವಸ್ಥೆಯಲ್ಲಿಯೂ ಜಗತ್ತು ತನ್ನ ಅಜ್ಞಾನದ ಕಾರ್ಯವಾಗಿರುವುದರಿಂದ ಮಿಥ್ಯೆಯೇ. ಹೀಗೆ ಈ ಶರೀರ ಇಂದ್ರಿಯಗಳು ಪ್ರಾಣ ಅಹಂಕಾರ— ಇವೇ ಮೊದಲಾದುವೆಲ್ಲವೂ ಅಸತ್ಯವಾಗಿರುವುದರಿಂದ ಯಾವುದು ಶ್ರೇಷ್ಠವೂ ಪ್ರಶಾಂತವೂ ಶುದ್ಧವೂ ಅದ್ವಯವೂ ಆದ ಪರಬ್ರಹ್ಮವಾಗಿರುವುದೊ ಅದೇ ನೀನಾಗಿರುವೆ.

**ಜಾತಿ-ನೀತಿ-ಕುಲ-ಗೋತ್ರ-ದೂರಗಂ**
**ನಾಮ-ರೂಪ-ಗುಣ-ದೋಷ-ವರ್ಜಿತಮ್ ।**
**ದೇಶ-ಕಾಲ-ವಿಷಯಾತಿವರ್ತಿ ಯದ್**
**ಬ್ರಹ್ಮ ತತ್ತ್ವಮಸಿ ಭಾವಯಾತ್ಮನಿ ॥ ೨೫೩ ॥**

**ಜಾತಿ-ನೀತಿ-ಕುಲ-ಗೋತ್ರ-ದೂರಗಂ** = ಜಾತಿ ನೀತಿ ಕುಲ ಗೋತ್ರ— ಇವು ಗಳಿಗೆ ದೂರವಾಗಿರುವ, **ನಾಮ-ರೂಪ-ಗುಣ-ದೋಷ-ವರ್ಜಿತಂ** = ನಾಮ ರೂಪ ಗುಣ ದೋಷ— ಇವುಗಳಿಲ್ಲದ, **ದೇಶ-ಕಾಲ-ವಿಷಯ-ಅತಿವರ್ತಿ** = ದೇಶ-ಕಾಲ-ವಿಷಯಗಳನ್ನು ಮೀರಿರುವ **ಯತ್ ಬ್ರಹ್ಮ** = ಯಾವ ಬ್ರಹ್ಮವಿರುವುದೊ **ತತ್** = ಅದು **ತ್ವಮ್ ಅಸಿ** = ನೀನಾಗಿದ್ದೀಯೆ, **ಆತ್ಮನಿ** = ಮನಸ್ಸಿನಲ್ಲಿ **ಭಾವಯ** = ಅನು ಸಂಧಾನಮಾಡು.

೨೫೩. ಜಾತಿ-ನೀತಿ-ಕುಲ-ಗೋತ್ರಗಳಿಗೆ ದೂರವೂ, ನಾಮ-ರೂಪ-ಗುಣ-ದೋಷ-ವರ್ಜಿತವೂ, ದೇಶ-ಕಾಲ-ವಿಷಯಗಳನ್ನು ಮೀರಿರುವುದೂ ಆದ ಯಾವ ಬ್ರಹ್ಮವಿರುವುದೊ ಅದೇ ನೀನಾಗಿರುವ. ಇದನ್ನು ಮನಸ್ಸಿನಲ್ಲಿ ಅನುಸಂಧಾನಮಾಡು.

**ಯತ್ಪರಂ ಸಕಲವಾಗಗೋಚರಂ**
**ಗೋಚರಂ ವಿಮಲಬೋಧಚಕ್ಷುಷಃ ।**
**ಶುದ್ಧಚಿದ್ಘನಮನಾದಿ ವಸ್ತು ಯದ್**
**ಬ್ರಹ್ಮ ತತ್ತ್ವಮಸಿ ಭಾವಯಾತ್ಮನಿ ॥ ೨೫೪ ॥**

**ಯತ್ ಪರಂ** = ಯಾವ ಪರಬ್ರಹ್ಮವು **ಸಕಲ-ವಾಕ್-ಅಗೋಚರಂ** = ಸಮಸ್ತ ವಾಕ್ಕುಗಳಿಗೆ ಗೋಚರವಲ್ಲವೊ, **ವಿಮಲಬೋಧ-ಚಕ್ಷುಷಃ** = [ಯಾವುದು] ಶುದ್ಧ

ವಾದ ಜ್ಞಾನದೃಷ್ಟಿಗೆ **ಗೋಚರಂ** = ವಿಷಯುವೊ, **ಯತ್ ವಸ್ತು** = ಯಾವ ವಸ್ತುವು **ಶುದ್ಧ-ಚಿತ್-ಘನಂ** = ಶುದ್ಧವಾದ ಜ್ಞಾನಘನವೊ **ಅನಾದಿ** = ಅನಾದಿಯೊ **ತತ್ ಬ್ರಹ್ಮ . . . ಭಾವಯ** [ಅನ್ವಯ ಹಿಂದಿನಂತೆಯೆ].

**೨೫೪.** ಯಾವ ಪರಬ್ರಹ್ಮವಸ್ತುವು ಸಮಸ್ತ ಇಂದ್ರಿಯಗಳಿಗೆ ವಿಷಯವಲ್ಲವೊ, ಯಾವುದು ಶುದ್ಧವಾದ ಜ್ಞಾನದೃಷ್ಟಿಗೆ ವಿಷಯವಾಗಿರುವುದೊ, ಯಾವುದು ಶುದ್ಧ ಜ್ಞಾನಘನವಾಗಿರುವುದೊ ಮತ್ತು ಅನಾದಿಯೊ ಅದೇ ನೀನಾಗಿರುವೆ. ಇದನ್ನು ಮನಸ್ಸಿನಲ್ಲಿ ಅನುಸಂಧಾನಮಾಡು.

**ಷಡ್ಭಿರೂರ್ಮಿಭಿರಯೋಗಿ ಯೋಗಿಹೃ-**
**ದ್ಭಾವಿತಂ ನ ಕರಣೈರ್ವಿಭಾವಿತಮ್ ।**
**ಬುದ್ಧ್ಯವೇದ್ಯಮನವದ್ಯಮಸ್ತಿ ಯದ್**
**ಬ್ರಹ್ಮ ತತ್ತ್ವಮಸಿ ಭಾವಯಾತ್ಮನಿ ॥ ೨೫೫ ॥**

**ಯತ್** = ಯಾವುದು **ಷಟ್-ಊರ್ಮಿಭಿಃ** = ಆರು ಊರ್ಮಿಗಳಿಂದ **ಅಯೋಗಿ** = ಅಸಂಸ್ಪೃಷ್ಟವಾಗಿರುವುದೊ **ಯೋಗಿಹೃದ್ಭಾವಿತಂ** = ಯೋಗಿಗಳ ಹೃದಯದಲ್ಲಿ ಭಾವಿಸಲ್ಪಡುವುದೊ **ಕರಣೈಃ** = ಇಂದ್ರಿಯಗಳಿಂದ **ನ ವಿಭಾವಿತಂ** = ಭಾವಿಸಲ್ಪಡಲು ಆಗದೊ **ಬುದ್ಧಿ-ಅವೇದ್ಯಂ** = ಬುದ್ಧಿಗೆ ಅಗೋಚರವೊ **ಅನವದ್ಯಂ** = ದೋಷರಹಿತವೊ **ತತ್ ಬ್ರಹ್ಮ . . . ಭಾವಯ** [ಅನ್ವಯ ಹಿಂದಿನಂತೆಯೆ].

**೨೫೫.** ಯಾವುದು ಆರು ಊರ್ಮಿಗಳಿಂದ[೧] ಅಸ್ಪೃಷ್ಟವಾಗಿರುವುದೊ, ಯೋಗಿಗಳ ಹೃದಯದಲ್ಲಿ ಭಾವಿಸಲ್ಪಡತಕ್ಕದ್ದೊ, ಬುದ್ಧೀಂದ್ರಿಯಗಳಿಗೆ ಅಗೋಚರವೊ, ನಿರ್ದುಷ್ಟವೊ ಆ ಬ್ರಹ್ಮವೇ ನೀನಾಗಿರುವೆ. ಇದನ್ನು ಮನಸ್ಸಿನಲ್ಲಿ ಅನುಸಂಧಾನಮಾಡು.

[೧ ಹಸಿವು, ಬಾಯಾರಿಕೆ, ಮುಪ್ಪು, ಸಾವು, ಶೋಕ, ಮೋಹ.]

**ಭ್ರಾಂತಿಕಲ್ಪಿತ-ಜಗತ್ಕಲಾಶ್ರಯಂ**
**ಸ್ವಾಶ್ರಯಂ ಚ ಸದಸದ್ವಿಲಕ್ಷಣಮ್ ।**
**ನಿಷ್ಕಲಂ ನಿರುಪಮಾನವದ್ಧಿ ಯದ್**
**ಬ್ರಹ್ಮ ತತ್ತ್ವಮಸಿ ಭಾವಯಾತ್ಮನಿ ॥ ೨೫೬ ॥**

**ಯತ್** = ಯಾವುದು **ಭ್ರಾಂತಿಕಲ್ಪಿತ-ಜಗತ್-ಕಲಾಶ್ರಯಂ** = ಭ್ರಮೆಯಿಂದ ಕಲ್ಪಿತವಾದ ಪ್ರಪಂಚವೆಂಬ ಅಂಶಕ್ಕೆ ಆಶ್ರಯವಾಗಿರುವ, **ಸ್ವ-ಆಶ್ರಯಂ** = ತನಗೆ ತಾನೇ ಆಶ್ರಯವಾಗಿರುವ, **ಸತ್-ಅಸತ್-ವಿಲಕ್ಷಣಂ ಚ** = ಸತ್-ಅಸತ್-ಇವುಗಳಿ

ಗಿಂತ ಬೇರೆಯಾಗಿರುವ, **ನಿಷ್ಕಲಂ**=ಅವಯವರಹಿತವಾದ, **ನಿರ್-ಉಪಮಾನವತ್** ಹಿ=ಉಪಮಾನರಹಿತವಾದ **ತತ್ ಬ್ರಹ್ಮ . . . ಭಾವಯ** [ಅನ್ವಯ ಹಿಂದಿನಂತೆಯೆ].

**೨೫೬.** ಭ್ರಮೆಯಿಂದ ಕಲ್ಪಿತವಾದ ಪ್ರಪಂಚವೆಂಬ ಅಂಶಕ್ಕೆ ಆಶ್ರಯ ವಾಗಿರುವ, (ಆದರೆ) ತನಗೆ ಬೇರೆ ಯಾವ ಆಶ್ರಯವೂ ಇಲ್ಲದಿರುವ, ಸತ್ ಅಸತ್—ಇವುಗಳಿಗಿಂತ ಬೇರೆಯಾಗಿರುವ, ಅವಯವರಹಿತವಾದ, ಯಾವು ದೊಂದು ಉಪಮಾನವನ್ನೂ ಕೊಡುವುದಕ್ಕೆ ಆಗದಿರುವ ಬ್ರಹ್ಮವೇ ನೀನಾ ಗಿರುವೆ. ಇದನ್ನು ಮನಸ್ಸಿನಲ್ಲಿ ಅನುಸಂಧಾನಮಾಡು.

**ಜನ್ಮವೃದ್ಧಿ-ಪರಿಣತ್ಯಪಕ್ಷಯ-**
**ವ್ಯಾಧಿ-ನಾಶನ-ವಿಹೀನಮವ್ಯಯಮ್ ।**
**ವಿಶ್ವಸೃಷ್ಟ್ಯವವಿಘಾತಕಾರಣಂ**
**ಬ್ರಹ್ಮ ತತ್ತ್ವಮಸಿ ಭಾವಯಾತ್ಮನಿ ॥ ೨೫೭ ॥**

**ಜನ್ಮ-ವೃದ್ಧಿ-ಪರಿಣತಿ-ಅಪಕ್ಷಯ-ವ್ಯಾಧಿ-ನಾಶನ-ವಿಹೀನಂ**=ಜನ್ಮ ವೃದ್ಧಿ ಪರಿಣಾಮ ಕ್ಷಯ ವ್ಯಾಧಿ ನಾಶ—ಇವುಗಳಿಲ್ಲದ **ಅವ್ಯಯಂ**=ವಿಕಾರಶೂನ್ಯವಾದ **ವಿಶ್ವ-ಸೃಷ್ಟಿ-ಅವ-ವಿಘಾತ-ಕಾರಣಂ**=ವಿಶ್ವದ ಸೃಷ್ಟಿ-ಸ್ಥಿತಿ-ಲಯಗಳಿಗೆ ಕಾರಣವಾದ **ತತ್ ಬ್ರಹ್ಮ**=ಆ ಬ್ರಹ್ಮವೇ **ತ್ವಂ ಅಸಿ**=ನೀನಾಗಿರುವೆ **ಆತ್ಮನಿ ಭಾವಯ.**

**೨೫೭.** ಜನ್ಮ ವೃದ್ಧಿ ಪರಿಣಾಮ ಕ್ಷಯ ರೋಗ ವಿನಾಶ—ಇವು ಗಳಿಲ್ಲದ, (ಆದುದರಿಂದಲೇ) ಅವ್ಯಯವಾದ, ವಿಶ್ವದ ಸೃಷ್ಟಿ-ಸ್ಥಿತಿ-ಲಯಗಳಿಗೆ ಕಾರಣವಾಗಿರುವ ಆ ಬ್ರಹ್ಮವೇ ನೀನಾಗಿರುವೆ. ಇದನ್ನು ಮನಸ್ಸಿನಲ್ಲಿ ಅನು ಸಂಧಾನಮಾಡು.

**ಅಸ್ತಭೇದಮನಪಾಸ್ತ-ಲಕ್ಷಣಂ**
**ನಿಸ್ತರಂಗ-ಜಲರಾಶಿ-ನಿಶ್ಚಲಮ್ ।**
**ನಿತ್ಯಮುಕ್ತಮವಿಭಕ್ತ-ಮೂರ್ತಿ ಯದ್**
**ಬ್ರಹ್ಮ ತತ್ತ್ವಮಸಿ ಭಾವಯಾತ್ಮನಿ ॥ ೨೫೮ ॥**

**ಅಸ್ತಭೇದಂ**=ಭೇದವಿಲ್ಲದ **ಅನಪಾಸ್ತ-ಲಕ್ಷಣಂ**=ನಾಶವಾಗದ ಸ್ವರೂಪ ವುಳ್ಳ, **ನಿಸ್ತರಂಗ-ಜಲರಾಶಿ-ನಿಶ್ಚಲಂ**=ಅಲೆಗಳಿಲ್ಲದ ಸಮುದ್ರದಂತೆ ನಿಶ್ಚಲವಾಗಿ ರುವ, **ನಿತ್ಯಮುಕ್ತಂ**=ಯಾವಾಗಲೂ ಮುಕ್ತವಾದ, **ಅವಿಭಕ್ತಮೂರ್ತಿ**=ಅಖಂಡ ರೂಪವುಳ್ಳ **ಯತ್ ಬ್ರಹ್ಮ . . . ಭಾವಯ** [ಅನ್ವಯ ಹಿಂದಿನಂತೆಯೆ].

**೨೫೮.** ಸಮಸ್ತಭೇದರಹಿತವಾದ, ನಾಶವಾಗದ ಸ್ವರೂಪವುಳ್ಳ, ಅಲೆಗಳಿಲ್ಲದ ಸಮುದ್ರದಂತೆ ನಿಶ್ಚಲವಾಗಿರುವ, ಯಾವಾಗಲೂ ಮುಕ್ತವಾದ, ಅಖಂಡರೂಪವುಳ್ಳ[೧] ಯಾವ ಬ್ರಹ್ಮವಿದೆಯೊ ಅದೇ ನೀನಾಗಿರುವೆ. ಇದನ್ನು ಮನಸ್ಸಿನಲ್ಲಿ ಅನುಸಂಧಾನಮಾಡು.

[[೧]'ಅದು ವಿಭಾಗವಿಲ್ಲದೆ ಇರುವುದು, ಪ್ರಾಣಿಗಳಲ್ಲಿ ವಿಭಾಗವಾಗಿರುವಂತೆ ಕಾಣುತ್ತಿರುವುದು' **ಅವಿಭಕ್ತಂ ಚ ಭೂತೇಷು ವಿಭಕ್ತಮಿವ ಚ ಸ್ಥಿತಮ್** (ಗೀತಾ ೧೩. ೧೬).]

**ಏಕಮೇವ ಸದನೇಕಕಾರಣಂ**
**ಕಾರಣಾಂತರ-ನಿರಾಸ್ಯಕಾರಣಮ್ ।**
**ಕಾರ್ಯ-ಕಾರಣ-ವಿಲಕ್ಷಣಂ ಸ್ವಯಂ**
**ಬ್ರಹ್ಮ ತತ್ತ್ವಮಸಿ ಭಾವಯಾತ್ಮನಿ ॥ ೨೫೯ ॥**

**ಏಕಮ್ ಏವ ಸತ್**=[ತಾನು] ಒಂದೇ ಆಗಿದ್ದರೂ **ಅನೇಕ ಕಾರಣಂ**= ಅನೇಕವಸ್ತುಗಳಿಗೆ ಕಾರಣವಾಗಿದೆ; **ಕಾರಣಾಂತರ-ನಿರಾಸಿ**= ಬೇರೆ ಕಾರಣಗಳನ್ನು ಹೋಗಲಾಡಿಸುವ, **ಅಕಾರಣಂ**= ತನಗೆ ಕಾರಣವಿಲ್ಲದ, **ಕಾರ್ಯಕಾರಣ-ವಿಲಕ್ಷಣಂ**= ಮಾಯೆ ಮತ್ತು ಅದರ ಕಾರ್ಯ—ಇವುಗಳಿಗಿಂತ ಭಿನ್ನವಾದ, **ಸ್ವಯಂ**= ಸ್ವತಃಸಿದ್ಧವಾದ [ಉಳಿದುದು ಹಿಂದಿನಂತೆಯೆ].

**೨೫೯.** ಅದು ಒಂದೇ ಆಗಿದ್ದರೂ ಅನೇಕವಸ್ತುಗಳಿಗೆ ಕಾರಣವಾಗಿದೆ;[೧] ಅದು ಎಲ್ಲ ಕಾರಣಗಳನ್ನೂ ನಿರಾಕರಿಸುತ್ತದೆ, ಆದರೆ ಸ್ವಕಾರಣರಹಿತವಾಗಿದೆ; ಅದು ಮಾಯೆ ಮತ್ತು ಅದರ ಕಾರ್ಯ—ಇವುಗಳಿಗಿಂತ ಭಿನ್ನವಾಗಿದೆ, ಮತ್ತು ಸ್ವತಃಸಿದ್ಧವಾಗಿದೆ. ಆ ಬ್ರಹ್ಮವೇ ನೀನಾಗಿರುವೆ. ಇದನ್ನು ಮನಸ್ಸಿನಲ್ಲಿ ಅನುಸಂಧಾನಮಾಡು.

[[೧]'ಅಕ್ಷರದಿಂದ ವಿವಿಧವಾದ ಜೀವಗಳು ಹುಟ್ಟುತ್ತವೆ' **ತಥಾಽಕ್ಷರಾದ್ವಿವಿಧಾಃ ಸೋಮ್ಯ ಭಾವಾಃ** (ಮುಂಡಕ ಉ. ೨. ೧. ೧).]

**ನಿರ್ವಿಕಲ್ಪಕಮನಲ್ಪಮಕ್ಷರಂ**
**ಯತ್ ಕ್ಷರಾಕ್ಷರ-ವಿಲಕ್ಷಣಂ ಪರಮ್ ।**
**ನಿತ್ಯಮವ್ಯಯಸುಖಂ ನಿರಂಜನಂ**
**ಬ್ರಹ್ಮ ತತ್ತ್ವಮಸಿ ಭಾವಯಾತ್ಮನಿ ॥ ೨೬೦ ॥**

**ನಿರ್ವಿಕಲ್ಪಕಂ**= ವಿಕಲ್ಪಶೂನ್ಯವೂ, **ಅನಲ್ಪಂ**= ಅಪರಿಚ್ಛಿನ್ನವೂ, **ಅಕ್ಷರಂ**= ಅವಿನಾಶಿಯೂ, **ಕ್ಷರ-ಅಕ್ಷರ-ವಿಲಕ್ಷಣಂ**= ಕಾರ್ಯಸಮುದಾಯ ಮತ್ತು ಮಾಯೆ-

ಇವುಗಳಿಗಿಂತ ಬೇರೆಯಾದುದೂ, **ಪರಂ** = ಸರ್ವೋತ್ಕೃಷ್ಟವೂ, **ನಿತ್ಯಂ** = ನಿತ್ಯವೂ, **ಅವ್ಯಯಸುಖಂ** = ಅಖಂಡಸುಖರೂಪವೂ, **ನಿರಂಜನಂ** = ತಮಃಶೂನ್ಯವೂ [ಆದ] **ಯತ್ ಬ್ರಹ್ಮ . . . ಭಾವಯ.**

**೨೬೦.** ಯಾವುದು ವಿಕಲ್ಪಶೂನ್ಯವೊ, ಅಪರಿಚ್ಛಿನ್ನವೊ, ಅವಿನಾಶಿಯೊ, ಕಾರ್ಯಸಮುದಾಯ ಮತ್ತು ಮಾಯೆ—ಇವುಗಳಿಗಿಂತ ಬೇರೆಯಾದುದೊ, ಸರ್ವೋತ್ಕೃಷ್ಟವೊ, ನಿತ್ಯವೊ,[೧] ಅಖಂಡಸುಖರೂಪವೊ,[೨] ತಮಃಶೂನ್ಯವೊ—ಆ ಬ್ರಹ್ಮವೇ ನೀನಾಗಿರುವೆ. ಇದನ್ನು ಮನಸ್ಸಿನಲ್ಲಿ ಅನುಸಂಧಾನಮಾಡು.

[[೧] 'ಅನಿತ್ಯವಸ್ತುಗಳಲ್ಲಿ ನಿತ್ಯನು' **ನಿತ್ಯೋಽನಿತ್ಯಾನಾಮ್** (ಕಠ ಉ. ೨. ೫. ೧೩).
[೨] 'ಯಾವುದು ಭೂಮವೊ ಅದು ಸುಖವು, ಅಲ್ಪದಲ್ಲಿ ಸುಖವಿಲ್ಲ' **ಯೋ ವೈ ಭೂಮಾ ತತ್ಸುಖಮ್, ನಾಲ್ಪೇ ಸುಖಮಸ್ತಿ** (ಛಾಂದೋಗ್ಯ ಉ. ೭. ೨೩).]

**ಯದ್ವಿಭಾತಿ ಸದನೇಕಧಾ ಭ್ರಮಾ-**
**ನ್ನಾಮ-ರೂಪ-ಗುಣ-ವಿಕ್ರಿಯಾತ್ಮನಾ ।**
**ಹೇಮವತ್ ಸ್ವಯಮವಿಕ್ರಿಯಂ ಸದಾ**
**ಬ್ರಹ್ಮ ತತ್ತ್ವಮಸಿ ಭಾವಯಾತ್ಮನಿ ॥ ೨೬೧ ॥**

**ಯತ್ . ಸತ್** = ಯಾವ ಸದ್ವಸ್ತುವು [ಒಂದೇ ಆಗಿದ್ದರೂ] **ಭ್ರಮಾತ್** = ಭ್ರಾಂತಿಯಿಂದ **ನಾಮ-ರೂಪ-ಗುಣ-ವಿಕ್ರಿಯ-ಆತ್ಮನಾ** = ನಾಮ-ರೂಪ-ಗುಣ ಕ್ರಿಯೆಗಳ ರೂಪದಿಂದ **ಅನೇಕಧಾ** = ಬಹುವಿಧವಾಗಿ **ವಿಭಾತಿ** = ಕಾಣುತ್ತದೆಯೊ, **ಹೇಮವತ್** = ಚಿನ್ನದಂತೆ **ಸ್ವಯಂ**=ತಾನು **ಸದಾ**=ಯಾವಾಗಲೂ **ಅವಿಕ್ರಿಯಂ**= ವಿಕಾರರಹಿತವಾದುದೊ [ಉಳಿದುದು ಹಿಂದಿನಂತೆಯೆ].

**೨೬೧.** ಯಾವ ಸದ್ವಸ್ತುವು (ಒಂದೇ ಆಗಿದ್ದರೂ) ಭ್ರಾಂತಿಯ ಮೂಲಕ ನಾಮ-ರೂಪ-ಗುಣ-ಕ್ರಿಯೆಗಳ ರೂಪದಿಂದ ಬಹುವಿಧವಾಗಿ[೧] ಕಾಣುತ್ತದೆಯೊ, (ಆದರೂ ಬಳೆ, ಕುಂಡಲ ಮೊದಲಾದುವುಗಳ ರೂಪದಲ್ಲಿ ಕಾಣುವ) ಚಿನ್ನದಂತೆ ತಾನು ಮಾತ್ರ ವಿಕಾರರಹಿತವಾದುದೊ ಆ ಬ್ರಹ್ಮವೇ ನೀನಾಗಿರುವೆ. ಇದನ್ನು ಮನಸ್ಸಿನಲ್ಲಿ ಅನುಸಂಧಾನಮಾಡು.

[[೧] ದೇವ-ತಿರ್ಯಗಾದಿ-ನಾನಾವಿಧ-ನಾಮರೂಪಗಳಿಂದ.]

**ಯಚ್ಚಕಾಸ್ತ್ಯನಪರಂ ಪರಾತ್ಪರಂ**
**ಪ್ರತ್ಯಗೇಕರಸಮಾತ್ಮ-ಲಕ್ಷಣಮ್ ।**
**ಸತ್ಯ-ಚಿತ್-ಸುಖಮನಂತಮವ್ಯಯಂ**
**ಬ್ರಹ್ಮ ತತ್ತ್ವಮಸಿ ಭಾವಯಾತ್ಮನಿ ॥ ೨೬೨ ॥**

**ಯತ್** = ಯಾವುದು **ಪರಾತ್** = ಹಿರಣ್ಯಗರ್ಭನಿಗಿಂತಲೂ **ಪರಂ** = ಶ್ರೇಷ್ಠವೊ **ಅನಪರಂ** = ತನಗಿಂತ ಶ್ರೇಷ್ಠವಾದುದು ಇಲ್ಲದಿರುವುದೊ **ಚಕಾಸ್ತಿ** = ಪ್ರಕಾಶಿಸುತ್ತಿರುವುದೊ **ಪ್ರತ್ಯಕ್-ಏಕರಸಂ** = ಸರ್ವಾಂತರವೊ **ಆತ್ಮ-ಲಕ್ಷಣಂ** = ಆತ್ಮಲಕ್ಷಣದಿಂದ ಕೂಡಿರುವುದೊ **ಸತ್ಯ-ಚಿತ್-ಸುಖಂ** = ಸಚ್ಚಿದಾನಂದಸ್ವರೂಪವೊ **ಅನಂತಂ** = ಅನಂತವೊ **ಅವ್ಯಯಂ** = ಅವ್ಯಯವೊ [ಉಳಿದುದು ಹಿಂದಿನಂತೆಯೆ].

**೨೬೨.** ಯಾವುದು ಹಿರಣ್ಯಗರ್ಭನಿಗಿಂತಲೂ ಶ್ರೇಷ್ಠವಾಗಿ ತನಗಿಂತ ಶ್ರೇಷ್ಠವಾದುದಿಲ್ಲದೆ ಪ್ರಕಾಶಿಸುತ್ತಿರುವುದೊ, ಸರ್ವಾಂತರವೊ, ಆತ್ಮಲಕ್ಷಣದಿಂದ[1] ಕೂಡಿರುವುದೊ, ಸಚ್ಚಿದಾನಂದಸ್ವರೂಪವೊ, ಅನಂತವೊ, ಅವ್ಯಯವೊ—ಆ ಬ್ರಹ್ಮವೇ ನೀನಾಗಿರುವೆ. ಇದನ್ನು ಮನಸ್ಸಿನಲ್ಲಿ ಅನುಸಂಧಾನ ಮಾಡು.

[[1] **ಯಚ್ಚಾಪ್ನೋತಿ ಯದಾದತ್ತೇ ಯಚ್ಚಾತ್ತಿ ವಿಷಯಾನಿಹ ।
ಯಚ್ಚಾಸ್ಯ ಸಂತತೋ ಭಾವಃ ತಸ್ಮಾದಾತ್ಮಾ ಪ್ರಕೀರ್ತಿತಃ ॥** ಎಂದು ಆತ್ಮನ ಲಕ್ಷಣವನ್ನು ಹೇಳಿದೆ.]

**ಉಕ್ತಮರ್ಥಮಿಮಮಾತ್ಮನಿ ಸ್ವಯಂ**
**ಭಾವಯೇತ್ ಪ್ರಥಿತಯುಕ್ತಿಭಿರ್ಧಿಯಾ ।**
**ಸಂಶಯಾದಿರಹಿತಂ ಕರಾಂಬುವತ್**
**ತೇನ ತತ್ತ್ವನಿಗಮೋ ಭವಿಷ್ಯತಿ ॥ ೨೬೩ ॥**

**ಉಕ್ತಂ** = ಇದುವರೆಗೆ ಹೇಳಿದ **ಇಮಮ್ ಅರ್ಥಂ** = ಈ ತತ್ತ್ವವನ್ನು **ಸ್ವಯಂ** = ನೀನೇ **ಆತ್ಮನಿ** = ನಿನ್ನಲ್ಲಿಯೇ **ಧಿಯಾ** = ಬುದ್ಧಿಯಿಂದ **ಪ್ರಥಿತ-ಯುಕ್ತಿಭಿಃ** = ಪ್ರಸಿದ್ಧವಾದ ಯುಕ್ತಿಗಳ ಮೂಲಕ **ಭಾವಯೇತ್** = ಭಾವಿಸಬೇಕು; **ತೇನ** = ಅದರಿಂದ **ಕರಾಂಬುವತ್** = ಅಂಗೈಯಲ್ಲಿರುವ ನೀರಿನಂತೆ **ಸಂಶಯಾದಿರಹಿತಂ** = ಸಂಶಯಾದಿಗಳಿಲ್ಲದೆ **ತತ್ತ್ವನಿಗಮಃ** = ತತ್ತ್ವನಿರ್ಣಯವು **ಭವಿಷ್ಯತಿ** = ಉಂಟಾಗುವುದು.

**೨೬೩.** ಇದುವರೆಗೆ ಹೇಳಿದ[1] ಈ ತತ್ತ್ವವನ್ನು ಪ್ರಸಿದ್ಧಯುಕ್ತಿಗಳ[2] ಮೂಲಕ ನಿನ್ನಲ್ಲಿಯೇ ಬುದ್ಧಿಯಿಂದ ಅನುಸಂಧಾನಮಾಡಬೇಕು. ಅಂಥ ಅನುಸಂಧಾನದಿಂದ ಸಂಶಯವೇ ಮೊದಲಾದುವುಗಳಿಲ್ಲದೆ ಅಂಗೈಯಲ್ಲಿರುವ ನೀರಿನಂತೆ ತತ್ತ್ವನಿರ್ಣಯವಾಗುವುದು.

[[1] ಹಿಂದಿನ ಹತ್ತು ಶ್ಲೋಕಗಳಲ್ಲಿ.
[2] ಶ್ರುತಿಗಳಿಗೆ ವಿರುದ್ಧವಾಗದ.]

**ಸಂಬೋಧಮಾತ್ರಂ ಪರಿಶುದ್ಧತತ್ತ್ವಂ**
**ವಿಜ್ಞಾಯ ಸಂಘೇ ನೃಪವಚ್ಚ ಸೈನ್ಯೇ ।**
**ತದಾಶ್ರಯಃ ಸ್ವಾತ್ಮನಿ ಸರ್ವದಾ ಸ್ಥಿತೋ**
**ವಿಲಾಪಯ ಬ್ರಹ್ಮಣಿ ವಿಶ್ವಜಾತಮ್ ॥ ೨೬೪ ॥**

**ಸೈನ್ಯೇ** - ಸೈನ್ಯದಲ್ಲಿ **ನೃಪವತ್ ಚ** = ರಾಜನನ್ನು ಹೇಗೋ ಹಾಗೆ, **ಸಂಘೇ** - ಕಾರ್ಯಕರಣಸಮೂಹದಲ್ಲಿ **ಪರಿಶುದ್ಧತತ್ತ್ವಂ** = ಪರಮಾತ್ಮತತ್ತ್ವವನ್ನು **ಸಂಬೋಧಮಾತ್ರಂ** - ಕೇವಲ-ಜ್ಞಾನಸ್ವರೂಪವನ್ನಾಗಿ **ವಿಜ್ಞಾಯ** = ತಿಳಿದುಕೊಂಡು **ತದಾಶ್ರಯಃ** = ಅದನ್ನೇ ಆಶ್ರಯಿಸಿದವನಾಗಿ **ಸ್ವ-ಆತ್ಮನಿ** = ಆತ್ಮನಲ್ಲಿಯೇ **ಸರ್ವದಾ** = ಯಾವಾಗಲೂ **ಸ್ಥಿತಃ** - ಇರುವವನಾಗಿ **ಬ್ರಹ್ಮಣಿ** = ಬ್ರಹ್ಮದಲ್ಲಿ **ವಿಶ್ವಜಾತಂ** = ವಿಶ್ವಸಮೂಹವನ್ನೆಲ್ಲ **ವಿಲಾಪಯ** - ಲಯಗೊಳಿಸು.

**೨೬೪.** ಸೈನ್ಯದಲ್ಲಿರುವ ರಾಜನನ್ನು ಕಂಡುಹಿಡಿಯುವಂತೆ ಈ ಕಾರ್ಯ-ಕರಣ-ಸಮೂಹದಲ್ಲಿ ಪರಮಾತ್ಮತತ್ತ್ವವನ್ನು ಕೇವಲ ಜ್ಞಾನಸ್ವರೂಪವೆಂದು ತಿಳಿದುಕೊಂಡು ಅದನ್ನೇ ಆಶ್ರಯಿಸಿದವನಾಗಿ ಆತ್ಮನಲ್ಲಿಯೇ ಯಾವಾಗಲೂ ಇರುವವನಾಗಿ, ಬ್ರಹ್ಮದಲ್ಲಿ ವಿಶ್ವಸಮೂಹವನ್ನೆಲ್ಲ ಲಯಗೊಳಿಸು.[೧]

[೧ ನೀರಿನಲ್ಲಿ ಪೃಥ್ವಿಯನ್ನೂ, ಅಗ್ನಿಯಲ್ಲಿ ನೀರನ್ನೂ, ವಾಯುವಿನಲ್ಲಿ ಅಗ್ನಿಯನ್ನೂ, ಆಕಾಶದಲ್ಲಿ ವಾಯುವನ್ನೂ, ಅವ್ಯಾಕೃತದಲ್ಲಿ ಆಕಾಶವನ್ನೂ, ಬ್ರಹ್ಮದಲ್ಲಿ ಅವ್ಯಾಕೃತವನ್ನೂ ಲಯಗೊಳಿಸಿ ಆ ಬ್ರಹ್ಮವೇ ತಾನೆಂದು ಅನುಸಂಧಾನಮಾಡಬೇಕು.]

**ಬುದ್ಧೌ ಗುಹಾಯಾಂ ಸದಸದ್ವಿಲಕ್ಷಣಂ**
**ಬ್ರಹ್ಮಾಸ್ತಿ ಸತ್ಯಂ ಪರಮದ್ವಿತೀಯಮ್ ।**
**ತದಾತ್ಮನಾ ಯೋಽತ್ರ ವಸೇದ್ ಗುಹಾಯಾಂ**
**ಪುನರ್ನ ತಸ್ಯಾಂಗ ಗುಹಾಪ್ರವೇಶಃ ॥ ೨೬೫ ॥**

**ಬುದ್ಧೌ** = ಬುದ್ಧಿಯೆಂಬ **ಗುಹಾಯಾಂ** = ಗುಹೆಯಲ್ಲಿ **ಸತ್-ಅಸತ್-ವಿಲಕ್ಷಣಂ** = ಸ್ಥೂಲ-ಸೂಕ್ಷ್ಮಗಳಿಗಿಂತ ಭಿನ್ನವೂ **ಸತ್ಯಂ** = ಸತ್ಸ್ವರೂಪವೂ **ಅದ್ವಿತೀಯಂ** = ಅದ್ವಿತೀಯವೂ [ಆದ] **ಪರಂ ಬ್ರಹ್ಮ** = ಪರಬ್ರಹ್ಮವು **ಅಸ್ತಿ** = ಇರುತ್ತದೆ; **ಅಂಗ** = ಎಲೈ ಶಿಷ್ಯನೆ, **ಅತ್ರ ಗುಹಾಯಾಂ** = ಈ ಗುಹೆಯಲ್ಲಿ **ಯಃ** = ಯಾವನು **ತದಾತ್ಮನಾ** = ಆ ಬ್ರಹ್ಮಸ್ವರೂಪದಿಂದ **ವಸೇತ್** = ವಾಸಮಾಡುತ್ತಾನೆಯೊ **ತಸ್ಯ** = ಅವನಿಗೆ **ಪುನಃ** = ಮತ್ತೆ **ಗುಹಾಪ್ರವೇಶಃ** = ಶರೀರಪ್ರವೇಶವು **ನ** = ಇಲ್ಲ.

**೨೬೫.** ಬುದ್ಧಿಯೆಂಬ ಗುಹೆಯಲ್ಲಿ ಸ್ಥೂಲಸೂಕ್ಷ್ಮಗಳಿಗಿಂತ ಭಿನ್ನವೂ ಸತ್ಸ್ವರೂಪವೂ ಅದ್ವಯವೂ ಆದ ಪರಬ್ರಹ್ಮವಿರುತ್ತದೆ. ಈ ಬುದ್ಧಿಗುಹೆ

ಯಲ್ಲಿ ಬ್ರಹ್ಮಸ್ವರೂಪದಿಂದಲೇ ಯಾವನು ವಾಸಮಾಡುತ್ತಾನೆಯೊ, ಹೇ ಶಿಷ್ಯನೆ, ಅವನಿಗೆ ಪುನಃ ಶರೀರವೆಂಬ ಗುಹೆಯಲ್ಲಿ ಪ್ರವೇಶವಿರುವುದಿಲ್ಲ.

['ವಿಜ್ಞಾನಮಯನೂ ಇಂದ್ರಿಯಗಳಲ್ಲಿರುವವನೂ ಬುದ್ಧಿಯಲ್ಲಿರುವ ಸ್ವಯಂ ಜ್ಯೋತಿಯೂ ಆದ ಈ ಪುರುಷನು' **ಯೋಽಯಂ ವಿಜ್ಞಾನಮಯಃ ಪ್ರಾಣೇಷು ಹೃದ್ಯಂತರ್ಜ್ಯೋತಿಃ ಪುರುಷಃ** (ಬೃಹದಾರಣ್ಯಕ ಉ. ೪. ೩. ೭)—ಇವೇ ಮೊದಲಾದ ಶ್ರುತಿಗಳ ಪ್ರಕಾರ ಬುದ್ಧಿಯನ್ನು ಬಿಟ್ಟು ಆತ್ಮನನ್ನು ಅರಿತುಕೊಳ್ಳುವುದು ಅಶಕ್ಯ ವೆಂದು ಹೇಳಿದೆ.]

**ಜ್ಞಾತೇ ವಸ್ತುನ್ಯಪಿ ಬಲವತೀ ವಾಸನಾಽನಾದಿರೇಷಾ**
**ಕರ್ತಾ ಭೋಕ್ತಾಽಪ್ಯಹಮಿತಿ ದೃಢಾ ಯಾಽಸ್ಯ ಸಂಸಾರಹೇತುಃ ।**
**ಪ್ರತ್ಯಗ್ದೃಷ್ಟ್ಯಾಽಽತ್ಮನಿ ನಿವಸತಾ ಸಾಽಪನೇಯಾ ಪ್ರಯತ್ನಾ-**
**ನ್ಮುಕ್ತಿಂ ಪ್ರಾಹುಸ್ತದಿಹ ಮುನಯೋ ವಾಸನಾ-ತಾನವಂ ಯತ್**
**॥ ೨೬೬ ॥**

**ಜ್ಞಾತೇ ವಸ್ತುನಿ ಅಪಿ** = ಆತ್ಮನನ್ನು ಅರಿತುಕೊಂಡಮೇಲೂ **ಅಹಂ** = ನಾನು **ಕರ್ತಾ** = ಕರ್ತೃ **ಅಪಿ** = ಮತ್ತು **ಭೋಕ್ತಾ** = ಭೋಕ್ತೃ **ಇತಿ** = ಎಂಬ **ಯಾ** = ಯಾವ **ಅನಾದಿಃ** = ಅನಾದಿಯಾದ **ವಾಸನಾ** = ಸಂಸ್ಕಾರವು **ಬಲವತೀ** = ಪ್ರಬಲವೂ **ದೃಢಾ** = ದೃಢವೊ [ಆಗಿರುತ್ತದೆ]; **ಏಷಾ** = ಇದು **ಅಸ್ಯ** = ಈ ಮನುಷ್ಯನ **ಸಂಸಾರಹೇತುಃ** = ಸಂಸಾರಕ್ಕೆ ಕಾರಣವಾಗಿರುತ್ತದೆ; **ಪ್ರತ್ಯಗ್ದೃಷ್ಟ್ಯಾ** = ಪ್ರತ್ಯಗಾತ್ಮದೃಷ್ಟಿಯಿಂದ **ಆತ್ಮನಿ** = ಆತ್ಮನಲ್ಲಿಯೇ **ನಿವಸತಾ** = ನೆಲಸಿರುವ ಬ್ರಹ್ಮನಿಷ್ಠನಿಂದ **ಸಾ** = ಆ ಸಂಸ್ಕಾರವು **ಪ್ರಯತ್ನಾತ್** = ಪ್ರಯತ್ನದಿಂದ **ಅಪನೇಯಾ** = ಪರಿಹರಿಸಕೊಳ್ಳತಕ್ಕದ್ದು; **ಯತ್** = ಯಾವುದು **ವಾಸನಾ-ತಾನವಂ** = ಸಂಸ್ಕಾರದ ಕೃಶತೆಯೊ **ತತ್** = ಅದನ್ನೇ **ಮುನಯಃ** = ಮುನಿಗಳು **ಇಹ** = ಇಲ್ಲಿ **ಮುಕ್ತಿಂ** = ಮುಕ್ತಿಯೆಂದು **ಪ್ರಾಹುಃ** = ಹೇಳುತ್ತಾರೆ.

**೨೬೬.** ಆತ್ಮನನ್ನು ಅರಿತುಕೊಂಡಮೇಲೂ 'ನಾನು ಕರ್ತೃ ಮತ್ತು ಭೋಕ್ತೃ' ಎಂಬ ಈ ಅನಾದಿ-ಸಂಸ್ಕಾರವು ಪ್ರಬಲವೂ ದೃಢವೂ ಆಗಿರುತ್ತದೆ. ಇದೇ ಈ ಮನುಷ್ಯನ ಸಂಸಾರಕ್ಕೆ ಕಾರಣವಾಗಿರುತ್ತದೆ. ಪ್ರತ್ಯಗಾತ್ಮನೇ ತಾನು ಎಂಬ ದೃಷ್ಟಿಯಿಂದ ಆತ್ಮನಲ್ಲಿಯೇ ನೆಲಸಿರುವ ಬ್ರಹ್ಮನಿಷ್ಠನು ಆ ಸಂಸ್ಕಾರವನ್ನು ಪ್ರಯತ್ನಪೂರ್ವಕವಾಗಿ ಪರಿಹರಿಸಿಕೊಳ್ಳಬೇಕು. ಇಂಥ ಸಂಸ್ಕಾರದ ಕ್ಷಯವನ್ನೇ ಮುನಿಗಳು ಇಲ್ಲಿ ಮುಕ್ತಿಯೆಂದು ಹೇಳುತ್ತಾರೆ.

**ಅಹಂ ಮಮೇತಿ ಯೋ ಭಾವೋ ದೇಹಾಕ್ಷಾದಾವನಾತ್ಮನಿ ।**
**ಅಧ್ಯಾಸೋಽಯಂ ನಿರಸ್ತವ್ಯೋ ವಿದುಷಾ ಸ್ವಾತ್ಮನಿಷ್ಠಯಾ ॥ ೨೬೭ ॥**

**ಅನಾತ್ಮನಿ** = ಅನಾತ್ಮವಾದ **ದೇಹ-ಅಕ್ಷ-ಆದೌ** = ದೇಹ ಇಂದ್ರಿಯ ಮೊದಲಾದುವುಗಳಲ್ಲಿ **ಅಹಂ ಮಮ ಇತಿ** = 'ನಾನು, ನನ್ನದು' ಎಂಬ **ಯಃ** = ಯಾವ **ಭಾವಃ** – ಭಾವನೆಯುಂಟೋ **ಅಯಂ** = ಈ **ಅಧ್ಯಾಸಃ** = ಅಧ್ಯಾಸವು **ವಿದುಷಾ** = ಜ್ಞಾನಿಯಿಂದ **ಸ್ವ-ಆತ್ಮ-ನಿಷ್ಠಯಾ** = ಆತ್ಮನಿಷ್ಠೆಯ ಮೂಲಕ **ನಿರಸ್ತವ್ಯಃ** = ತೊಲಗಿಸತಕ್ಕದ್ದು.

**೨೬೭.** ಅನಾತ್ಮವಾದ ದೇಹೇಂದ್ರಿಯಾದಿಗಳಲ್ಲಿ 'ನಾನು, ನನ್ನದು' ಎಂಬ ಯಾವ ಭಾವನೆಯಿದೆಯೊ—ಆ ಈ ಅಧ್ಯಾಸವನ್ನು ಜ್ಞಾನಿಯು ಆತ್ಮನಿಷ್ಠೆಯಿಂದ ತೊಲಗಿಸಬೇಕು.

**ಜ್ಞಾತ್ವಾ ಸ್ವಂ ಪ್ರತ್ಯಗಾತ್ಮಾನಂ ಬುದ್ಧಿತದ್ವೃತ್ತಿಸಾಕ್ಷಿಣಮ್ ।**
**ಸೋಽಹಮಿತ್ಯೇವ ಸದ್ವೃತ್ತ್ಯಾಽನಾತ್ಮನ್ಯಾತ್ಮಮತಿಂ ಜಹಿ ॥ ೨೬೮ ॥**

**ಬುದ್ಧಿ-ತದ್-ವೃತ್ತಿ-ಸಾಕ್ಷಿಣಂ** = ಬುದ್ಧಿಗೂ ಅದರ ವೃತ್ತಿಗಳಿಗೂ ಸಾಕ್ಷಿಯಾದ **ಸ್ವಂ** = ತನ್ನ **ಪ್ರತ್ಯಗಾತ್ಮಾನಂ** = ಅಂತರಾತ್ಮನನ್ನು **ಸಃ ಅಹಂ**=ಅವನೇ ನಾನು **ಇತಿ ಏವ**= ಎಂಬ **ಸದ್-ವೃತ್ತ್ಯಾ** = ಅಬಾಧಿತ-ಅರ್ಥವಿಷಯಕ-ಜ್ಞಾನದಿಂದ **ಜ್ಞಾತ್ವಾ**= ಅರಿತುಕೊಂಡು **ಅನಾತ್ಮನಿ** = ಅನಾತ್ಮದಲ್ಲಿ **ಆತ್ಮಮತಿಂ** = ನಾನೆಂಬ ಬುದ್ಧಿಯನ್ನು **ಜಹಿ** = ಬಿಡು.

**೨೬೮.** ಬುದ್ಧಿಗೂ ಅದರ ವೃತ್ತಿಗಳಿಗೂ ಸಾಕ್ಷಿಯಾಗಿರುವ ತನ್ನ ಅಂತರಾತ್ಮನನ್ನು 'ಅವನೇ ನಾನು' ಎಂಬ ಅಬಾಧಿತ-ಅರ್ಥವಿಷಯಕ-ಜ್ಞಾನದಿಂದ ಅರಿತುಕೊಂಡು ಅನಾತ್ಮದಲ್ಲಿ ನಾನೆಂಬ ಬುದ್ಧಿಯನ್ನು ಬಿಡು.

[ಇಲ್ಲಿ ಅಧ್ಯಾಸ-ನಿವೃತ್ತಿಯ ಪ್ರಕಾರವನ್ನು ಹೇಳಿದೆ.]

**ಲೋಕಾನುವರ್ತನಂ ತ್ಯಕ್ತ್ವಾ ತ್ಯಕ್ತ್ವಾ ದೇಹಾನುವರ್ತನಮ್ ।**
**ಶಾಸ್ತ್ರಾನುವರ್ತನಂ ತ್ಯಕ್ತ್ವಾ ಸ್ವಾಧ್ಯಾಸಾಪನಯಂ ಕುರು ॥ ೨೬೯ ॥**

**ಲೋಕಾನುವರ್ತನಂ**= ಲೋಕಾನುಸರಣೆಯನ್ನು **ತ್ಯಕ್ತ್ವಾ**=ಬಿಟ್ಟು **ದೇಹಾನುವರ್ತನಂ** = ದೇಹಾನುಸರಣೆಯನ್ನು **ತ್ಯಕ್ತ್ವಾ** = ಬಿಟ್ಟು **ಶಾಸ್ತ್ರಾನುವರ್ತನಂ** = ಶಾಸ್ತ್ರಾನುಸರಣೆಯನ್ನು **ತ್ಯಕ್ತ್ವಾ** = ಬಿಟ್ಟು **ಸ್ವ-ಅಧ್ಯಾಸ-ಅಪನಯಂ ಕುರು** = ನಿನ್ನಲ್ಲಿ ಉಂಟಾಗಿರುವ ಅಧ್ಯಾಸದ ತಿರಸ್ಕಾರವನ್ನು ಮಾಡು.

**೨೬೯.** ಲೋಕವ್ಯವಹಾರದ ಅನುಸರಣೆಯನ್ನು ಬಿಟ್ಟು, ಶರೀರವನ್ನು ಅನುಸರಿಸುವುದನ್ನು ಬಿಟ್ಟು, ಶಾಸ್ತ್ರವನ್ನು ಅನುಸರಿಸುವುದನ್ನು[1] ಬಿಟ್ಟು ನಿನಗೆ ಉಂಟಾಗಿರುವ ಅಧ್ಯಾಸವನ್ನು ತೊಲಗಿಸಿಕೊ.

[[1] ಮೋಕ್ಷ ಪ್ರಯೋಜಕ-ಗ್ರಂಥಗಳನ್ನು ಬಿಟ್ಟು ಇತರ ಗ್ರಂಥಗಳನ್ನು ಓದುವುದು.]

**ಲೋಕವಾಸನಯಾ ಜಂತೋಃ ಶಾಸ್ತ್ರವಾಸನಯಾಽಪಿ ಚ ।**
**ದೇಹವಾಸನಯಾ ಜ್ಞಾನಂ ಯಥಾವನ್ನೈವ ಜಾಯತೇ ॥ ೨೭೦ ॥**

**ಲೋಕವಾಸನಯಾ**=ಲೋಕವಾಸನೆಯಿಂದಲೂ ಅಪಿ=ಮತ್ತು **ಶಾಸ್ತ್ರವಾಸನಯಾ** = ಶಾಸ್ತ್ರವಾಸನೆಯಿಂದಲೂ **ದೇಹವಾಸನಯಾ** = ದೇಹವಾಸನೆಯಿಂದಲೂ **ಜಂತೋಃ**=ಜೀವನಿಗೆ **ಜ್ಞಾನಂ**=ಜ್ಞಾನವು **ಯಥಾವತ್**=ಯಥಾರ್ಥವಾಗಿ **ನ ಏವ ಜಾಯತೇ**=ಉಂಟಾಗುವುದೇ ಇಲ್ಲ.

**೨೭೦.** ಲೋಕವಾಸನೆಯಿಂದಲೂ[1] ಶಾಸ್ತ್ರವಾಸನೆಯಿಂದಲೂ[2] ದೇಹವಾಸನೆಯಿಂದಲೂ ಜೀವನಿಗೆ ಯಥಾರ್ಥವಾದ ಜ್ಞಾನವು ಉಂಟಾಗುವುದೇ ಇಲ್ಲ.

[[1] ವ್ಯವಹಾರದಲ್ಲಿ ಇತರರ ಅಪೇಕ್ಷೆಗೆ ಅನುಸಾರವಾಗಿ ನಡೆಯುವುದು ಲೋಕವಾಸನೆಯು.

[2] ಜೀವನ್ಮುಕ್ತಿವಿವೇಕದ ವಾಸನಾಕ್ಷಯ-ಪ್ರಕರಣದಲ್ಲಿ ವಿದ್ಯಾರಣ್ಯಮುನಿಗಳು ಇದನ್ನು ವಿಸ್ತಾರವಾಗಿ ಹೇಳಿರುತ್ತಾರೆ. ಶಾಸ್ತ್ರವಾಸನೆಯು ಪಾಠವ್ಯಸನ ಶಾಸ್ತ್ರವ್ಯಸನ ಅನುಷ್ಠಾನವ್ಯಸನ ಎಂದು ಮೂರು ವಿಧವಾಗಿದೆ ಎಂದು ಅಲ್ಲಿಯೇ ಹೇಳಿದೆ.]

**ಸಂಸಾರ-ಕಾರಾಗೃಹ-ಮೋಕ್ಷಮಿಚ್ಛೋ-**
**ರಯೋಮಯಂ ಪಾದನಿಬದ್ಧ-ಶೃಂಖಲಮ್ ।**
**ವದಂತಿ ತಜ್ಜ್ಞಾಃ ಪಟು ವಾಸನಾತ್ರಯಂ**
**ಯೋಽಸ್ಮಾದ್ವಿಮುಕ್ತಃ ಸಮುಪೈತಿ ಮುಕ್ತಿಮ್ ॥ ೨೭೧ ॥**

**ಸಂಸಾರ-ಕಾರಾಗೃಹ-ಮೋಕ್ಷಮ್ ಇಚ್ಛೋಃ**=ಸಂಸಾರವೆಂಬ ಕಾರಾಗೃಹದಿಂದ ಬಿಡುಗಡೆಯನ್ನು ಇಚ್ಛಿಸುವವನಿಗೆ **ಪಟು ವಾಸನಾತ್ರಯಂ**=ಬಲವಾದ ವಾಸನಾತ್ರಯವನ್ನು **ಅಯೋಮಯಂ**=ಕಬ್ಬಿಣದಿಂದ ಮಾಡಿರುವ **ಪಾದನಿಬದ್ಧ-ಶೃಂಖಲಂ**=ಕಾಲಿಗೆ ಕಟ್ಟಿರುವ ಸರಪಳಿಯೆಂದು **ತಜ್ಜ್ಞಾಃ**=ತಿಳಿದವರು **ವದಂತಿ**=ಹೇಳುತ್ತಾರೆ; **ಯಃ**=ಯಾವನು **ಅಸ್ಮಾತ್**=ಇದರಿಂದ **ವಿಮುಕ್ತಃ**=ಬಿಡುಗಡೆಹೊಂದುವನೊ [ಅವನೇ] **ಮುಕ್ತಿಂ**=ಮೋಕ್ಷವನ್ನೂ **ಸಮುಪೈತಿ**=ಹೊಂದುತ್ತಾನೆ.

**೨೭೧.** ಸಂಸಾರವೆಂಬ ಕಾರಾಗೃಹದಿಂದ ಬಿಡುಗಡೆಯನ್ನು ಇಚ್ಛಿಸುವವನಿಗೆ ಬಲವಾದ ವಾಸನಾತ್ರಯವೇ ಕಾಲಿಗೆ ಕಟ್ಟಿರುವ ಕಬ್ಬಿಣದ ಸರಪಳಿ ಎಂದು ತಿಳಿದವರು ಹೇಳುತ್ತಾರೆ. ಯಾವನು ಈ (ವಾಸನಾತ್ರಯದಿಂದ) ಬಿಡುಗಡೆಯನ್ನು ಹೊಂದುವನೊ ಅವನೇ ಮುಕ್ತಿಯನ್ನು ಹೊಂದುತ್ತಾನೆ.

**ಜಲಾದಿ-ಸಂಸರ್ಗ-ವಶಾತ್ ಪ್ರಭೂತ-**
**ದುರ್ಗಂಧ-ಧೂತಾಽಗರು-ದಿವ್ಯವಾಸನಾ ।**
**ಸಂಘರ್ಷಣೇನೈವ ವಿಭಾತಿ ಸಮ್ಯಗ್**
**ವಿಧೂಯಮಾನೇ ಸತಿ ಬಾಹ್ಯಗಂಧೇ ॥ ೨೭೨ ॥**

**ಜಲ-ಆದಿ-ಸಂಸರ್ಗ-ವಶಾತ್**=ನೀರು ಮೊದಲಾದುವುಗಳ ಸಂಪರ್ಕದ ವಶದಿಂದ **ಪ್ರಭೂತ-ದುರ್ಗಂಧ-ಧೂತ-ಅಗರು-ದಿವ್ಯವಾಸನಾ**=ಹೆಚ್ಚಾದ ದುರ್ವಾಸನೆಯಿಂದ ತಿರಸ್ಕರಿಸಲ್ಪಟ್ಟ ಅಗರಿನ ದಿವ್ಯವಾಸನೆಯು **ಸಂಘರ್ಷಣೇನ ಏವ**=ತೇಯುವುದರಿಂದಲೇ **ಬಾಹ್ಯಗಂಧೇ ವಿಧೂಯಮಾನೇ ಸತಿ**=ಹೊರಗಿನ ದುರ್ಗಂಧವು ಹೋದಮೇಲೆಯೇ **ಸಮ್ಯಕ್**=ಚೆನ್ನಾಗಿ **ವಿಭಾತಿ**=ಪರಿಮಳ ಬೀರುತ್ತದೆ.

**೨೭೨.** ನೀರೇ ಮೊದಲಾದುವುಗಳ ಸಂಪರ್ಕದಿಂದ ಉಂಟಾದ ವಿಶೇಷ-ದುರ್ಗಂಧದಿಂದ ಮುಚ್ಚಲ್ಪಟ್ಟಿರುವ ಅಗರಿನ ದಿವ್ಯವಾಸನೆಯು ಅದನ್ನು ತೇದು ಹೊರಗಿನ ದುರ್ವಾಸನೆಯು ಹೋದ ಮೇಲೆಯೇ ಚೆನ್ನಾಗಿ ಪರಿಮಳ ಬೀರುತ್ತದೆ.

**ಅಂತಃಶ್ರಿತಾನಂತ-ದುರಂತವಾಸನಾ-**
**ಧೂಲೀ-ವಿಲಿಪ್ತಾ ಪರಮಾತ್ಮ-ವಾಸನಾ ।**
**ಪ್ರಜ್ಞಾತಿಸಂಘರ್ಷಣತೋ ವಿಶುದ್ಧಾ**
**ಪ್ರತೀಯತೇ ಚಂದನ-ಗಂಧವತ್ ಸ್ಫುಟಮ್ ॥೨೭೩॥**

**ಅಂತಃ-ಶ್ರಿತ-ಅನಂತ-ದುರಂತ-ವಾಸನಾ-ಧೂಲೀ-ವಿಲಿಪ್ತಾ**=ಅಂತಃಕರಣವನ್ನಾಶ್ರಯಿಸಿಕೊಂಡಿರುವ ಬಹುವಿಧವೂ ದುಷ್ಫಲಪ್ರದವೂ ಆದ ದುರ್ವಾಸನೆಗಳ ಧೂಳಿನಿಂದ ಮುಚ್ಚಲ್ಪಟ್ಟ **ಪರಮಾತ್ಮ-ವಾಸನಾ**=ಪರಮಾತ್ಮವಾಸನೆಯು **ಪ್ರಜ್ಞಾ-ಅತಿಸಂಘರ್ಷಣತಃ**=ಪ್ರಜ್ಞೆಯನ್ನು ಚೆನ್ನಾಗಿ ತೇಯುವುದರಿಂದ **ವಿಶುದ್ಧಾ**=ಪರಿಶುದ್ಧವಾಗಿ **ಚಂದನ-ಗಂಧವತ್**=ಚಂದನದ ಗಂಧದಂತೆ **ಸ್ಫುಟಂ ಪ್ರತೀಯತೇ**=ಚೆನ್ನಾಗಿ ಪ್ರಕಾಶಿಸುತ್ತದೆ.

**೨೭೩.** (ಹೀಗೆಯೇ) ಅಂತಃಕರಣವನ್ನು ಆಶ್ರಯಿಸಿಕೊಂಡಿರುವ ಬಹುವಿಧವೂ ದುಷ್ಫಲಪ್ರದವೂ ಆದ ದುರ್ವಾಸನೆಗಳ ಧೂಳಿನಿಂದ ಮುಚ್ಚಲ್ಪಟ್ಟ ಪರಮಾತ್ಮವಾಸನೆಯು ಪ್ರಜ್ಞೆಯನ್ನು[೧] ಚೆನ್ನಾಗಿ ತೇಯುವುದರಿಂದ ಪರಿಶುದ್ಧವಾಗಿ ಚಂದನದ ಗಂಧದಂತೆ ಪ್ರಕಾಶಿಸುತ್ತದೆ.

[೧ 'ಧೀಮಂತನಾದ ಬ್ರಾಹ್ಮಣನು ಆತ್ಮನನ್ನೇ ತಿಳಿದುಕೊಂಡು ಪ್ರಜ್ಞೆಯನ್ನು ಅವಲಂಬಿಸಬೇಕು' **ತಮೇವ ಧೀರೋ ವಿಜ್ಞಾಯ ಪ್ರಜ್ಞಾಂ ಕುರ್ವೀತ ಬ್ರಾಹ್ಮಣಃ**

(ಬೃಹದಾರಣ್ಯಕ ಉ. ೪. ೪. ೨೧). 'ಜೀವಾತ್ಮ ಪರಮಾತ್ಮರನ್ನು ಶೋಧಿಸಿ ಒಂದೇ ಎಂದು ಅರಿಯುವ ನಿರ್ವಿಕಲ್ಪವಾದ ಚಿನ್ಮಾತ್ರವೃತ್ತಿಯು ಪ್ರಜ್ಞೆ ಎನ್ನಿಸುವುದು' ಎಂದು ಮುಂದೆ ೪೨೬ರಲ್ಲಿ ಹೇಳಲಾಗುತ್ತದೆ.]

**ಅನಾತ್ಮ-ವಾಸನಾ-ಜಾಲೈಸ್ತಿರೋಭೂತಾತ್ಮ-ವಾಸನಾ ।**
**ನಿತ್ಯಾತ್ಮನಿಷ್ಠಯಾ ತೇಷಾಂ ನಾಶೇ ಭಾತಿ ಸ್ವಯಂ ಸ್ಫುಟಮ್**
**॥ ೨೭೪ ॥**

**ಅನಾತ್ಮ-ವಾಸನಾ-ಜಾಲೈಃ** = ಅನಾತ್ಮವಾಸನೆಗಳ ಸಮೂಹದಿಂದ **ತಿರೋಭೂತ-ಆತ್ಮವಾಸನಾ** = ಮರೆಯಾಗಿರುವ ಆತ್ಮವಾಸನೆಯು **ನಿತ್ಯಾತ್ಮನಿಷ್ಠಯಾ** = ನಿತ್ಯವೂ ಆತ್ಮನಲ್ಲಿಯೇ ನೆಲೆಗೊಳ್ಳುವುದರಿಂದ **ತೇಷಾಂ ನಾಶೇ** [**ಸತಿ**] – ಅವುಗಳು ನಾಶ ಹೊಂದಿದಾಗ **ಸ್ವಯಂ** – ತಾನೇ **ಸ್ಫುಟಂ ಭಾತಿ** = ಸ್ಫುಟವಾಗಿ ತೋರಿಕೊಳ್ಳುವುದು.

**೨೭೪.** ಅನಾತ್ಮವಾಸನೆಗಳ ಸಮೂಹದಿಂದ[1] ಮರೆಯಾಗಿರುವ ಆತ್ಮವಾಸನೆಯು, ನಿತ್ಯವೂ ಆತ್ಮನಲ್ಲಿಯೇ ನೆಲೆಗೊಳ್ಳುವುದರಿಂದ ಅವುಗಳು ನಾಶ ಹೊಂದಿದಾಗ, ತಾನೇ ಸ್ಫುಟವಾಗಿ ತೋರಿಕೊಳ್ಳುವುದು.

[[1] 'ದಂಭ, ದರ್ಪ, ಅಹಂಕಾರ, ಕ್ರೋಧ, ಕಠಿಣವಾದ ಮಾತು ಮತ್ತು ಅಜ್ಞಾನ' **ದಂಭೋ ದರ್ಪೋಽತಿಮಾನಶ್ಚ ಕ್ರೋಧಃ ಪಾರುಷ್ಯಮೇವ ಚ** (ಗೀತಾ ೧೬. ೪) ಇವೇ ಮೊದಲಾದ ಆಸುರೀಸಂಪತ್ತಿಗೆ ಸೇರಿದ ಮಾನಸ-ವಾಸನೆಗಳು.]

**ಯಥಾ ಯಥಾ ಪ್ರತ್ಯಗವಸ್ಥಿತಂ ಮನ-**
**ಸ್ತಥಾ ತಥಾ ಮುಂಚತಿ ಬಾಹ್ಯವಾಸನಾಃ ।**
**ನಿಃಶೇಷಮೋಕ್ಷೇ ಸತಿ ವಾಸನಾನಾ-**
**ಮಾತ್ಮಾನುಭೂತಿಃ ಪ್ರತಿಬಂಧಶೂನ್ಯಾ ॥ ೨೭೫ ॥**

**ಮನಃ** = ಮನಸ್ಸು **ಯಥಾ ಯಥಾ** – ಎಷ್ಟೆಷ್ಟು **ಪ್ರತ್ಯಕ್** = ಒಳಗೆ **ಅವಸ್ಥಿತಂ** – ನೆಲೆಗೊಳ್ಳುತ್ತದೆಯೊ **ತಥಾ ತಥಾ** = ಅಷ್ಟಷ್ಟು **ಬಾಹ್ಯವಾಸನಾಃ** = ಹೊರಗಿನ ವಾಸನೆಗಳನ್ನು **ಮುಂಚತಿ** = ಬಿಟ್ಟುಬಿಡುತ್ತದೆ; **ವಾಸನಾನಾಂ**=ಅನಾತ್ಮವಾಸನೆಗಳ **ನಿಃಶೇಷಮೋಕ್ಷೇ ಸತಿ** = ಸಂಪೂರ್ಣನಾಶವುಂಟಾದರೆ **ಪ್ರತಿಬಂಧಶೂನ್ಯಾ** = ಪ್ರತಿಬಂಧವಿಲ್ಲದ **ಆತ್ಮಾನುಭೂತಿಃ** = ಆತ್ಮಾನುಭವವು [ಉಂಟಾಗುತ್ತದೆ].

**೨೭೫.** ಮನಸ್ಸು ಎಷ್ಟೆಷ್ಟು ಪ್ರತ್ಯಗಾತ್ಮನಲ್ಲಿ ನೆಲೆಗೊಳ್ಳುತ್ತದೆಯೊ ಅಷ್ಟಷ್ಟೂ ಹೊರಗಿನ ವಾಸನೆಗಳನ್ನು[1] ಬಿಡುತ್ತದೆ. ಆ ವಾಸನೆಗಳು ಸಂಪೂರ್ಣವಾಗಿ ನಾಶವಾದಮೇಲೆ[2] ಯಾವ ಪ್ರತಿಬಂಧವೂ ಇಲ್ಲದ ಆತ್ಮಾನುಭವವು (ಉಂಟಾಗುತ್ತದೆ).

[೧ ಮಕ್ಕಳು, ಮನೆ ಮೊದಲಾದುವುಗಳಲ್ಲಿ ಮಮತೆ, ಅನ್ನಮಯಾದಿ-ಕೋಶಗಳಲ್ಲಿ ತಾದಾತ್ಮ್ಯ.

೨ 'ಪರಬ್ರಹ್ಮವನ್ನು ಸಾಕ್ಷಾತ್ಕಾರಮಾಡಿಕೊಂಡಮೇಲೆ ಇವನ ತೃಷ್ಣೆಯೂ ಕೂಡ ಹಿಂತಿರುಗುವುದು' **ರಸೋಽಪ್ಯಸ್ಯ ಪರಂ ದೃಷ್ಟ್ವಾ ನಿವರ್ತತೇ** (ಗೀತಾ ೨. ೫೯).]

**ಸ್ವಾತ್ಮನ್ಯೇವ ಸದಾ ಸ್ಥಿತ್ವಾ ಮನೋ ನಶ್ಯತಿ ಯೋಗಿನಃ ।**
**ವಾಸನಾನಾಂ ಕ್ಷಯಶ್ಚಾತಃ ಸ್ವಾಧ್ಯಾಸಾಪನಯಂ ಕುರು ॥ ೨೭೬ ॥**

**ಯೋಗಿನಃ** = ಯೋಗಿಯ **ಮನಃ** = ಮನಸ್ಸು **ಸ್ವಾತ್ಮನಿ ಏವ** = ಬ್ರಹ್ಮದಲ್ಲಿಯೇ **ಸದಾ** = ಯಾವಾಗಲೂ **ಸ್ಥಿತ್ವಾ** = ಇದ್ದುಕೊಂಡು **ನಶ್ಯತಿ** = ನಾಶವಾಗುತ್ತದೆ; [ತತಃ = ಅನಂತರ] **ವಾಸನಾನಾಂ** = ಅನಾತ್ಮವಾಸನೆಗಳ **ಕ್ಷಯಃ ಚ** = ನಾಶವೂ [**ಜಾಯತೇ** = ಉಂಟಾಗುತ್ತದೆ]; **ಅತಃ** = ಆದುದರಿಂದ **ಸ್ವ-ಅಧ್ಯಾಸ-ಅಪನಯಂ** = ನಿನ್ನಲ್ಲಿ ಉಂಟಾಗಿರುವ ಅಧ್ಯಾಸದ ತಿರಸ್ಕಾರವನ್ನು **ಕುರು** = ಮಾಡು.

**೨೭೬.** ಯೋಗಿಯ ಮನಸ್ಸು[೧] ಯಾವಾಗಲೂ ಬ್ರಹ್ಮದಲ್ಲಿಯೇ ಇದ್ದುಕೊಂಡು ನಾಶವಾಗುತ್ತದೆ. (ಅನಂತರ) ಅನಾತ್ಮವಾಸನೆಗಳ ಕ್ಷಯವೂ ಉಂಟಾಗುತ್ತದೆ. ಆದುದರಿಂದ ನಿನ್ನಲ್ಲಿ ಉಂಟಾಗಿರುವ ಅಧ್ಯಾಸವನ್ನು ಹೋಗಲಾಡಿಸಿಕೊ.

[೧ ಚಿತ್ತದ ರಾಜಸೀ-ತಾಮಸೀ-ವೃತ್ತಿಗಳು.]

**ತಮೋ ದ್ವಾಭ್ಯಾಂ ರಜಃ ಸತ್ತ್ವಾತ್ ಸತ್ತ್ವಂ ಶುದ್ಧೇನ ನಶ್ಯತಿ ।**
**ತಸ್ಮಾತ್ ಸತ್ತ್ವಮವಷ್ಟಭ್ಯ ಸ್ವಾಧ್ಯಾಸಾಪನಯಂ ಕುರು ॥ ೨೭೭ ॥**

**ತಮಃ** = ತಮೋಗುಣವು **ದ್ವಾಭ್ಯಾಂ** = ಸತ್ತ್ವರಜಸ್ಸುಗಳಿಂದ **ನಶ್ಯತಿ** = ನಾಶವಾಗುತ್ತದೆ, **ರಜಃ** = ರಜಸ್ಸು **ಸತ್ತ್ವಾತ್** = ಸತ್ತ್ವಗುಣದಿಂದಲೂ, **ಸತ್ತ್ವಂ** = ಸತ್ತ್ವಗುಣವು **ಶುದ್ಧೇನ** = ಶುದ್ಧಸತ್ತ್ವದಿಂದಲೂ [ನಾಶವಾಗುತ್ತದೆ]; **ತಸ್ಮಾತ್** = ಆದುದರಿಂದ **ಸತ್ತ್ವಂ** = ಶುದ್ಧಸತ್ತ್ವವನ್ನು **ಅವಷ್ಟಭ್ಯ** = ಅವಲಂಬಿಸಿ **ಸ್ವ-ಅಧ್ಯಾಸ-ಅಪನಯಂ ಕುರು.**

**೨೭೭.** ತಮೋಗುಣವು ಸತ್ತ್ವರಜಸ್ಸುಗಳಿಂದಲೂ ರಜೋಗುಣವು ಸತ್ತ್ವಗುಣದಿಂದಲೂ ಸತ್ತ್ವಗುಣವು ಶುದ್ಧಸತ್ತ್ವದಿಂದಲೂ[೧] ನಾಶವಾಗುತ್ತದೆ. ಆದುದರಿಂದ ಶುದ್ಧಸತ್ತ್ವವನ್ನು ಅವಲಂಬಿಸಿಕೊಂಡು ನಿನ್ನಲ್ಲಿ ಉಂಟಾಗಿರುವ ಅಧ್ಯಾಸವನ್ನು ಹೋಗಲಾಡಿಸಿಕೊ.

[೧ ಇದರ ಲಕ್ಷಣವನ್ನು ೧೧೯ನೆಯ ಶ್ಲೋಕದಲ್ಲಿ ಹೇಳಿದೆ.]

**ಪ್ರಾರಬ್ಧಂ ಪುಷ್ಯತಿ ವಪುರಿತಿ ನಿಶ್ಚಿತ್ಯ ನಿಶ್ಚಲಃ ।**
**ಧೈರ್ಯಮಾಲಂಬ್ಯ ಯತ್ನೇನ ಸ್ವಾಧ್ಯಾಸಾಪನಯಂ ಕುರು**
**॥ ೨೭೮ ॥**

**ಪ್ರಾರಬ್ಧಂ** = ಪ್ರಾರಬ್ಧಕರ್ಮವು **ವಪುಃ** = ಶರೀರವನ್ನು **ಪುಷ್ಯತಿ** = ಪೋಷಿಸುತ್ತದೆ **ಇತಿ** = ಎಂದು **ನಿಶ್ಚಿತ್ಯ** = ನಿಶ್ಚಯಿಸಿ **ನಿಶ್ಚಲಃ** [ಸನ್] = ನಿರ್ವಿಕಾರಚಿತ್ತನಾಗಿ **ಧೈರ್ಯಂ** = ಧೈರ್ಯವನ್ನು **ಆಲಂಬ್ಯ** = ಆಶ್ರಯಿಸಿ **ಯತ್ನೇನ** = ಪ್ರಯತ್ನದಿಂದ **ಸ್ವಾಧ್ಯಾಸಾಪನಯಂ ಕುರು.**

**೨೭೮.** 'ಪ್ರಾರಬ್ಧಕರ್ಮವು[೧] ಶರೀರವನ್ನು ಪೋಷಿಸುತ್ತದೆ' ಎಂದು ನಿಶ್ಚಯಿಸಿ ನಿರ್ವಿಕಾರಚಿತ್ತನಾಗಿ ಧೈರ್ಯವನ್ನು ಆಶ್ರಯಿಸಿಕೊಂಡು ನಿನ್ನಲ್ಲಿ ಉಂಟಾಗಿರುವ ಅಧ್ಯಾಸವನ್ನು ಹೋಗಲಾಡಿಸಿಕೊ.

[[೧] ಯಾವ ಕರ್ಮವು ಈಗ ಅನುಭವಿಸುತ್ತಿರುವ ಫಲವನ್ನು ಕೊಡುವುದಕ್ಕೆ ಪ್ರಾರಂಭವಾಗಿರುವುದೊ ಅದು ಪ್ರಾರಬ್ಧ. ಇದನ್ನು ಯಾವುದರಿಂದಲೂ ಪರಿಹರಿಸಲು ಸಾಧ್ಯವಲ್ಲದುದರಿಂದ ಅನುಭವಿಸಿಯೇ ಮುಗಿಸಬೇಕಾಗಿರುವುದು. ಇದು ನಾಶವಾದ ಮೇಲೆ ಶರೀರಪಾತವಾಗಿ ವಿದೇಹಮುಕ್ತಿಯುಂಟಾಗುತ್ತದೆ.]

**ನಾಹಂ ಜೀವಃ ಪರಂ ಬ್ರಹ್ಮೇತ್ಯತದ್ವ್ಯಾವೃತ್ತಿ-ಪೂರ್ವಕಮ್ ।**
**ವಾಸನಾವೇಗತಃ ಪ್ರಾಪ್ತ-ಸ್ವಾಧ್ಯಾಸಾಪನಯಂ ಕುರು ॥ ೨೭೯ ॥**

**ಅಹಂ** = ನಾನು **ಜೀವಃ ನ** = ಜೀವನಲ್ಲ **ಪರಂ ಬ್ರಹ್ಮ** = ಪರಬ್ರಹ್ಮವೇ **ಇತಿ** = ಎಂದು **ಅತದ್-ವ್ಯಾವೃತ್ತಿ-ಪೂರ್ವಕಂ** = ಅನಾತ್ಮವಸ್ತುಗಳನ್ನು ನಿರಾಕರಿಸುವುದರ ಮೂಲಕ **ವಾಸನಾವೇಗತಃ** = ಅನಾತ್ಮವಾಸನೆಯ ವೇಗದಿಂದ **ಪ್ರಾಪ್ತ** = ಉಂಟಾದ-**ಸ್ವಾಧ್ಯಾಸಾಪನಯಂ ಕುರು.**

**೨೭೯.** 'ನಾನು ಜೀವನಲ್ಲ, ಪರಬ್ರಹ್ಮವೇ' ಎಂದು ಅನಾತ್ಮವಸ್ತುಗಳನ್ನು ನಿರಾಕರಿಸುವುದರ ಮೂಲಕ[೧] ಅನಾತ್ಮವಾಸನೆಯ ವೇಗದಿಂದ ನಿನ್ನಲ್ಲಿ ಉಂಟಾಗಿರುವ ಅಧ್ಯಾಸವನ್ನು ಹೋಗಲಾಡಿಸಿಕೊ.

[[೧] 'ನಾನು ದೇಹವಲ್ಲ, ಇಂದ್ರಿಯಗಳಲ್ಲ, ಮನಸ್ಸಲ್ಲ, ಅಹಂಕಾರವಲ್ಲ, ಪ್ರಾಣಿವರ್ಗವಲ್ಲ; ಬುದ್ಧಿಯೂ ಅಲ್ಲ; ಪತ್ನೀ-ಪುತ್ರ-ಕ್ಷೇತ್ರ-ವಿತ್ತಾದಿಗಳಿಂದ ದೂರನಾದವನು ನಾನು; ನಿತ್ಯನೂ ಸಾಕ್ಷಿಯೂ ಪ್ರತ್ಯಗಾತ್ಮನೂ ಆದ ಸಾಕ್ಷಾತ್ ಶಿವನೇ ನಾನು' (ಆತ್ಮಪಂಚಕ ೧). ]

**ಶ್ರುತ್ಯಾ ಯುಕ್ತ್ಯಾ ಸ್ವಾನುಭೂತ್ಯಾ ಜ್ಞಾತ್ವಾ ಸಾರ್ವಾತ್ಮ್ಯಮಾತ್ಮನಃ।**
**ಕ್ವಚಿದಾಭಾಸತಃ ಪ್ರಾಪ್ತ-ಸ್ವಾಧ್ಯಾಸಾಪನಯಂ ಕುರು ॥ ೨೮೦ ॥**

**ಶ್ರುತ್ಯಾ** = ಶ್ರುತಿಯಿಂದಲೂ **ಯುಕ್ತ್ಯಾ** = ಯುಕ್ತಿಯಿಂದಲೂ **ಸ್ವಾನುಭೂತ್ಯಾ** = ಸ್ವಾನುಭವದಿಂದಲೂ **ಆತ್ಮನಃ** = ಆತ್ಮನ **ಸಾರ್ವಾತ್ಮ್ಯಂ** = ಸರ್ವಾತ್ಮಕತ್ವವನ್ನು **ಜ್ಞಾತ್ವಾ** = ತಿಳಿದುಕೊಂಡು **ಕ್ವಚಿತ್** = ಅಕಸ್ಮಾತ್ತಾಗಿ **ಆಭಾಸತಃ** = ತೋರ್ಕೆಯಿಂದ **ಪ್ರಾಪ್ತ-ಸ್ವಾಧ್ಯಾಸಾಪನಯಂ ಕುರು.**

**೨೮೦.** ಉಪನಿಷದ್ವಾಕ್ಯದಿಂದಲೂ ಯುಕ್ತಿಯಿಂದಲೂ ಸ್ವಾನುಭವದಿಂದಲೂ ಆತ್ಮನ ಸರ್ವಾತ್ಮಕತ್ವವನ್ನು ತಿಳಿದುಕೊಂಡು ಅಕಸ್ಮಾತ್ತಾಗಿ ತೋರ್ಕೆಯಿಂದ ನಿನ್ನಲ್ಲಿ ಉಂಟಾಗಬಹುದಾದ ಅಧ್ಯಾಸವನ್ನು ಹೋಗಲಾಡಿಸಿಕೊ.

**ಅನಾದಾನ-ವಿಸರ್ಗಾಭ್ಯಾಮೀಷನ್ನಾಸ್ತಿ ಕ್ರಿಯಾ ಮುನೇಃ ।**
**ತದೇಕನಿಷ್ಠಯಾ ನಿತ್ಯಂ ಸ್ವಾಧ್ಯಾಸಾಪನಯಂ ಕುರು ॥ ೨೮೧ ॥**

**ಮುನೇಃ** = ಮುನಿಗೆ **ಅನಾದಾನ-ವಿಸರ್ಗಾಭ್ಯಾಂ** = ಸ್ವೀಕರಿಸುವುದು ಅಥವಾ ಬಿಡಬೇಕಾದುದು ಇಲ್ಲದಿರುವುದರಿಂದ **ಈಷತ್ ಕ್ರಿಯಾ** = ಸ್ವಲ್ಪ ಕ್ರಿಯೆ ಎಂಬುದೂ **ನ ಅಸ್ತಿ** = ಇಲ್ಲವು; **ನಿತ್ಯಂ** = ಯಾವಾಗಲೂ **ತತ್-ಏಕನಿಷ್ಠಯಾ** = ಪರಮಾತ್ಮನಲ್ಲಿ ಅನನ್ಯ ನಿಷ್ಠೆಯುಳ್ಳವನಾಗಿ **ಸ್ವಾಧ್ಯಾಸಾಪನಯಂ ಕುರು.**

**೨೮೧.** ಮುನಿಗೆ ಸ್ವೀಕರಿಸತಕ್ಕದ್ದಾಗಲಿ ಬಿಡತಕ್ಕದ್ದಾಗಲಿ ಇಲ್ಲದಿರುವುದರಿಂದ ಯಾವ ಕರ್ತವ್ಯವೂ ಇರುವುದಿಲ್ಲ. (ಆದುದರಿಂದ) ಯಾವಾಗಲೂ ಪರಮಾತ್ಮನಲ್ಲಿ ಅನನ್ಯನಿಷ್ಠೆಯುಳ್ಳವನಾಗಿ ನಿನ್ನಲ್ಲಿ ಉಂಟಾಗಿರುವ ಅಧ್ಯಾಸವನ್ನು ಹೋಗಲಾಡಿಸಿಕೊ.

**ತತ್ತ್ವಮಸ್ಯಾದಿ-ವಾಕ್ಯೋತ್ಥ-ಬ್ರಹ್ಮಾತ್ಮೈಕತ್ವ-ಬೋಧತಃ ।**
**ಬ್ರಹ್ಮಣ್ಯಾತ್ಮತ್ವ-ದಾರ್ಢ್ಯಾಯ ಸ್ವಾಧ್ಯಾಸಾಪನಯಂ ಕುರು ॥ ೨೮೨ ॥**

**ತತ್ತ್ವಮಸಿ-ಆದಿ-ವಾಕ್ಯ-ಉತ್ಥ-ಬ್ರಹ್ಮ-ಆತ್ಮ-ಏಕತ್ವ-ಬೋಧತಃ** = 'ತತ್ತ್ವಮಸಿ' ಮೊದಲಾದ ವಾಕ್ಯಗಳಿಂದ ಉತ್ಪನ್ನವಾದ ಜೀವ-ಬ್ರಹ್ಮರ ಏಕತ್ವಜ್ಞಾನದ ಮೂಲಕ **ಬ್ರಹ್ಮಣಿ** = ಬ್ರಹ್ಮದಲ್ಲಿ **ಆತ್ಮತ್ವ-ದಾರ್ಢ್ಯಾಯ** = ಆತ್ಮತ್ವದ ದೃಢತೆಗೋಸ್ಕರ **ಸ್ವಾಧ್ಯಾಸಾಪನಯಂ ಕುರು.**

**೨೮೨.** 'ತತ್ತ್ವಮಸಿ' ಮೊದಲಾದ ವಾಕ್ಯಗಳಿಂದ ಉತ್ಪನ್ನವಾದ ಜೀವಾತ್ಮ-ಪರಮಾತ್ಮರ ಏಕತ್ವಜ್ಞಾನದ ಮೂಲಕ ಆತ್ಮನೇ ಬ್ರಹ್ಮವೆಂದು ದೃಢಪಡಿಸಿಕೊಳ್ಳಲು ನಿನ್ನಲ್ಲಿ ಉಂಟಾಗಿರುವ ಅಧ್ಯಾಸವನ್ನು ಹೋಗಲಾಡಿಸಿಕೊ.

**ಅಹಂ-ಭಾವಸ್ಯ ದೇಹೇಽಸ್ಮಿನ್ನಿಃಶೇಷ-ವಿಲಯಾವಧಿ ।**
**ಸಾವಧಾನೇನ ಯುಕ್ತಾತ್ಮಾ ಸ್ವಾಧ್ಯಾಸಾಪನಯಂ ಕುರು ॥ ೨೮೩ ॥**

**ಅಸ್ಮಿನ್ ದೇಹೇ**=ಈ ಶರೀರದಲ್ಲಿ **ಅಹಂಭಾವಸ್ಯ**='ನಾನು' ಎಂಬ ಭಾವನೆಯು **ನಿಃಶೇಷ-ವಿಲಯಾವಧಿ**=ಸಂಪೂರ್ಣವಾಗಿ ಲಯವಾಗುವ ವರೆಗೂ **ಸಾವಧಾನೇನ**=ಎಚ್ಚರಿಕೆಯಿಂದ **ಯುಕ್ತಾತ್ಮಾ[ಸನ್]**=ಅಪ್ರಮತ್ತ-ಅಂತಃಕರಣವುಳ್ಳವನಾಗಿ **ಸ್ವಾಧ್ಯಾಸಾಪನಯಂ ಕುರು.**

**೨೮೩.** ಈ ಶರೀರದಲ್ಲಿ 'ನಾನು' ಎಂಬ ಭಾವನೆಯು ಸಂಪೂರ್ಣವಾಗಿ ಲಯವಾಗುವ ವರೆಗೂ ಎಚ್ಚರಿಕೆಯಿಂದ ಅಪ್ರಮತ್ತನಾಗಿ ನಿನ್ನಲ್ಲಿ ಉಂಟಾಗಿರುವ ಅಧ್ಯಾಸವನ್ನು ಹೋಗಲಾಡಿಸಿಕೊ.

**ಪ್ರತೀತಿರ್ಜೀವ-ಜಗತೋಃ ಸ್ವಪ್ನವದ್ಭಾತಿ ಯಾವತಾ ।**
**ತಾವನ್ನಿರಂತರಂ ವಿದ್ವನ್ ಸ್ವಾಧ್ಯಾಸಾಪನಯಂ ಕುರು ॥ ೨೮೪ ॥**

**ಜೀವ-ಜಗತೋಃ**=ಜೀವ-ಜಗತ್ತುಗಳ **ಪ್ರತೀತಿಃ**=ತೋರ್ಕೆಯು **ಯಾವತಾ**=ಎಲ್ಲಿಯ ವರೆಗೆ **ಸ್ವಪ್ನವತ್**=ಕನಸಿನಂತೆ **ಭಾತಿ**=ತೋರುತ್ತದೆಯೊ **ತಾವತ್**=ಅಲ್ಲಿಯ ವರೆಗೆ **ವಿದ್ವನ್**=ಎಲೈ ವಿವೇಕಿಯೆ **ನಿರಂತರಂ**=ಅನವರತವೂ **ಸ್ವಾಧ್ಯಾಸಾಪನಯಂ ಕುರು.**

**೨೮೪.** ಜೀವ-ಜಗತ್ತುಗಳ ತೋರ್ಕೆಯು ಕನಸಿನಂತೆ (ಮಿಥ್ಯೆಯಾಗಿ) ತೋರುವ ವರೆಗೂ, ಎಲೈ ವಿವೇಕಿಯೆ, ಅನವರತವೂ ನಿನ್ನಲ್ಲಿ ಉಂಟಾಗಿರುವ ಅಧ್ಯಾಸವನ್ನು ಹೋಗಲಾಡಿಸಿಕೊ.

**ನಿದ್ರಾಯಾ ಲೋಕವಾರ್ತಾಯಾಃ ಶಬ್ದಾದೇರಪಿ ವಿಸ್ಮೃತೇಃ ।**
**ಕ್ವಚಿನ್ನಾವಸರಂ ದತ್ವಾ ಚಿಂತಯಾತ್ಮಾನಮಾತ್ಮನಿ ॥ ೨೮೫ ॥**

**ನಿದ್ರಾಯಾಃ**=ನಿದ್ರೆಯಿಂದ **ಲೋಕವಾರ್ತಾಯಾಃ**=ಲೋಕದ ಸುದ್ದಿಯಿಂದ **ಶಬ್ದಾದೇಃ ಅಪಿ**=ಶಬ್ದಾದಿ ವಿಷಯಗಳಿಂದ **ವಿಸ್ಮೃತೇಃ**=ಆತ್ಮವಿಸ್ಮೃತಿಗೆ **ಕ್ವಚಿತ್**=ಯಾವಾಗಲೂ **ಅವಸರಂ**=ಅವಕಾಶವನ್ನು **ನ ದತ್ವಾ**=ಕೊಡದೆ **ಆತ್ಮನಿ**=ಬುದ್ಧಿಯಲ್ಲಿ **ಆತ್ಮಾನಂ**=ಆತ್ಮನನ್ನು **ಚಿಂತಯ**=ಚಿಂತಿಸು.

**೨೮೫.** ನಿದ್ರೆಯಿಂದಾಗಲಿ ಲೋಕದ ಸುದ್ದಿಯಿಂದಾಗಲಿ ಶಬ್ದಾದಿ ವಿಷಯಗಳಿಂದಾಗಲಿ ಆತ್ಮವಿಸ್ಮೃತಿಗೆ ಯಾವಾಗಲೂ ಅವಕಾಶವನ್ನು ಕೊಡದೆ ಬುದ್ಧಿಯಲ್ಲಿಯೇ ಆತ್ಮನನ್ನು ಚಿಂತಿಸು.

**ಮಾತಾ-ಪಿತ್ರೋರ್ಮಲೋದ್ಭೂತಂ ಮಲಮಾಂಸಮಯಂ ವಪುಃ ।**
**ತ್ಯಕ್ತ್ವಾ ಚಾಂಡಾಲವದ್ದೂರಂ ಬ್ರಹ್ಮೀಭೂಯ ಕೃತೀ ಭವ ॥ ೨೮೬ ॥**

**ಮಾತಾ-ಪಿತ್ರೋಃ** = ತಾಯಿತಂದೆಗಳ **ಮಲೋದ್ಭೂತಂ** = ಶುಕ್ಲಶೋಣಿತಗಳಿಂದ ಉತ್ಪನ್ನವಾದ **ಮಲಮಾಂಸಮಯಂ** = ಮಲಮಾಂಸಮಯವಾದ **ವಪುಃ** = ಶರೀರವನ್ನು **ಚಾಂಡಾಲವತ್** = ಚಂಡಾಲನನ್ನು ಹೇಗೋ ಹಾಗೆ **ದೂರಂ** = ದೂರವಾಗಿ **ತ್ಯಕ್ತ್ವಾ** = ಬಿಟ್ಟು **ಬ್ರಹ್ಮೀಭೂಯ** = ಬ್ರಹ್ಮವಾಗಿ **ಕೃತೀ ಭವ** = ಕೃತಕೃತ್ಯನಾಗು.

**೨೮೬.** ತಂದೆತಾಯಿಗಳಿಂದ ಉತ್ಪನ್ನವಾಗಿ ಮಲಮಾಂಸಮಯವಾದ ಶರೀರವನ್ನು—ಚಂಡಾಲನನ್ನು ಹೇಗೋ ಹಾಗೆ—ದೂರವಾಗಿ ತೊರೆದು ಬ್ರಹ್ಮವಾಗಿ ಕೃತಕೃತ್ಯನಾಗು.

**ಘಟಾಕಾಶಂ ಮಹಾಕಾಶ ಇವಾತ್ಮಾನಂ ಪರಾತ್ಮನಿ ।**
**ವಿಲಾಪ್ಯಾಖಂಡಭಾವೇನ ತೂಷ್ಣೀಂ ಭವ ಸದಾ ಮುನೇ ॥ ೨೮೭ ॥**

**ಮುನೇ** = ಎಲೈ ಮುನಿಯೆ **ಘಟಾಕಾಶಂ** = ಗಡಿಗೆಯಿಂದ ಪರಿಚ್ಛಿನ್ನವಾದ ಆಕಾಶವನ್ನು **ಮಹಾಕಾಶೇ ಇವ** = ಮಹಾಕಾಶದಲ್ಲಿ ಹೇಗೋ ಹಾಗೆ **ಆತ್ಮಾನಂ** = ಜೀವಾತ್ಮನನ್ನು **ಪರಾತ್ಮನಿ** = ಪರಮಾತ್ಮನಲ್ಲಿ **ವಿಲಾಪ್ಯ** = ಲಯಗೊಳಿಸಿ **ಸದಾ** = ಯಾವಾಗಲೂ **ಅಖಂಡಭಾವೇನ** = ಅಖಂಡಭಾವದಿಂದ **ತೂಷ್ಣೀಂ ಭವ** = ಮೌನವಾಗಿರು.

**೨೮೭.** ಗಡಿಗೆಯಿಂದ ಪರಿಚ್ಛಿನ್ನವಾದ ಆಕಾಶವನ್ನು ಮಹಾಕಾಶದಲ್ಲಿ ಲಯಗೊಳಿಸುವಂತೆ ಜೀವಾತ್ಮನನ್ನು ಪರಮಾತ್ಮನಲ್ಲಿ ಲಯಗೊಳಿಸಿ ಯಾವಾಗಲೂ ಅಖಂಡಭಾವದಿಂದ ಮೌನವಾಗಿರು.

**ಸ್ವಪ್ರಕಾಶಮಧಿಷ್ಠಾನಂ ಸ್ವಯಂಭೂಯ ಸದಾತ್ಮನಾ ।**
**ಬ್ರಹ್ಮಾಂಡಮಪಿ ಪಿಂಡಾಂಡಂ ತ್ಯಜ್ಯತಾಂ ಮಲಭಾಂಡವತ್**
**॥ ೨೮೮ ॥**

**ಅಧಿಷ್ಠಾನಂ** = ಅಧಿಷ್ಠಾನವೂ **ಸ್ವಪ್ರಕಾಶಂ** = ಸ್ವಯಂಪ್ರಕಾಶವೂ ಆದ [ಬ್ರಹ್ಮವೇ] **ಸದಾತ್ಮನಾ** = ಸದಾತ್ಮಸ್ವರೂಪದಿಂದ **ಸ್ವಯಂಭೂಯ** = ನೀನೇ ಆಗಿ **ಬ್ರಹ್ಮಾಂಡಂ** = ಬ್ರಹ್ಮಾಂಡವು **ಅಪಿ** = ಮತ್ತು **ಪಿಂಡಾಂಡಂ** = ಪಿಂಡಾಂಡವೂ **ಮಲಭಾಂಡವತ್** = ಮಲದಿಂದ ತುಂಬಿದ ಪಾತ್ರೆಯು ಹೇಗೋ ಹಾಗೆ **ತ್ಯಜ್ಯತಾಂ** = ಬಿಡಲ್ಪಡಲಿ.

**೨೮೮.** ಸತ್‌ಸ್ವರೂಪದಿಂದ ಸರ್ವಾಶ್ರಯವೂ ಸ್ವಯಂಪ್ರಕಾಶವೂ ಆದ ಬ್ರಹ್ಮವೇ ನೀನಾಗಿ ಬ್ರಹ್ಮಾಂಡವನ್ನೂ ಪಿಂಡಾಂಡವನ್ನೂ[೧]—ಮಲದಿಂದ ತುಂಬಿದ ಪಾತ್ರೆಯನ್ನು ಬಿಡುವಂತೆ—ತ್ಯಜಿಸು.

[೧ ನಿನ್ನ ಶರೀರವನ್ನೂ.]

**ಚಿದಾತ್ಮನಿ ಸದಾನಂದೇ ದೇಹಾರೂಢಾಮಹಂಧಿಯಮ್ ।**
**ನಿವೇಶ್ಯ ಲಿಂಗಮುತ್ಸೃಜ್ಯ ಕೇವಲೋ ಭವ ಸರ್ವದಾ ॥ ೨೮೯ ॥**

**ದೇಹಾರೂಢಾಂ** – ದೇಹದಲ್ಲಿ ನೆಲೆಗೊಂಡಿರುವ **ಅಹಂ-ಧಿಯಂ** – 'ನಾನು' ಎಂಬ ಬುದ್ಧಿಯನ್ನು **ಸದಾನಂದೇ ಚಿದಾತ್ಮನಿ** – ನಿತ್ಯಾನಂದ-ಸ್ವರೂಪನಾದ ಚಿದಾತ್ಮನಲ್ಲಿ **ನಿವೇಶ್ಯ** – ನೆಲೆಗೊಳಿಸಿ **ಲಿಂಗಂ** – ಸೂಕ್ಷ್ಮಶರೀರವನ್ನು **ಉತ್ಸೃಜ್ಯ** – ಬಿಟ್ಟು **ಸರ್ವದಾ** – ಯಾವಾಗಲೂ **ಕೇವಲಃ ಭವ** – ಅಸಂಗನಾಗು.

**೨೮೯.** ದೇಹದಲ್ಲಿ ನಲೆಗೊಂಡಿರುವ 'ನಾನು' ಎಂಬ ಬುದ್ಧಿಯನ್ನು ನಿತ್ಯಾನಂದ-ಸ್ವರೂಪನಾದ ಚಿದಾತ್ಮನಲ್ಲಿ ನೆಲೆಗೊಳಿಸಿ, ಸೂಕ್ಷ್ಮಶರೀರವನ್ನು ಬಿಟ್ಟು, ಯಾವಾಗಲೂ ಅಸಂಗನಾಗಿರು.

**ಯತ್ರೈಷ ಜಗದಾಭಾಸೋ ದರ್ಪಣಾಂತಃ ಪುರಂ ಯಥಾ ।**
**ತದ್ಬ್ರಹ್ಮಾಹಮಿತಿ ಜ್ಞಾತ್ವಾ ಕೃತಕೃತ್ಯೋ ಭವಿಷ್ಯಸಿ ॥ ೨೯೦ ॥**

**ದರ್ಪಣ-ಅಂತಃ** – ಕನ್ನಡಿಯಲ್ಲಿ ಕಾಣುವ **ಪುರಂ** – ಪಟ್ಟಣವು **ಯಥಾ** – ಹೇಗೋ [ಹಾಗೆ] **ಯತ್ರ** – ಯಾವುದರಲ್ಲಿ **ಏಷಃ ಜಗದಾಭಾಸಃ** – ಈ ಜಗತ್ತಿನ ಆಭಾಸವೊ **ತತ್ ಬ್ರಹ್ಮ** – ಆ ಬ್ರಹ್ಮವೇ **ಅಹಂ** – ನಾನು **ಇತಿ** – ಎಂದು **ಜ್ಞಾತ್ವಾ** – ತಿಳಿದುಕೊಂಡು **ಕೃತಕೃತ್ಯಃ ಭವಿಷ್ಯಸಿ** – ಕೃತಕೃತ್ಯನಾಗುವೆ.

**೨೯೦.** ಕನ್ನಡಿಯಲ್ಲಿ ಕಾಣುವ ಪುರದಂತೆ ಯಾವುದರಲ್ಲಿ ಈ ಜಗತ್ತಿನ ತೋರ್ಕೆಯುಂಟಾಗಿದೆಯೊ 'ಆ ಬ್ರಹ್ಮವೇ ನಾನು' ಎಂದು ತಿಳಿದುಕೊಂಡು ಕೃತಕೃತ್ಯನಾಗು.

**ಯತ್ಸತ್ಯಭೂತಂ ನಿಜರೂಪಮಾದ್ಯಂ**
**ಚಿದದ್ವಯಾನಂದಮರೂಪಮಕ್ರಿಯಮ್ ।**
**ತದೇತ್ಯ ಮಿಥ್ಯಾವಪುರುತ್ಸೃಜೇತ**
**ಶೈಲೂಷವದ್ವೇಷಮುಪಾತ್ತಮಾತ್ಮನಃ ॥ ೨೯೧ ॥**

**ಯತ್** – ಯಾವುದು **ಸತ್ಯಭೂತಂ** – ಸತ್ಯವಾದುದೊ **ಆದ್ಯಂ** – ಪುರಾತನವೊ **ಚಿತ್** – ಜ್ಞಾನಸ್ವರೂಪವೊ **ಅದ್ವಯಾನಂದಂ** – ಅದ್ವಯಾನಂದವೊ **ಅರೂಪಂ** – ರೂಪರಹಿತವೊ **ಅಕ್ರಿಯಂ** – ಕ್ರಿಯಾಶೂನ್ಯವೊ **ನಿಜರೂಪಂ** – ನಿಜರೂಪವೊ **ತತ್** – ಅಂಥ ಸ್ವರೂಪವನ್ನು **ಏತ್ಯ** – ಹೊಂದಿ—**ಉಪಾತ್ತಂ** – ಸ್ವೀಕರಿಸಿದ **ಆತ್ಮನಃ** – ತನ್ನ **ವೇಷಂ** – ವೇಷವನ್ನು **ಶೈಲೂಷವತ್** – ನಟನು ಹೇಗೋ ಹಾಗೆ—**ಮಿಥ್ಯಾವಪುಃ** – ಮಿಥ್ಯಾಶರೀರವನ್ನು **ಉತ್ಸೃಜೇತ** – ಬಿಡಬೇಕು.

**೨೯೧.** ತ್ರಿಕಾಲದಲ್ಲಿ ಸತ್-ಸ್ವರೂಪವಾಗಿರುವುದೂ ಪುರಾತನವೂ ಜ್ಞಾನಸ್ವರೂಪವೂ ಅಖಂಡಾನಂದವೂ ರೂಪರಹಿತವೂ ಕ್ರಿಯಾಶೂನ್ಯವೂ

ಆದ ನಿಜಸ್ವರೂಪವನ್ನು ಹೊಂದಿ—ನಟನು ತಾನು ಹಾಕಿಕೊಂಡಿರುವ ವೇಷವನ್ನು ತೆಗೆದುಹಾಕುವಂತೆ—ಮಿಥ್ಯಾಭೂತವಾದ ಶರೀರವನ್ನು ಬಿಡಬೇಕು.

**ಸರ್ವಾತ್ಮನಾ ದೃಶ್ಯಮಿದಂ ಮೃಷೈವ**
**ನೈವಾಹಮರ್ಥಃ ಕ್ಷಣಿಕತ್ವದರ್ಶನಾತ್ ।**
**ಜಾನಾಮ್ಯಹಂ ಸರ್ವಮಿತಿ ಪ್ರತೀತಿಃ**
**ಕುತೋಽಹಮಾದೇಃ ಕ್ಷಣಿಕಸ್ಯ ಸಿಧ್ಯೇತ್ ॥ ೨೯೨ ॥**

**ಇದಂ ದೃಶ್ಯಂ** = ಈ ದೃಶ್ಯಪ್ರಪಂಚವು **ಸರ್ವಾತ್ಮನಾ** = ಸರ್ವಪ್ರಕಾರದಿಂದಲೂ **ಮೃಷಾ ಏವ** = ಮಿಥ್ಯೆಯೇ; **ಕ್ಷಣಿಕತ್ವ-ದರ್ಶನಾತ್** = ಕ್ಷಣಿಕವಾಗಿ ಕಂಡುಬರುವುದರಿಂದ **ಅಹಮ್-ಅರ್ಥಃ** = ಅಹಂ-ಪದಾರ್ಥವೂ **ನ ಏವ** = ಇಲ್ಲವೇ ಇಲ್ಲ; **ಅಹಂ** = ನಾನು **ಸರ್ವಂ** = ಎಲ್ಲವನ್ನೂ **ಜಾನಾಮಿ** = ತಿಳಿಯುತ್ತೇನೆ **ಇತಿ** = ಎಂಬ **ಪ್ರತೀತಿಃ** = ಪ್ರತೀತಿಯು **ಕ್ಷಣಿಕಸ್ಯ** = ಕ್ಷಣಿಕವಾದ **ಅಹಮ್-ಆದೇಃ** = ಅಹಂಕಾರವೇ ಮೊದಲಾದುವುಗಳಿಗೆ **ಕುತಃ ಸಿಧ್ಯೇತ್** = ಹೇಗೆ ಸಿದ್ಧಿಸುತ್ತದೆ?

**೨೯೨.** ಈ ದೃಶ್ಯಪ್ರಪಂಚವು ಸರ್ವಪ್ರಕಾರದಿಂದಲೂ ಮಿಥ್ಯೆಯೇ. 'ನಾನು' ಎಂಬ ಪದಾರ್ಥವೇ ಇಲ್ಲ; ಏಕೆಂದರೆ ಇದು ಕ್ಷಣಿಕವಾಗಿರುವುದು ಕಂಡುಬರುತ್ತದೆ. 'ನಾನು ಎಲ್ಲವನ್ನೂ ತಿಳಿಯುತ್ತೇನೆ' ಎಂಬ ಪ್ರತೀತಿಯು ಕ್ಷಣಿಕವಾದ ಅಹಂಕಾರವೇ ಮೊದಲಾದುವುಗಳಿಗೆ ಹೇಗೆ ಸಿದ್ಧಿಸೀತು?[೧]

[೧ ಅಹಂಕಾರವೇ ಮೊದಲಾದುವುಗಳಿಗೆ ಸರ್ವಜ್ಞತ್ವವು ಸಿದ್ಧಿಸುವುದಿಲ್ಲ ಎಂದರ್ಥ.]

**ಅಹಂಪದಾರ್ಥಸ್ತ್ವಹಮಾದಿಸಾಕ್ಷೀ**
**ನಿತ್ಯಂ ಸುಷುಪ್ತಾವಪಿ ಭಾವದರ್ಶನಾತ್ ।**
**ಬ್ರೂತೇ ಹ್ಯಜೋ ನಿತ್ಯ ಇತಿ ಶ್ರುತಿಃ ಸ್ವಯಂ**
**ತತ್ಪ್ರತ್ಯಗಾತ್ಮಾ ಸದಸದ್ವಿಲಕ್ಷಣಃ ॥ ೨೯೩ ॥**

**ತು** = ಆದರೆ **ಅಹಂಪದಾರ್ಥಃ** = ಅಹಂ-ಪದಾರ್ಥವು **ಸುಷುಪ್ತೌ ಅಪಿ** = ಸುಷುಪ್ತಿಯಲ್ಲಿಯೂ **ನಿತ್ಯಂ** = ಯಾವಾಗಲೂ **ಭಾವದರ್ಶನಾತ್** = ಕಂಡುಬರುವುದರಿಂದ; **ಅಹಮ್-ಆದಿ-ಸಾಕ್ಷೀ** = ಅಹಂಕಾರವೇ ಮೊದಲಾದುವುಗಳಿಗೆ ಸಾಕ್ಷಿಯು; **ಅಜಃ** = ಜನ್ಮರಹಿತನು **ನಿತ್ಯಃ** = ನಿತ್ಯನು **ಇತಿ** = ಎಂದು **ಶ್ರುತಿಃ** = ಶ್ರುತಿಯು **ಸ್ವಯಂ** = ತಾನೇ **ಬ್ರೂತೇ** = ಹೇಳುತ್ತದೆ. **ತತ್** = ಆದುದರಿಂದ **ಪ್ರತ್ಯಗಾತ್ಮಾ** = ಪ್ರತ್ಯಗಾತ್ಮನು **ಸತ್-ಅಸತ್-ವಿಲಕ್ಷಣಃ** = ಸ್ಥೂಲಸೂಕ್ಷ್ಮಗಳಿಗಿಂತ ಭಿನ್ನನು.

**೨೯೩.** ಆದರೆ ನಿಜವಾದ ಅಹಂ-ಪದಾರ್ಥವು ಅಹಂಕಾರವೇ ಮೊದಲಾದುವುಗಳಿಗೆ ಸಾಕ್ಷಿಯಾಗಿರುತ್ತದೆ; ಏಕೆಂದರೆ ಅದು ನಿತ್ಯವೂ ಸುಷುಪ್ತಿಯಲ್ಲಿ

ಕೂಡ ಇರುವುದು ಕಂಡುಬರುತ್ತದೆ. 'ಜನ್ಮರಹಿತನೂ ನಿತ್ಯನೂ' ಎಂದು ಶ್ರುತಿಯೇ ಹೇಳುತ್ತದೆ.[೧] ಆದುದರಿಂದ ಪ್ರತ್ಯಗಾತ್ಮನು ಸ್ಥೂಲಸೂಕ್ಷ್ಮಗಳಿಗಿಂತ ಭಿನ್ನನಾಗಿರುತ್ತಾನೆ.

[೧ ಕಠ ಉ. ೧. ೨. ೧೮.]

**ವಿಕಾರಿಣಾಂ ಸರ್ವವಿಕಾರವೇತ್ತಾ**
**ನಿತ್ಯೋಽವಿಕಾರೋ ಭವಿತುಂ ಸಮರ್ಹತಿ ।**
**ಮನೋರಥ-ಸ್ವಪ್ನ-ಸುಷುಪ್ತಿಷು ಸ್ಫುಟಂ**
**ಪುನಃ ಪುನರ್ದೃಷ್ಟಮಸತ್ತ್ವಮೇತಯೋಃ ॥ ೨೯೪ ॥**

[ಆತ್ಮನು] **ವಿಕಾರಿಣಾಂ** = ವಿಕಾರವುಳ್ಳ ವಸ್ತುಗಳ **ಸರ್ವ-ವಿಕಾರವೇತ್ತಾ** = ಸರ್ವವಿಕಾರಗಳನ್ನು ಅರಿಯುವವನೂ **ನಿತ್ಯಃ** = ನಿತ್ಯನೂ **ಅವಿಕಾರಃ** = ಅವಿಕಾರಿಯೂ **ಭವಿತುಂ ಸಮರ್ಹತಿ** = ಆಗಲು ಅರ್ಹನಾಗಿರುತ್ತಾನೆ; **ಮನೋರಥ-ಸ್ವಪ್ನ-ಸುಷುಪ್ತಿಷು** = ಮನೋರಥ ಸ್ವಪ್ನ ಸುಷುಪ್ತಿ—ಇವುಗಳಲ್ಲಿ **ಏತಯೋಃ** = [ದೇಹ-ಅಹಂಕಾರಗಳೆಂಬ] ಇವೆರಡರ **ಅಸತ್ತ್ವಂ** = ಮಿಥ್ಯಾಸ್ವರೂಪವು **ಪುನಃಪುನಃ** = ಪದೇ ಪದೇ **ದೃಷ್ಟಂ** = ನೋಡಲ್ಪಟ್ಟಿದೆ.

**೨೯೪.** ವಿಕಾರವುಳ್ಳ ವಸ್ತುಗಳ ಸರ್ವವಿಕಾರಗಳನ್ನೂ ಅರಿಯುತ್ತಿರುವ ಆತ್ಮನು ನಿತ್ಯನೂ ಅವಿಕಾರಿಯೂ ಆಗಿರಬೇಕು. ಮನೋರಥ ಸ್ವಪ್ನ ಸುಷುಪ್ತಿ—ಇವುಗಳಲ್ಲಿ, ದೇಹ-ಅಹಂಕಾರಗಳೆಂಬ ಇವೆರಡರ ಮಿಥ್ಯಾತ್ವವನ್ನು[೧] ಪುನಃ ಪುನಃ ನೋಡಬಹುದು.

[೧ ಏಕೆಂದರೆ ಸುಷುಪ್ತಿಯಲ್ಲಿ ಅಹಂಕಾರವು ಕಂಡುಬರುವುದಿಲ್ಲ; ಸ್ವಪ್ನ ಸುಷುಪ್ತಿಗಳಲ್ಲಿ ಸ್ಥೂಲದೇಹವು ಕಂಡುಬರುವುದಿಲ್ಲ.]

**ಅತೋಽಭಿಮಾನಂ ತ್ಯಜ ಮಾಂಸಪಿಂಡೇ**
**ಪಿಂಡಾಭಿಮಾನಿನ್ಯಪಿ ಬುದ್ಧಿಕಲ್ಪಿತೇ ।**
**ಕಾಲತ್ರಯಾಬಾಧ್ಯಮಖಂಡ-ಬೋಧಂ**
**ಜ್ಞಾತ್ವಾ ಸ್ವಮಾತ್ಮಾನಮುಪೈಹಿ ಶಾಂತಿಮ್ ॥ ೨೯೫ ॥**

**ಅತಃ** = ಆದುದರಿಂದ **ಮಾಂಸಪಿಂಡೇ** = ಮಾಂಸಪಿಂಡದಲ್ಲಿಯೂ **ಬುದ್ಧಿ-ಕಲ್ಪಿತೇ** = ಬುದ್ಧಿಯಿಂದ ಕಲ್ಪಿತವಾದ **ಪಿಂಡಾಭಿಮಾನಿನಿ ಅಪಿ** = ದೇಹಾಭಿಮಾನಿ ಎಂಬ ಅಹಂಕಾರದಲ್ಲಿಯೂ **ಅಭಿಮಾನಂ** = ಅಭಿಮಾನವನ್ನು **ತ್ಯಜ** = ಬಿಡು; **ಕಾಲತ್ರಯ-ಅಬಾಧ್ಯಂ** = ತ್ರಿಕಾಲದಲ್ಲಿಯೂ ಬಾಧಿತವಾಗದ **ಅಖಂಡಬೋಧಂ** = ಅಖಂಡಜ್ಞಾನಸ್ವರೂಪನಾದ **ಸ್ವಮ್ ಆತ್ಮಾನಂ** = ನಿನ್ನ ಆತ್ಮನನ್ನು **ಜ್ಞಾತ್ವಾ** = ಅರಿತುಕೊಂಡು **ಶಾಂತಿಂ** = ಶಾಂತಿಯನ್ನು **ಉಪೈಹಿ** = ಹೊಂದು.

**೨೯೫.** ಆದುದರಿಂದ ಮಾಂಸಪಿಂಡವಾದ ಈ ದೇಹದಲ್ಲಿಯೂ ಮತ್ತು ಬುದ್ಧಿಯು ದೇಹದಲ್ಲಿ ಕಲ್ಪಿಸಿರುವ 'ನಾನು' ಎಂಬ ಅಹಂಕಾರದಲ್ಲಿಯೂ ಅಭಿಮಾನವನ್ನು ಬಿಡು. ತ್ರಿಕಾಲದಲ್ಲಿಯೂ ಬಾಧಿತವಾಗದ ಅಖಂಡಜ್ಞಾನ ಸ್ವರೂಪನಾದ ನಿನ್ನ ಆತ್ಮನನ್ನು ಅರಿತುಕೊಂಡು ಶಾಂತಿಯನ್ನು ಹೊಂದು.

**ತ್ಯಜಾಭಿಮಾನಂ ಕುಲ-ಗೋತ್ರ-ನಾಮ-**
**ರೂಪಾಶ್ರಮೇಷ್ವಾರ್ದ್ರ-ಶವಾಶ್ರಿತೇಷು ।**
**ಲಿಂಗಸ್ಯ ಧರ್ಮಾನಪಿ ಕರ್ತೃತಾದೀಂ-**
**ಸ್ತ್ಯಕ್ತ್ವಾ ಭವಾಖಂಡ-ಸುಖಸ್ವರೂಪಃ ॥ ೨೯೬ ॥**

**ಆರ್ದ್ರ-ಶವ-ಆಶ್ರಿತೇಷು** = ಬದುಕಿರುವ ಹೆಣವನ್ನು ಆಶ್ರಯಿಸಿಕೊಂಡಿರುವ **ಕುಲ-ಗೋತ್ರ-ನಾಮ-ರೂಪ-ಆಶ್ರಮೇಷು** = ಕುಲ ಗೋತ್ರ ನಾಮ ರೂಪ ಆಶ್ರಮ ಇವುಗಳಲ್ಲಿ **ಅಭಿಮಾನಂ** = ಅಭಿಮಾನವನ್ನು **ತ್ಯಜ** = ಬಿಡು; **ಲಿಂಗಸ್ಯ** = ಲಿಂಗ ಶರೀರದ **ಕರ್ತೃತಾದೀನ್** = ಕರ್ತೃತ್ವವೇ ಮೊದಲಾದ **ಧರ್ಮಾನ್ ಅಪಿ** = ಧರ್ಮಗಳನ್ನೂ **ತ್ಯಕ್ತ್ವಾ** = ಬಿಟ್ಟು **ಅಖಂಡ-ಸುಖ-ಸ್ವರೂಪಃ ಭವ** = ಅಖಂಡಾನಂದ ಸ್ವರೂಪನಾಗು.

**೨೯೬.** ಈ ಬದುಕಿರುವ ಹೆಣವನ್ನು ಆಶ್ರಯಿಸಿಕೊಂಡಿರುವ ಕುಲ ಗೋತ್ರ ನಾಮ ರೂಪ ಆಶ್ರಮ ಇವುಗಳಲ್ಲಿ ಅಭಿಮಾನವನ್ನು ಬಿಡು; ಲಿಂಗಶರೀರಕ್ಕೆ ಸೇರಿದ ಕರ್ತೃತ್ವವೇ ಮೊದಲಾದ ಧರ್ಮಗಳನ್ನೂ ಬಿಟ್ಟು ಅಖಂಡಾನಂದ ಸ್ವರೂಪನಾಗು.

**ಸಂತ್ಯನ್ಯೇ ಪ್ರತಿಬಂಧಾಃ ಪುಂಸಃ ಸಂಸಾರಹೇತವೋ ದೃಷ್ಟಾಃ ।**
**ತೇಷಾಮೇವಂ ಮೂಲಂ ಪ್ರಥಮವಿಕಾರೋ ಭವತ್ಯಹಂಕಾರಃ**
**॥ ೨೯೭ ॥**

**ಪುಂಸಃ** = ಮನುಷ್ಯನ **ಸಂಸಾರಹೇತವಃ** = ಸಂಸಾರಕ್ಕೆ ಕಾರಣಗಳಾದ **ಅನ್ಯೇ ಪ್ರತಿಬಂಧಾಃ** = ಇತರ ಅಡಚಣೆಗಳೂ **ದೃಷ್ಟಾಃ ಸಂತಿ** = ಕಂಡುಬರುತ್ತವೆ; **ತೇಷಾಂ** = ಅವುಗಳಲ್ಲಿ **ಏವಂ** = ಹೀಗೆ ಹಿಂದೆ ಹೇಳಿದಂತೆ **ಪ್ರಥಮ ವಿಕಾರಃ** = ಪ್ರಥಮ ವಿಕಾರವಾದ **ಅಹಂಕಾರಃ** = ಅಹಂಕಾರವು **ಮೂಲಂ ಭವತಿ** = ಮೂಲವೇ ಆಗಿರುತ್ತದೆ.

**೨೯೭.** ಮನುಷ್ಯನ ಸಂಸಾರಕ್ಕೆ ಕಾರಣವಾದ ಇನ್ನೂ ಕೆಲವು ಅಡಚಣೆಗಳು[೧] ಕಂಡುಬರುತ್ತವೆ. ಅವುಗಳಲ್ಲಿ ಮೊದಲನೆಯ ವಿಕಾರವಾದ ಅಹಂಕಾರವೇ ಮೂಲವಾಗಿರುತ್ತದೆ.

[೧ ರಾಗ, ದ್ವೇಷ ಮೊದಲಾದುವು.]

**ಯಾವತ್ ಸ್ಯಾತ್ ಸ್ವಸ್ಯ ಸಂಬಂಧೋಽಹಂಕಾರೇಣ ದುರಾತ್ಮನಾ ।**
**ತಾವನ್ನ ಲೇಶಮಾತ್ರಾಪಿ ಮುಕ್ತಿವಾರ್ತಾ ವಿಲಕ್ಷಣಾ ॥ ೨೯೮ ॥**

**ಸ್ವಸ್ಯ** = ತನಗೆ **ದುರಾತ್ಮನಾ** = ದುಷ್ಟಸ್ವಭಾವದ **ಅಹಂಕಾರೇಣ** = ಅಹಂಕಾರದೊಂದಿಗೆ **ಯಾವತ್** = ಎಲ್ಲಿಯ ವರೆಗೆ **ಸಂಬಂಧಃ ಸ್ಯಾತ್** = ಸಂಬಂಧವಿರುವುದೋ **ತಾವತ್** = ಅಲ್ಲಿಯ ವರೆಗೆ **ವಿಲಕ್ಷಣಾ** = ವಿಲಕ್ಷಣವಾದ **ಮುಕ್ತಿವಾರ್ತಾ** = ಮೋಕ್ಷದ ಸುದ್ದಿಯು **ಲೇಶಮಾತ್ರಾ ಅಪಿ ನ** = ಲೇಶಮಾತ್ರವೂ ಇರುವುದಿಲ್ಲ.

**೨೯೮.** ದುಷ್ಟಸ್ವಭಾವದ ಅಹಂಕಾರದೊಂದಿಗೆ ಎಲ್ಲಿಯ ವರೆಗೆ ತನಗೆ ಸಂಬಂಧವಿರುವುದೊ ಅಲ್ಲಿಯ ವರೆಗೂ ವಿಲಕ್ಷಣವಾದ[1] ಮೋಕ್ಷದ ಸುದ್ದಿಯು ಲೇಶಮಾತ್ರವೂ ಇರುವುದಿಲ್ಲ.

[[1] ಸಂಸಾರವಿರುದ್ಧವೂ ನಿತ್ಯ-ನಿರತಿಶಯ-ಸುಖಸ್ವರೂಪವೂ ಆದ.]

**ಅಹಂಕಾರ-ಗ್ರಹಾನ್ಮುಕ್ತಃ ಸ್ವರೂಪಮುಪಪದ್ಯತೇ ।**
**ಚಂದ್ರವದ್ವಿಮಲಃ ಪೂರ್ಣಃ ಸದಾನಂದಃ ಸ್ವಯಂಪ್ರಭಃ ॥ ೨೯೯ ॥**

**ಅಹಂಕಾರ-ಗ್ರಹಾತ್** = ಅಹಂಕಾರವೆಂಬ ರಾಹುವಿನಿಂದ **ಮುಕ್ತಃ** = ಬಿಡಲ್ಪಟ್ಟವನು **ಚಂದ್ರವತ್** = ಚಂದ್ರನಂತೆ **ವಿಮಲಃ** = ವಿಮಲನೂ **ಪೂರ್ಣಃ** = ಪರಿಪೂರ್ಣನೂ **ಸದಾನಂದಃ** = ನಿತ್ಯಾನಂದನೂ **ಸ್ವಯಂಪ್ರಭಃ** = ಸ್ವಯಂಪ್ರಕಾಶನೂ [ಆಗಿ] **ಸ್ವರೂಪಂ** = ನಿಜಸ್ವರೂಪವನ್ನು **ಉಪಪದ್ಯತೇ** = ಹೊಂದುತ್ತಾನೆ.

**೨೯೯.** ಅಹಂಕಾರವೆಂಬ ರಾಹುವಿನಿಂದ ಬಿಡಲ್ಪಟ್ಟವನು ಚಂದ್ರನಂತೆ ವಿಮಲನೂ ಪರಿಪೂರ್ಣನೂ ನಿತ್ಯಾನಂದನೂ ಸ್ವಯಂಪ್ರಕಾಶನೂ ಆಗಿ ತನ್ನ ನಿಜಸ್ವರೂಪವನ್ನು ಹೊಂದುತ್ತಾನೆ.

**ಯೋ ವಾ ಪುರೇ ಸೋಽಹಮಿತಿ ಪ್ರತೀತೋ**
**ಬುದ್ಧ್ಯಾ ಪ್ರಕ್ಲೃಪ್ತಸ್ತಮಸಾಽತಿಮೂಢಯಾ ।**
**ತಸ್ಯೈವ ನಿಃಶೇಷತಯಾ ವಿನಾಶೇ**
**ಬ್ರಹ್ಮಾತ್ಮಭಾವಃ ಪ್ರತಿಬಂಧಶೂನ್ಯಃ ॥ ೩೦೦ ॥**

**ಪುರೇ** = ಶರೀರದಲ್ಲಿ **ಯಃ** = ಯಾವುದು **ಸಃ ಅಹಮ್** = ನಾನು ಇಂಥವನು **ಇತಿ** = ಎಂದು **ಪ್ರತೀತಃ** = ತೋರಿಕೊಳ್ಳುವುದೋ **ತಮಸಾ** = ಅಜ್ಞಾನದಿಂದ **ಅತಿಮೂಢಯಾ** = ಅತಿ ಮೂಢವಾದ **ಬುದ್ಧ್ಯಾ** = ಬುದ್ಧಿಯಿಂದ **ಪ್ರಕ್ಲೃಪ್ತಃ** = ಕಲ್ಪಿತವಾಗಿದೆಯೊ **ತಸ್ಯ ಏವ** = ಆ ಅಹಂಕಾರಕ್ಕೇ **ನಿಃಶೇಷತಯಾ** = ಸಂಪೂರ್ಣವಾಗಿ

**ವಿನಾಶೇ** [ಸತಿ] = ನಾಶವುಂಟಾದಾಗ **ಪ್ರತಿಬಂಧಶೂನ್ಯಃ** = ಪ್ರತಿಬಂಧರಹಿತವಾದ **ಬ್ರಹ್ಮಾತ್ಮಭಾವಃ** = ಬ್ರಹ್ಮಾತ್ಮಸ್ವರೂಪವು [ಉಂಟಾಗುತ್ತದೆ].

**೩೦೦.** ಈ ಶರೀರದಲ್ಲಿ ಯಾವುದು 'ನಾನು ಇಂಥವನು' ಎಂದು ತೋರಿಕೊಳ್ಳುವುದೊ ಮತ್ತು ಅಜ್ಞಾನದ ಮೂಲಕ ಅತಿಮೂಢವಾದ ಬುದ್ಧಿಯಿಂದ ಕಲ್ಪಿತವಾಗಿದೆಯೊ ಆ ಅಹಂಕಾರವನ್ನೇ ಸಂಪೂರ್ಣವಾಗಿ ನಾಶಮಾಡಿದಾಗ ಪ್ರತಿಬಂಧರಹಿತವಾದ ಬ್ರಹ್ಮಾತ್ಮಸ್ವರೂಪವು ಉಂಟಾಗುತ್ತದೆ.

**ಬ್ರಹ್ಮಾನಂದನಿಧಿರ್ಮಹಾಬಲವತಾಽಹಂಕಾರ-ಘೋರಾಹಿನಾ**
**ಸಂವೇಷ್ಟ್ಯಾತ್ಮನಿ ರಕ್ಷ್ಯತೇ ಗುಣಮಯೈಶ್ಚಂಡೈಸ್ತ್ರಿಭಿರ್ಮಸ್ತಕೈಃ ।**
**ವಿಜ್ಞಾನಾಖ್ಯ-ಮಹಾಸಿನಾ ದ್ಯುತಿಮತಾ ವಿಚ್ಛಿದ್ಯ ಶೀರ್ಷತ್ರಯಂ**
**ನಿರ್ಮೂಲ್ಯಾಹಿಮಿಮಂ ನಿಧಿಂ ಸುಖಕರಂ ಧೀರೋಽನುಭೋಕ್ತುಂ**
**ಕ್ಷಮಃ ॥ ೩೦೧ ॥**

**ಬ್ರಹ್ಮಾನಂದನಿಧಿಃ** = ಬ್ರಹ್ಮಾನಂದವೆಂಬ ನಿಧಿಯು **ಬಲವತಾ** = ಮಹಾಬಲವುಳ್ಳ **ಅಹಂಕಾರ-ಘೋರ-ಅಹಿನಾ** = ಅಹಂಕಾರವೆಂಬ ಘೋರಸರ್ಪದಿಂದ **ಗುಣಮಯೈಃ** = ಗುಣಮಯವಾದ **ಚಂಡೈಃ** = ರೋಷಗೊಂಡಿರುವ **ತ್ರಿಭಿಃ ಮಸ್ತಕೈಃ** = ಮೂರು ಹೆಡೆಗಳಿಂದ **ಸಂವೇಷ್ಟ್ಯ** = ಸುತ್ತಿಕೊಂಡು **ಆತ್ಮನಿ** = ತನ್ನಲ್ಲಿ **ರಕ್ಷ್ಯತೇ** = ರಕ್ಷಿಸಲ್ಪಡುತ್ತದೆ; **ದ್ಯುತಿಮತಾ** = ಥಳಥಳಿಸುತ್ತಿರುವ **ವಿಜ್ಞಾನಾಖ್ಯ-ಮಹಾ-ಅಸಿನಾ** = ಬ್ರಹ್ಮಜ್ಞಾನವೆಂಬ ದೊಡ್ಡ ಕತ್ತಿಯಿಂದ **ಶೀರ್ಷತ್ರಯಂ** = ಮೂರು ಹೆಡೆಗಳನ್ನೂ **ವಿಚ್ಛಿದ್ಯ** = ಕತ್ತರಿಸಿ **ಇಮಮ್ ಅಹಿಂ** = ಈ ಸರ್ಪವನ್ನು **ನಿರ್ಮೂಲ್ಯ** = ನಾಶಗೊಳಿಸಿ **ಸುಖಕರಂ** = ಆನಂದವನ್ನುಂಟುಮಾಡುವ **ನಿಧಿಂ** = ನಿಧಿಯನ್ನು **ಅನುಭೋಕ್ತುಂ** = ಅನುಭವಿಸಲು **ಧೀರಃ** = ಧೀಮಂತನಾದವನು **ಕ್ಷಮಃ** = ಶಕ್ತನು.

**೩೦೧.** ಮಹಾ ಬಲವುಳ್ಳ ಅಹಂಕಾರವೆಂಬ ಘೋರಸರ್ಪವು ಬ್ರಹ್ಮಾನಂದವೆಂಬ ನಿಧಿಯನ್ನು ಸತ್ತ್ವ-ರಜಸ್ತಮೋಗುಣಗಳೆಂಬ ರೋಷಗೊಂಡಿರುವ ಮೂರು ಹೆಡೆಗಳಿಂದ ಸುತ್ತಿಕೊಂಡು ತನ್ನಲ್ಲಿ ರಕ್ಷಿಸಿಕೊಂಡಿರುತ್ತದೆ. ಬ್ರಹ್ಮಜ್ಞಾನವೆಂಬ ಥಸಥಳಿಸುತ್ತಿರುವ ದೊಡ್ಡ ಕತ್ತಿಯಿಂದ ಮೂರು ಹೆಡೆಗಳನ್ನೂ ಕತ್ತರಿಸಿ, ಈ ಸರ್ಪವನ್ನು ನಾಶಮಾಡಿ, ಆನಂದಕರವಾದ ಈ ನಿಧಿಯನ್ನು ಅನುಭವಿಸಲು ಧೀಮಂತನಾದವನೇ ಶಕ್ತನಾಗಿರುತ್ತಾನೆ.

**ಯಾವದ್ವಾ ಯತ್ಕಿಂಚಿದ್ವಿಷ-ದೋಷ-ಸ್ಫೂರ್ತಿರಸ್ತಿ ಚೇದ್ದೇಹೇ ।**
**ಕಥಮಾರೋಗ್ಯಾಯ ಭವೇತ್ ತದ್ವದಹಂತಾಽಪಿ ಯೋಗಿನೋ**
**ಮುಕ್ತ್ಯೈ ॥ ೩೦೨ ॥**

**ದೇಹೇ** = ಶರೀರದಲ್ಲಿ **ಯಾವತ್ ವಾ** = ಎಲ್ಲಿಯು ವರೆಗೆ **ಯತ್ ಕಿಂಚಿತ್** = ಸ್ವಲ್ಪವಾದರೂ **ವಿಷ-ದೋಷ-ಸ್ಫೂರ್ತಿಃ ಅಸ್ತಿ ಚೇತ್** = ವಿಷದೋಷದ ವ್ಯಾಪ್ತಿಯಿರುವುದೊ [ಅಲ್ಲಿಯು ವರೆಗೆ] **ಆರೋಗ್ಯಾಯ ಕಥಂ ಭವೇತ್** = ಆರೋಗ್ಯವು ಹೇಗೆ ಲಭಿಸೀತು? **ತದ್ವತ್** = ಹಾಗೆಯೇ **ಅಹಂತಾ ಅಪಿ** = ಅಹಂಕಾರವೂ ಕೂಡ [ಎಲ್ಲಿಯು ವರೆಗೆ ಇರುವುದೊ ಅಲ್ಲಿಯು ವರೆಗೆ] **ಯೋಗಿನಃ** = ಯೋಗಿಗೆ **ಮುಕ್ತ್ಯೈ [ಕಥಂ ಭವೇತ್]** = ಮುಕ್ತಿಯು ಹೇಗೆ ಲಭಿಸೀತು?

**೩೦೨.** ಎಲ್ಲಿಯು ವರೆಗೆ ಶರೀರದಲ್ಲಿ ಸ್ವಲ್ಪವಾದರೂ ವಿಷದೋಷವಿರುವುದೊ ಅಲ್ಲಿಯು ವರೆಗೆ ಆರೋಗ್ಯವು ಹೇಗೆ ಲಭಿಸೀತು? ಹಾಗೆಯೇ ಅಹಂಕಾರವಿರುವ ವರೆಗೂ ಯೋಗಿಗೆ ಮುಕ್ತಿಯು (ಹೇಗೆ ಲಭಿಸೀತು)?

**ಅಹಮೋಽತ್ಯಂತ-ನಿವೃತ್ತ್ಯಾ ತತ್ಕೃತ-ನಾನಾವಿಕಲ್ಪ-ಸಂಹೃತ್ಯಾ ।**
**ಪ್ರತ್ಯಕ್-ತತ್ತ್ವ-ವಿವೇಕಾದಯಮಹಮಸ್ಮೀತಿ ವಿಂದತೇ ತತ್ತ್ವಮ್ ॥ ೩೦೩ ॥**

**ಅಹಮಃ** = ಅಹಂಕಾರದ **ಅತ್ಯಂತ-ನಿವೃತ್ತ್ಯಾ** = ಸಂಪೂರ್ಣಪರಿಹಾರದಿಂದ **ತತ್-ಕೃತ-ನಾನಾ-ವಿಕಲ್ಪ-ಸಂಹೃತ್ಯಾ** = ಅದರಿಂದಾದ ವಿವಿಧ ಕಲ್ಪನೆಗಳ ನಿರೋಧದಿಂದ **ಪ್ರತ್ಯಕ್-ತತ್ತ್ವ-ವಿವೇಕಾತ್** = ಆತ್ಮ-ಯಾಥಾತ್ಮ್ಯದ ವಿವೇಚನೆಯಿಂದ **ಅಯಮ್ ಅಹಮ್ ಅಸ್ಮಿ** = ಇವನೇ ನಾನು **ಇತಿ** = ಎಂದು **ತತ್ತ್ವಂ** = ಪರಮಾತ್ಮತತ್ತ್ವವನ್ನು **ವಿಂದತೇ** = ಹೊಂದುತ್ತಾನೆ.

**೩೦೩.** ಅಹಂಕಾರದ ಸಂಪೂರ್ಣ ನಿವೃತ್ತಿಯಿಂದಲೂ ಅದರಿಂದಾದ ವಿವಿಧ ಕಲ್ಪನೆಗಳ ನಿರೋಧದಿಂದಲೂ ಆತ್ಮ-ಯಾಥಾತ್ಮ್ಯದ ವಿವೇಚನೆಯಿಂದಲೂ 'ಇವನೇ ನಾನು' ಎಂದು ಪರಮಾತ್ಮ-ತತ್ತ್ವವನ್ನು ಹೊಂದುತ್ತಾನೆ.

**ಅಹಂಕಾರೇ ಕರ್ತರ್ಯಹಮಿತಿ ಮತಿಂ ಮುಂಚ ಸಹಸಾ**
**ವಿಕಾರಾತ್ಮನ್ಯಾತ್ಮಪ್ರತಿಫಲ-ಜುಷಿ ಸ್ವಸ್ಥಿತಿ-ಮುಷಿ ।**
**ಯದಧ್ಯಾಸಾತ್ ಪ್ರಾಪ್ತಾ ಜನಿ-ಮೃತಿ-ಜರಾ-ದುಃಖಬಹುಲಾ**
**ಪ್ರತೀಚಶ್ಚಿನ್ಮೂರ್ತೇಸ್ತವ ಸುಖತನೋಃ ಸಂಸೃತಿರಿಯಮ್ ॥ ೩೦೪ ॥**

**ಸ್ವಸ್ಥಿತಿ-ಮುಷಿ** = ಆತ್ಮಸ್ವರೂಪವನ್ನು ಮರೆಮಾಡುವ **ಆತ್ಮಪ್ರತಿಫಲ-ಜುಷಿ** = ಆತ್ಮಪ್ರತಿಬಿಂಬವನ್ನು ಹೊಂದಿರುವ **ವಿಕಾರಾತ್ಮನಿ** = ವಿಕಾರರೂಪವಾದ **ಕರ್ತರಿ** = ಕರ್ತೃವಾದ **ಅಹಂಕಾರೇ** = ಅಹಂಕಾರದಲ್ಲಿ **ಅಹಮ್ ಇತಿ** = 'ನಾನು' ಎಂಬ **ಮತಿಂ** = ಬುದ್ಧಿಯನ್ನು **ಸಹಸಾ** = ಕೂಡಲೇ **ಮುಂಚ** = ಬಿಡು; **ಯತ್-ಅಧ್ಯಾಸಾತ್** = ಯಾವುದರ ಅಧ್ಯಾಸದಿಂದ **ಚಿನ್ಮೂರ್ತೇಃ** = ಚಿನ್ಮೂರ್ತಿಯಾದ **ಸುಖ-**

**ತನೋಃ** - ಆನಂದಘನನಾದ **ಪ್ರತೀಚಃ** - ಪ್ರತ್ಯಗಾತ್ಮನಾದ **ತವ** = ನಿನಗೆ **ಜನಿ-ಮೃತಿ-ಜರಾ-ದುಃಖ-ಬಹುಲಾ** - ಹುಟ್ಟು ಸಾವು ಮುಪ್ಪು— ಇವುಗಳ ದುಃಖದಿಂದ ತುಂಬಿರುವ **ಇಯಂ ಸಂಸೃತಿಃ** = ಈ ಸಂಸಾರವು **ಪ್ರಾಪ್ತಾ** = ಪ್ರಾಪ್ತವಾಗಿದೆಯೊ.

**೩೦೪.** ಆತ್ಮಸ್ವರೂಪವನ್ನು ಮರೆಮಾಡುವುದೂ ಆತ್ಮಪ್ರತಿಬಿಂಬವನ್ನು ಹೊಂದಿರುವುದೂ ವಿಕಾರರೂಪಿಯೂ ಕರ್ತೃವೂ ಆದ ಅಹಂಕಾರದಲ್ಲಿ 'ನಾನು' ಎಂಬ ಬುದ್ಧಿಯನ್ನು ಕೂಡಲೇ ಬಿಡು. ಈ ಅಹಂಕಾರದ ಅಧ್ಯಾಸದಿಂದಲೇ ಚಿನ್ಮೂರ್ತಿಯೂ ಆನಂದಘನನೂ ಪ್ರತ್ಯಗಾತ್ಮನೂ ಆದ ನಿನಗೆ ಹುಟ್ಟು ಸಾವು ಮುಪ್ಪು— ಇವುಗಳ ದುಃಖದಿಂದ ತುಂಬಿರುವ ಈ ಸಂಸಾರವು ಉಂಟಾಗಿರುತ್ತದೆ.

**ಸದೈಕರೂಪಸ್ಯ ಚಿದಾತ್ಮನೋ ವಿಭೋ-**
**ರಾನಂದ ಮೂರ್ತೇರನವದ್ಯಕೀರ್ತೇಃ ।**
**ನೈವಾನ್ಯಥಾ ಕ್ವಾಪ್ಯವಿಕಾರಿಣಸ್ತೇ**
**ವಿನಾಹಮಧ್ಯಾಸಮಮುಷ್ಯ ಸಂಸೃತಿಃ ॥ ೩೦೫ ॥**

**ಸದಾ ಏಕರೂಪಸ್ಯ** - ನಿತ್ಯವೂ ಏಕಸ್ವರೂಪನಾಗಿರುವ **ಚಿದಾತ್ಮನಃ** = ಜ್ಞಾನಸ್ವರೂಪನಾದ **ವಿಭೋಃ** = ವ್ಯಾಪಕನಾದ **ಆನಂದಮೂರ್ತೇಃ** = ಆನಂದವಿಗ್ರಹನಾದ **ಅನವದ್ಯ-ಕೀರ್ತೇಃ** - ನಿಷ್ಕಲಂಕ-ಕೀರ್ತಿಯುಳ್ಳ **ಅವಿಕಾರಿಣಃ** = ನಿರ್ವಿಕಾರನಾದ **ಅಮುಷ್ಯ ತೇ** = ಇಂಥ ನಿನಗೆ **ಅಹಮ್-ಅಧ್ಯಾಸಂ ವಿನಾ** = ಅಹಂಕಾರದ ಆರೋಪವನ್ನು ಬಿಟ್ಟರೆ **ಅನ್ಯಥಾ** = ಬೇರೆ ವಿಧವಾಗಿ **ಕ್ವ ಅಪಿ** = ಎಲ್ಲಿಯೂ **ಸಂಸೃತಿಃ** = ಸಂಸಾರವು **ನ ಏವ** = ಇಲ್ಲವೇ ಇಲ್ಲ.

**೩೦೫.** ನಿತ್ಯವೂ ಏಕಸ್ವರೂಪನೂ ಜ್ಞಾನಸ್ವರೂಪನೂ ವ್ಯಾಪಕನೂ ಆನಂದವಿಗ್ರಹನೂ ನಿಷ್ಕಲಂಕ-ಕೀರ್ತಿಯುಳ್ಳವನೂ ನಿರ್ವಿಕಾರನೂ ಆದ ನಿನಗೆ ಈ ಅಹಂಕಾರದ ಅಧ್ಯಾಸವನ್ನು ಬಿಟ್ಟು ಬೇರೆ ವಿಧದಿಂದ ಎಲ್ಲಿಯೂ ಸಂಸಾರವೆಂಬುದು ಇಲ್ಲವೇ ಇಲ್ಲ.

**ತಸ್ಮಾದಹಂಕಾರಮಿಮಂ ಸ್ವಶತ್ರುಂ**
**ಭೋಕ್ತುರ್ಗಲೇ ಕಂಟಕವತ್ ಪ್ರತೀತಮ್ ।**
**ವಿಚ್ಛಿದ್ಯ ವಿಜ್ಞಾನಮಹಾಸಿನಾ ಸ್ಫುಟಂ**
**ಭುಂಕ್ಷ್ವಾತ್ಮಸಾಮ್ರಾಜ್ಯಸುಖಂ ಯಥೇಷ್ಟಮ್**
**॥ ೩೦೬ ॥**

**ತಸ್ಮಾತ್** = ಆದುದರಿಂದ **ಭೋಕ್ತುಃ** = ಊಟಮಾಡುವವನ **ಗಲೇ** = ಗಂಟಲಿನಲ್ಲಿ **ಕಂಟಕವತ್ ಪ್ರತೀತಂ** = ಮುಳ್ಳಿನಂತಿರುವ **ಇಮಮ್ ಅಹಂಕಾರಂ** = ಈ

ಅಹಂಕಾರವೆಂಬ **ಸ್ವಶತ್ರುಂ** = ಸ್ವಶತ್ರುವನ್ನು **ವಿಜ್ಞಾನ-ಮಹಾ-ಅಸಿನಾ** = ವಿಜ್ಞಾನವೆಂಬ ದೊಡ್ಡ ಕತ್ತಿಯಿಂದ **ಸ್ಫುಟಂ ವಿಚ್ಛಿದ್ಯ** = ಚೆನ್ನಾಗಿ ಕತ್ತರಿಸಿ **ಆತ್ಮ-ಸಾಮ್ರಾಜ್ಯ-ಸುಖಂ** = ಆತ್ಮಸಾಮ್ರಾಜ್ಯದ ಸುಖವನ್ನು **ಯಥೇಷ್ಟಂ ಭುಂಕ್ಷ್ವ** = ಯಥೇಷ್ಟವಾಗಿ ಅನುಭವಿಸು.

**೩೦೬.** ಆದುದರಿಂದ ಊಟಮಾಡುವವನ ಗಂಟಲಿನಲ್ಲಿ ಮುಳ್ಳಿನಂತಿರುವ ಅಹಂಕಾರವೆಂಬ ಈ ನಿನ್ನ ಶತ್ರುವನ್ನು ವಿಜ್ಞಾನವೆಂಬ ದೊಡ್ಡ ಕತ್ತಿಯಿಂದ ಚೆನ್ನಾಗಿ ಕತ್ತರಿಸಿ ಆತ್ಮಸಾಮ್ರಾಜ್ಯದ ಸುಖವನ್ನು ಯಥೇಷ್ಟವಾಗಿ ಅನುಭವಿಸು.

**ತತೋಽಹಮಾದೇರ್ವಿನಿವರ್ತ್ಯ ವೃತ್ತಿಂ**
**ಸಂತ್ಯಕ್ತರಾಗಃ ಪರಮಾರ್ಥಲಾಭಾತ್ ।**
**ತೂಷ್ಣೀಂ ಸಮಾಸ್ಸ್ವಾತ್ಮಸುಖಾನುಭೂತ್ಯಾ**
**ಪೂರ್ಣಾತ್ಮನಾ ಬ್ರಹ್ಮಣಿ ನಿರ್ವಿಕಲ್ಪಃ　　॥ ೩೦೭ ॥**

ತತಃ = ಅನಂತರ **ಅಹಮ್-ಆದೇಃ** = ಅಹಂಕಾರವೇ ಮೊದಲಾದುವುಗಳ **ವೃತ್ತಿಂ** = ವೃತ್ತಿಯನ್ನು **ವಿನಿವರ್ತ್ಯ** = ತೊಲಗಿಸಿಕೊಂಡು, **ಪರಮಾರ್ಥಲಾಭಾತ್** = ಪರಮಾರ್ಥಪ್ರಾಪ್ತಿಯಿಂದ **ಸಂತ್ಯಕ್ತ-ರಾಗಃ** = ಅಭಿಲಾಷೆಯನ್ನು ಬಿಟ್ಟವನಾಗಿ **ಆತ್ಮ-ಸುಖಾನುಭೂತ್ಯಾ** = ಆತ್ಮಸುಖಾನುಭವದಿಂದ **ನಿರ್ವಿಕಲ್ಪಃ** = ವಿಕಲ್ಪಾದಿರಹಿತನಾಗಿ **ಪೂರ್ಣಾತ್ಮನಾ** = ಪರಿಪೂರ್ಣಸ್ವರೂಪದಿಂದ **ಬ್ರಹ್ಮಣಿ** = ಬ್ರಹ್ಮದಲ್ಲಿ **ತೂಷ್ಣೀಂ ಸಮಾಸ್ಸ್ವ** = ಸುಮ್ಮನಿರು.

**೩೦೭.** ಅನಂತರ ಅಹಂಕಾರವೇ ಮೊದಲಾದುವುಗಳ ವೃತ್ತಿಯನ್ನು ತೊಲಗಿಸಿಕೊಂಡು, ಪರಮಾರ್ಥಪ್ರಾಪ್ತಿಯಿಂದ ಅಭಿಲಾಷೆಯಿಲ್ಲದವನಾಗಿ, ಆತ್ಮಸುಖಾನುಭವದಿಂದ ವಿಕಲ್ಪಾದಿರಹಿತನಾಗಿ, ಪರಿಪೂರ್ಣಸ್ವರೂಪದಿಂದ ಬ್ರಹ್ಮದಲ್ಲಿಯೇ ಸುಮ್ಮನಿರು.

**ಸಮೂಲಕೃತ್ತೋಽಪಿ ಮಹಾನಹಂ ಪುನ-**
**ರ್ವ್ಯುಲ್ಲೇಖಿತಃ ಸ್ಯಾದ್ಯದಿ ಚೇತಸಾ ಕ್ಷಣಮ್ ।**
**ಸಂಜೀವ್ಯ ವಿಕ್ಷೇಪ-ಶತಂ ಕರೋತಿ**
**ನಭಸ್ವತಾ ಪ್ರಾವೃಷಿ ವಾರಿದೋ ಯಥಾ　॥ ೩೦೮ ॥**

**ಸಮೂಲಕೃತ್ತಃ ಅಪಿ** = ಬೇರು ಸಹಿತ ಕಿತ್ತುಹಾಕಲ್ಪಟ್ಟರೂ ಕೂಡ **ಮಹಾನ್ ಅಹಂ** = ಬಲಿಷ್ಠವಾದ ಅಹಂಕಾರವು **ಪುನಃ** = ಮತ್ತೆ **ಚೇತಸಾ** = ಮನಸ್ಸಿನಿಂದ **ಕ್ಷಣಂ** = ಕ್ಷಣಮಾತ್ರವಾದರೂ **ವ್ಯುಲ್ಲೇಖಿತಃ ಸ್ಯಾತ್ ಯದಿ** = ಸ್ಮರಿಸಲ್ಪಟ್ಟರೆ—

**ಪ್ರಾವೃಷಿ** = ಮಳೆಗಾಲದಲ್ಲಿ **ನಭಸ್ವತಾ** = ಗಾಳಿಯಿಂದ [ಚೆದರಿಸಲ್ಪಟ್ಟ] **ವಾರಿದಃ ಯಥಾ** = ಮೇಘದ ಹಾಗೆ— **ಸಂಜೀವ್ಯ** = ಜೀವಗೊಂಡು **ವಿಕ್ಷೇಪಶತಂ** = ನೂರಾರು ವೃತ್ತಿಗಳನ್ನು **ಕರೋತಿ** = ಉಂಟುಮಾಡುತ್ತದೆ.

**೩೦೮.** ಈ ಬಲಿಷ್ಠವಾದ ಅಹಂಕಾರವು ಬೇರುಸಹಿತ ಕಿತ್ತುಹಾಕಲ್ಪಟ್ಟರೂ ಮನಸ್ಸಿನಿಂದ ಕ್ಷಣಕಾಲ ಪುನಃ ಸ್ಮರಿಸಲ್ಪಟ್ಟರೆ— ಮಳೆಗಾಲದಲ್ಲಿ ಗಾಳಿಯಿಂದ ಚೆದರಿಸಲ್ಪಟ್ಟ ಮೇಘದಂತೆ— ಜೀವಗೊಂಡು ನೂರಾರು ವೃತ್ತಿಗಳನ್ನು ಉಂಟುಮಾಡುತ್ತದೆ.

**ನಿಗೃಹ್ಯ ಶತ್ರೋರಹವೋಽವಕಾಶಃ**
**ಕ್ವಚಿನ್ನ ದೇಯೋ ವಿಷಯಾನುಚಿಂತಯಾ ।**
**ಸ ಏವ ಸಂಜೀವನ-ಹೇತುರಸ್ಯ**
**ಪ್ರಕ್ಷೀಣ-ಜಂಬೀರ-ತರೋರಿವಾಂಬು ॥ ೩೦೯ ॥**

[**ಅಹಂಕಾರಂ** = ಅಹಂಕಾರವನ್ನು] **ನಿಗೃಹ್ಯ** = ನಿಗ್ರಹಿಸಿ **ಶತ್ರೋಃ** = ಶತ್ರುವಾದ **ಅಹಮಃ** = ಅಹಂಕಾರಕ್ಕೆ **ವಿಷಯಾನುಚಿಂತಯಾ** = ವಿಷಯಚಿಂತನೆಯಿಂದ **ಕ್ವಚಿತ್** = ಸ್ವಲ್ಪವಾದರೂ **ಅವಕಾಶಃ** = ಅವಕಾಶವು **ನ ದೇಯಃ** = ಕೊಡಲ್ಪಡತಕ್ಕದ್ದಲ್ಲ; **ಪ್ರಕ್ಷೀಣ-ಜಂಬೀರ-ತರೋಃ** = ಒಣಗಿಹೋಗುತ್ತಿರುವ ನಿಂಬೆಗಿಡಕ್ಕೆ **ಅಂಬು ಇವ** = ನೀರು ಹೇಗೋ ಹಾಗೆ **ಸಃ ಏವ** = ವಿಷಯಚಿಂತನವೇ **ಅಸ್ಯ** = ಇದರ **ಸಂಜೀವನ-ಹೇತುಃ** = ಚಿಗುರುವಿಕೆಗೆ ಕಾರಣವು.

**೩೦೯.** ಅಹಂಕಾರವನ್ನು ನಿಗ್ರಹಿಸಿದಮೇಲೂ ಮತ್ತೆ ಈ ಶತ್ರುವಿಗೆ ವಿಷಯವಸ್ತುಗಳ ನೆನಪಿನಿಂದ ಸ್ವಲ್ಪ ಅವಕಾಶವನ್ನೂ ಕೊಡಕೂಡದು.[೧] (ಹಾಗೆ ಕೊಟ್ಟರೆ) ಒಣಗಿಹೋಗುತ್ತಿರುವ ನಿಂಬೆಯ ಗಿಡಕ್ಕೆ ಎರೆದ ನೀರಿನಂತೆ ಅದೇ ಈ ಅಹಂಕಾರವನ್ನು ಚಿಗುರಿಸಲು ಕಾರಣವಾಗಿರುತ್ತದೆ.

[೧ ಮುಂದೆ ೩೨೧ನೆಯ ಶ್ಲೋಕದಲ್ಲಿ ಸ್ವಸ್ವರೂಪದ ವಿಸ್ಮರಣೆಗಿಂತ ಹೆಚ್ಚಿನ ಪ್ರಮಾದವಿಲ್ಲವೆಂದು ಹೇಳಿದೆ.]

**ದೇಹಾತ್ಮನಾ ಸಂಸ್ಥಿತ ಏವ ಕಾಮೀ**
**ವಿಲಕ್ಷಣಃ ಕಾಮಯಿತಾ ಕಥಂ ಸ್ಯಾತ್ ।**
**ಅತೋಽರ್ಥಸಂಧಾನ-ಪರತ್ವಮೇವ**
**ಭೇದಪ್ರಸಕ್ತ್ಯಾ ಭವಬಂಧ-ಹೇತುಃ ॥ ೩೧೦ ॥**

**ದೇಹಾತ್ಮನಾ ಸಂಸ್ಥಿತಃ ಏವ** = ದೇಹವೇ ತಾನೆಂದು ತಿಳಿದಿರುವವನೇ **ಕಾಮೀ** = ಕಾಮಿಯು, **ವಿಲಕ್ಷಣಃ** = [ದೇಹಕ್ಕಿಂತ] ವಿಲಕ್ಷಣನಾದವನು **ಕಾಮ-**

ಯಿತಾ **ಕಥಂ ಸ್ಯಾತ್** = ಹೇಗೆ ತಾನೇ ಕಾಮಿಯಾದಾನು? **ಅತಃ** = ಆದುದರಿಂದ **ಅರ್ಥ-ಸಂಧಾನ-ಪರತ್ವಮ್ ಏವ** = ವಿಷಯಚಿಂತನೆಯಲ್ಲಿ ಆಸಕ್ತನಾಗುವಿಕೆಯೇ **ಭೇದಪ್ರಸಕ್ತ್ಯಾ** = ಭೇದಕ್ಕೆ ಅವಕಾಶವನ್ನು ಕೊಡುವುದರ ಮೂಲಕ **ಭವಬಂಧ-ಹೇತುಃ** = ಸಂಸಾರಬಂಧಕ್ಕೆ ಕಾರಣವಾಗಿರುತ್ತದೆ.

೩೧೦. ದೇಹವೇ ತಾನೆಂದು ಅರಿತಿರುವವನೇ ಕಾಮಿಯು. ತಾನು ದೇಹಕ್ಕಿಂತ ಬೇರೆಯಾದವನೆಂದು ಅರಿತಿರುವವನು ಹೇಗೆ ಕಾಮಿಯಾದಾನು?[೧] ಆದುದರಿಂದ ವಿಷಯಗಳನ್ನು ಮನಸ್ಸಿನಲ್ಲಿ ಚಿಂತಿಸುವುದೇ ಭೇದಕ್ಕೆ ಅವಕಾಶವನ್ನು ಕೊಡುವುದರ ಮೂಲಕ ಸಂಸಾರಬಂಧಕ್ಕೆ ಕಾರಣವಾಗಿರುತ್ತದೆ.

[೧ 'ಪರಮಾತ್ಮನನ್ನು "ಇವನೇ ನಾನು" ಎಂದು ಅರಿತುಕೊಂಡರೆ, ಯಾವುದನ್ನು ಬಯಸುತ್ತ, ಯಾವ ಪ್ರಯೋಜನಕ್ಕಾಗಿ ಶರೀರದ ಜ್ವರವನ್ನು ಅನುಸರಿಸಿ ದುಃಖ ಪಡುವನು?' **ಆತ್ಮಾನಂ ಚೇದ್ವಿಜಾನೀಯಾದಯಮಸ್ಮೀತಿ ಪೂರುಷಃ । ಕಿಮಿಚ್ಛನ್ ಕಸ್ಯ ಕಾಮಾಯ ಶರೀರಮನುಸಂಜ್ವರೇತ್॥** (ಬೃಹದಾರಣ್ಯಕ ಉ. ೪. ೪. ೧೨) ಎಂದು ಶ್ರುತಿಯು ಹೇಳುತ್ತದೆ.]

**ಕಾರ್ಯಪ್ರವರ್ಧನಾದ್ಬೀಜ-ಪ್ರವೃದ್ಧಿಃ ಪರಿದೃಶ್ಯತೇ ।**
**ಕಾರ್ಯನಾಶಾದ್ಬೀಜನಾಶಸ್ತಸ್ಮಾತ್ಕಾರ್ಯಂ**
**ನಿರೋಧಯೇತ್ ॥ ೩೧೧ ॥**

**ಕಾರ್ಯ-ಪ್ರವರ್ಧನಾತ್** = ಕಾಮ್ಯಕರ್ಮಗಳು ಪ್ರವರ್ಧಿಸುವುದರಿಂದ **ಬೀಜ-ಪ್ರವೃದ್ಧಿಃ** = ವಿಷಯವಾಸನೆಯೆಂಬ ಬೀಜಗಳ ಪ್ರವೃದ್ಧಿಯು **ಪರಿದೃಶ್ಯತೇ** = ಕಂಡು ಬರುತ್ತದೆ; **ಕಾರ್ಯನಾಶಾತ್** = ಕರ್ಮನಾಶದಿಂದ **ಬೀಜನಾಶಃ** = ಬೀಜಗಳ ನಾಶವು [ಕಂಡುಬರುತ್ತದೆ]; **ತಸ್ಮಾತ್** = ಆದುದರಿಂದ **ಕಾರ್ಯಂ** = ಕರ್ಮವನ್ನು **ನಿರೋಧ-ಯೇತ್** = ತಡೆಯಬೇಕು.

೩೧೧. ಕಾಮ್ಯಕರ್ಮವು ಪ್ರವರ್ಧಿಸಿದರೆ ವಿಷಯವಾಸನೆಯೆಂಬ ಬೀಜಗಳ ಪ್ರವೃದ್ಧಿಯೂ ಕಂಡುಬರುತ್ತದೆ. ಕರ್ಮವು ಇಲ್ಲದಿದ್ದರೆ ಬೀಜವೂ ಇರುವುದಿಲ್ಲ. ಆದುದರಿಂದ ಕರ್ಮವನ್ನು ತಡೆಯಬೇಕು.

**ವಾಸನಾವೃದ್ಧಿತಃ ಕಾರ್ಯಂ ಕಾರ್ಯವೃದ್ಧ್ಯಾ ಚ ವಾಸನಾ ।**
**ವರ್ಧತೇ ಸರ್ವಥಾ ಪುಂಸಃ ಸಂಸಾರೋ ನ ನಿವರ್ತತೇ ॥ ೩೧೨ ॥**

**ವಾಸನಾವೃದ್ಧಿತಃ** = ವಿಷಯವಾಸನೆಯ ವೃದ್ಧಿಯಿಂದ **ಕಾರ್ಯಂ** = ಕರ್ಮವೂ **ಕಾರ್ಯವೃದ್ಧ್ಯಾ** = ಕಾಮ್ಯಕರ್ಮದ ವೃದ್ಧಿಯಿಂದ **ವಾಸನಾ ಚ** = ವಾಸನೆಯೂ

**ವರ್ಧತೇ** = ಬೆಳೆಯುವುದು; **ಪುಂಸಃ** = ಪುರುಷನಿಗೆ **ಸಂಸಾರಃ** = ಸಂಸಾರವು **ಸರ್ವಥಾ** = ಸರ್ವಪ್ರಕಾರದಿಂದಲೂ **ನ ನಿವರ್ತತೇ** = ಹೋಗುವುದೇ ಇಲ್ಲ.

**೩೧೨.** ವಿಷಯವಾಸನೆಯು ವೃದ್ಧಿಯಾದರೆ ಕರ್ಮವೂ (ವೃದ್ಧಿಯಾಗುವುದು), ಕರ್ಮವು ವೃದ್ಧಿಯಾದರೆ ವಿಷಯವಾಸನೆಯೂ ವೃದ್ಧಿಯಾಗುವುದು. (ಹೀಗೆ ಪರಸ್ಪರವೃದ್ಧಿಯಿಂದ) ಮನುಷ್ಯನಿಗೆ ಸಂಸಾರವು ಸರ್ವಪ್ರಕಾರದಿಂದಲೂ ಹೋಗುವುದೇ ಇಲ್ಲ.

**ಸಂಸಾರಬಂಧವಿಚ್ಛಿತ್ತ್ಯೈ ತದ್ದ್ವಯಂ ಪ್ರದಹೇದ್ಯತಿಃ ।**
**ವಾಸನಾವೃದ್ಧಿರೇತಾಭ್ಯಾಂ ಚಿಂತಯಾ ಕ್ರಿಯಯಾ ಬಹಿಃ ॥ ೩೧೩ ॥**

**ಯತಿಃ** = ಪ್ರಯತ್ನಿಸುವವನು **ಸಂಸಾರ-ಬಂಧ-ವಿಚ್ಛಿತ್ತ್ಯೈ** = ಸಂಸಾರಬಂಧದ ನಾಶಕ್ಕಾಗಿ **ತತ್‌ದ್ವಯಂ** = ಆ ಎರಡನ್ನೂ **ಪ್ರದಹೇತ್** = ನಾಶಗೊಳಿಸಬೇಕು; **ಚಿಂತಯಾ** = ವಿಷಯಚಿಂತನೆಯಿಂದಲೂ **ಬಹಿಃ ಕ್ರಿಯಯಾ** = ಹೊರಗೆ ಮಾಡುವ ಕರ್ಮದಿಂದಲೂ — **ಏತಾಭ್ಯಾಂ** = ಇವೆರಡರಿಂದಲೂ **ವಾಸನಾವೃದ್ಧಿಃ** = ವಾಸನಾವೃದ್ಧಿಯು [ಉಂಟಾಗುತ್ತದೆ].

**೩೧೩.** ಪ್ರಯತ್ನಶೀಲನಾದ ಮುಮುಕ್ಷುವು ಸಂಸಾರವೆಂಬ ಬಂಧದ ನಾಶಕ್ಕಾಗಿ ಇವೆರಡನ್ನೂ ನಾಶಗೊಳಿಸಬೇಕು; ಏಕೆಂದರೆ ವಿಷಯಚಿಂತನೆಯಿಂದಲೂ ಹೊರಗೆ ಮಾಡುವ ಕಾಮ್ಯಕರ್ಮದಿಂದಲೂ ವಾಸನೆಯು ವೃದ್ಧಿಯಾಗುತ್ತದೆ.

**ತಾಭ್ಯಾಂ ಪ್ರವರ್ಧಮಾನಾ ಸಾ ಸೂತೇ ಸಂಸೃತಿಮಾತ್ಮನಃ ।**
**ತ್ರಯಾಣಾಂ ಚ ಕ್ಷಯೋಪಾಯಃ ಸರ್ವಾವಸ್ಥಾಸು ಸರ್ವದಾ ॥ ೩೧೪ ॥**

**ಸರ್ವತ್ರ ಸರ್ವತಃ ಸರ್ವಂ ಬ್ರಹ್ಮಮಾತ್ರಾವಲೋಕನೈಃ ।**
**ಸದ್ಭಾವ-ವಾಸನಾ-ದಾರ್ಢ್ಯಾತ್ ತತ್ತ್ರಯಂ ಲಯಮಶ್ನುತೇ ॥ ೩೧೫ ॥**

**ತಾಭ್ಯಾಂ** = ಅವೆರಡರಿಂದ **ಪ್ರವರ್ಧಮಾನಾ** = ಪ್ರವರ್ಧಿಸಿರುವ **ಸಾ** = ಆ ವಿಷಯವಾಸನೆಯು **ಆತ್ಮನಃ** = ಆತ್ಮನಿಗೆ **ಸಂಸೃತಿಂ** = ಸಂಸಾರವನ್ನು **ಸೂತೇ** = ಉಂಟುಮಾಡುತ್ತದೆ; **ತ್ರಯಾಣಾಂ ಚ** = ಆ ಮೂರರ **ಕ್ಷಯೋಪಾಯಃ** = ನಾಶೋಪಾಯವು **ಸರ್ವ-ಅವಸ್ಥಾಸು** = ಎಲ್ಲ ಅವಸ್ಥೆಗಳಲ್ಲಿಯೂ **ಸರ್ವದಾ** = ಎಲ್ಲ ಕಾಲಗಳಲ್ಲಿಯೂ **ಸರ್ವತ್ರ** = ಎಲ್ಲ ಕಡೆಯಲ್ಲಿಯೂ **ಸರ್ವತಃ** = ಎಲ್ಲ ಪ್ರಕಾರದಿಂದಲೂ **ಸರ್ವಂ** = ಎಲ್ಲವನ್ನೂ **ಬ್ರಹ್ಮಮಾತ್ರ-ಅವಲೋಕನೈಃ** = ಬ್ರಹ್ಮವಸ್ತುವೊಂದೇ ಎಂಬ

ಅವಲೋಕನಗಳಿಂದಲೇ; **ಸತ್-ಭಾವ-ವಾಸನಾ-ದಾರ್ಢ್ಯಾತ್** = ಸದ್ಬ್ರಹ್ಮ-ಭಾವನಾ-ಸಂಸ್ಕಾರದ ದಾರ್ಢ್ಯದಿಂದ **ತತ್ ತ್ರಯಂ** = ಆ ಮೂರೂ **ಲಯಮ್ ಅಶ್ನುತೇ** = ಲಯವಾಗುತ್ತದೆ.

**೩೧೪–೩೧೫.** ಅವೆರಡರಿಂದ ವಿಷಯವಾಸನೆಯು ಪ್ರವರ್ಧಿಸಿ ಆತ್ಮನಿಗೆ ಸಂಸಾರವನ್ನುಂಟುಮಾಡುತ್ತದೆ. ಈ ಮೂರನ್ನು[೧] ನಾಶವಾಡಬೇಕಾದರೆ ಸರ್ವಾವಸ್ಥೆಗಳಲ್ಲಿಯೂ ಸರ್ವಕಾಲಗಳಲ್ಲಿಯೂ ಸರ್ವತ್ರ ಸರ್ವಪ್ರಕಾರಗಳಿಂದಲೂ ಸರ್ವವನ್ನೂ ಬ್ರಹ್ಮವಸ್ತುವೊಂದೇ ಎಂಬ ದೃಷ್ಟಿಯೇ ಉಪಾಯವು. ಸದ್ಬ್ರಹ್ಮಭಾವನೆಯ ಸಂಸ್ಕಾರವು ದೃಢವಾದರೆ ಆ ಮೂರೂ ನಾಶವಾಗುತ್ತವೆ.

[[೧] ವಿಷಯವಾಸನೆ, ವಿಷಯಚಿಂತನೆ, ಕಾಮ್ಯಕರ್ಮ—ಇವುಗಳನ್ನು.]

**ಕ್ರಿಯಾನಾಶೇ ಭವೇಚ್ಚಿಂತಾನಾಶೋಽಸ್ಮಾದ್ವಾಸನಾಕ್ಷಯಃ ।**
**ವಾಸನಾ-ಪ್ರಕ್ಷಯೋ ಮೋಕ್ಷಃ ಸಾ ಜೀವನ್ಮುಕ್ತಿರಿಷ್ಯತೇ ॥ ೩೧೬ ॥**

**ಕ್ರಿಯಾನಾಶೇ** [**ಸತಿ**] = ಕರ್ಮವು ನಾಶವಾದಾಗ **ಚಿಂತಾನಾಶಃ** = ವಿಷಯಚಿಂತೆಯ ನಾಶವು **ಭವೇತ್** = ಉಂಟಾಗುತ್ತದೆ, **ಅಸ್ಮಾತ್** = ಇದರಿಂದ **ವಾಸನಾ-ಕ್ಷಯಃ** = ವಾಸನಾಕ್ಷಯವು [ಉಂಟಾಗುತ್ತದೆ]; **ವಾಸನಾ-ಪ್ರಕ್ಷಯಃ** = ವಾಸನಾನಾಶವೇ **ಮೋಕ್ಷಃ** = ಮೋಕ್ಷವು, **ಸಾ** = ಅದೇ **ಜೀವನ್ಮುಕ್ತಿಃ** = ಜೀವನ್ಮುಕ್ತಿಯು **ಇಷ್ಯತೇ** = ಎಂದು ಹೇಳಲ್ಪಡುತ್ತದೆ.

**೩೧೬.** ಕರ್ಮವು ನಾಶವಾದಾಗ ವಿಷಯಚಿಂತನೆಯು ನಾಶವಾಗುತ್ತದೆ. ಇದರಿಂದ ವಾಸನೆಯು ನಾಶವಾಗುತ್ತದೆ. ವಾಸನೆಯು ನಾಶವಾಗುವುದೇ ಮೋಕ್ಷವು. ಅದೇ ಜೀವನ್ಮುಕ್ತಿಯು.

**ಸದ್ವಾಸನಾ-ಸ್ಫೂರ್ತಿ-ವಿಜೃಂಭಣೇ ಸ-**
**ತ್ಯಸೌ ವಿಲೀನಾಪ್ಯಹಮಾದಿ-ವಾಸನಾ ।**
**ಅತಿಪ್ರಕೃಷ್ಟಾಪ್ಯರುಣಪ್ರಭಾಯಾಂ**
**ವಿಲೀಯತೇ ಸಾಧು ಯಥಾ ತಮಿಸ್ರಾ ॥ ೩೧೭ ॥**

**ಸತ್-ವಾಸನಾ-ಸ್ಫೂರ್ತಿ-ವಿಜೃಂಭಣೇ ಸತಿ** = ಸದ್ಬ್ರಹ್ಮವಾಸನೆಯ ಪ್ರಕಾಶದ ವ್ಯಾಪ್ತಿಯು ಉಂಟಾದಾಗ **ಅಸೌ** = ಈ **ಅಹಮಾದಿ-ವಾಸನಾ ಅಪಿ** = ಅಹಂಕಾರಾದಿ-ವಾಸನೆಯೂ **ವಿಲೀನಾ** = ಲಯವಾಗುತ್ತದೆ, **ಯಥಾ** = ಹೇಗೆಂದರೆ **ತಮಿಸ್ರಾ** =

ಅಂಧಕಾರವು **ಅತಿಪ್ರಕೃಷ್ಟಾ ಅಪಿ**= ಎಷ್ಟು ನಿಬಿಡವಾಗಿದ್ದರೂ **ಅರುಣಪ್ರಭಾಯಾಂ**= ಅರುಣಪ್ರಭೆಯಲ್ಲಿ **ಸಾಧು ವಿಲೀಯತೇ**= ಸಂಪೂರ್ಣವಾಗಿ ನಾಶವಾಗುತ್ತದೆ.

**೩೧೭.** ಅಂಧಕಾರವು ಎಷ್ಟೇ ನಿಬಿಡವಾಗಿದ್ದರೂ ಅರುಣೋದಯವಾದಾಗ ಸಂಪೂರ್ಣವಾಗಿ ನಾಶವಾಗುವಂತೆ ಸದ್ಬ್ರಹ್ಮವಾಸನೆಯು ಪ್ರಕಾಶವು ಹಬ್ಬಿಕೊಂಡರೆ ಈ ಅಹಂಕಾರಾದಿ-ವಾಸನೆಯು ನಾಶವಾಗುತ್ತದೆ.

**ತಮಸ್ತಮಃಕಾರ್ಯಮನರ್ಥಜಾಲಂ**
**ನ ದೃಶ್ಯತೇ ಸತ್ಯುದಿತೇ ದಿನೇಶೇ ।**
**ತಥಾಽದ್ವಯಾನಂದ-ರಸಾನುಭೂತೌ**
**ನ ವಾಽಸ್ತಿ ಬಂಧೋ ನ ಚ ದುಃಖಗಂಧಃ ॥ ೩೧೮ ॥**

**ದಿನೇಶೇ ಉದಿತೇ ಸತಿ**= ಸೂರ್ಯನು ಉದಯಿಸುತ್ತಿರುವಾಗ **ತಮಃ**= ಕತ್ತಲೆಯೂ **ತಮಃಕಾರ್ಯಂ**= ಕತ್ತಲೆಯಿಂದಾಗುವ **ಅನರ್ಥಜಾಲಂ**= ಅನರ್ಥಸಂಕುಲವೂ [**ಯಥಾ**= ಹೇಗೆ] **ನ ದೃಶ್ಯತೇ**= ಕಂಡುಬರುವುದಿಲ್ಲವೊ **ತಥಾ**= ಹಾಗೆಯೇ **ಅದ್ವಯ-ಆನಂದರಸ-ಅನುಭೂತೌ** [**ಸತ್ಯಾಂ**]= ಅದ್ವಯ ಬ್ರಹ್ಮಾನಂದ ರಸದ ಅನುಭವವು ಆಗುತ್ತಿರುವಾಗ **ಬಂಧಃ**= ಬಂಧವು **ನ ವಾ ಅಸ್ತಿ**= ಇರುವುದಿಲ್ಲ, **ದುಃಖಗಂಧಃ ಚ**= ಮತ್ತು ದುಃಖಗಂಧವು **ನ**= ಇರುವುದಿಲ್ಲ.

**೩೧೮.** ಸೂರ್ಯನು ಉದಯಿಸಿದರೆ ಕತ್ತಲೆಯಾಗಲಿ ಅದರಿಂದಾಗುವ ಅನರ್ಥಗಳ ಸಮೂಹವಾಗಲಿ ಹೇಗೆ ಕಂಡುಬರುವುದಿಲ್ಲವೊ ಹಾಗೆಯೇ ಅದ್ವಯ-ಬ್ರಹ್ಮಾನಂದ-ರಸದ ಅನುಭವವಾಗುತ್ತಿರುವಾಗ ಬಂಧವೂ ಇರುವುದಿಲ್ಲ, ದುಃಖದ ಗಂಧವೂ[೧] ಇರುವುದಿಲ್ಲ.

[೧ 'ಏಕತ್ವವನ್ನು ನೋಡುತ್ತಿರುವವನಿಗೆ ಮೋಹವೆಲ್ಲಿ? ಶೋಕವೆಲ್ಲಿ?' **ತತ್ರ ಕೋ ಮೋಹಃ ಕಶ್ಶೋಕ ಏಕತ್ವಮನುಪಶ್ಯತಃ** (ಈಶಾವಾಸ್ಯ ಉ. ೭). ]

**ದೃಶ್ಯಂ ಪ್ರತೀತಂ ಪ್ರವಿಲಾಪಯನ್ ಸ್ವಯಂ**
**ಸನ್ಮಾತ್ರಮಾನಂದಘನಂ ವಿಭಾವಯನ್ ।**
**ಸಮಾಹಿತಃ ಸನ್ ಬಹಿರಂತರಂ ವಾ**
**ಕಾಲಂ ನಯೇಥಾಃ ಸತಿ ಕರ್ಮಬಂಧೇ ॥ ೩೧೯ ॥**

**ಪ್ರತೀತಂ**= ಕಾಣುತ್ತಿರುವ **ದೃಶ್ಯಂ**= ದೃಶ್ಯಜಗತ್ತನ್ನು **ಪ್ರವಿಲಾಪಯನ್ ಸನ್**= ಲಯಮಾಡಿಕೊಂಡು **ಸನ್ಮಾತ್ರಂ**= ಸನ್ಮಾತ್ರವಾದ **ಆನಂದಘನಂ**= ಆನಂದಘನವಾದ [ಬ್ರಹ್ಮವನ್ನು] **ವಿಭಾವಯನ್**= ಭಾವಿಸುತ್ತ **ಬಹಿಃ ಅಂತರಂ ವಾ**=

ಹೊರಗೂ ಒಳಗೂ **ಸಮಾಹಿತಃ ಸನ್** = ಸಮಾಹಿತನಾಗಿ **ಕರ್ಮಬಂಧೇ ಸತಿ** = ಪ್ರಾರಬ್ಧಕರ್ಮವು ಇನ್ನೂ ಇದ್ದರೆ **ಕಾಲಂ** = ಕಾಲವನ್ನು **ನಯೇಥಾಃ** = ಕಳೆ.

**೩೧೯.** ಕಾಣುತ್ತಿರುವ ದೃಶ್ಯಜಗತ್ತನ್ನು ಲಯಮಾಡಿಕೊಂಡು ಸನ್ಮಾತ್ರವೂ ಆನಂದಘನವೂ ಆದ ಬ್ರಹ್ಮವನ್ನೇ ಭಾವಿಸುತ್ತ, ಒಳಗೂ ಹೊರಗೂ ಸಮಾಹಿತನಾಗಿ, ಕರ್ಮಬಂಧವು ಇನ್ನೂ ಇದ್ದರೆ ಕಾಲವನ್ನು ಕಳೆ.

[ಒಂದು ವೇಳೆ ಪ್ರಾರಬ್ಧವಶದಿಂದ ಪ್ರಪಂಚವು ತೋರುತ್ತಿದ್ದರೆ ಆಗ ಏನುಮಾಡಬೇಕೆಂದು ಹೇಳಿದೆ.]

## ಪ್ರಮಾದೋ ಬ್ರಹ್ಮನಿಷ್ಠಾಯಾಂ ನ ಕರ್ತವ್ಯಃ ಕದಾಚನ ।
## ಪ್ರಮಾದೋ ಮೃತ್ಯುರಿತ್ಯಾಹ ಭಗವಾನ್ ಬ್ರಹ್ಮಣಃ ಸುತಃ ॥ ೩೨೦ ॥

**ಬ್ರಹ್ಮನಿಷ್ಠಾಯಾಂ** = ಬ್ರಹ್ಮನಿಷ್ಠೆಯಲ್ಲಿ **ಪ್ರಮಾದಃ** = ಅನವಧಾನತೆಯು **ಕದಾಚನ** = ಎಂದಿಗೂ **ನ ಕರ್ತವ್ಯಃ** = ಮಾಡತಕ್ಕದ್ದಲ್ಲ; **ಪ್ರಮಾದಃ** = ಪ್ರಮಾದವೇ **ಮೃತ್ಯುಃ** = ಮೃತ್ಯುವು **ಇತಿ** = ಎಂದು **ಭಗವಾನ್** = ಭಗವಂತನಾದ **ಬ್ರಹ್ಮಣಃ ಸುತಃ** = ಬ್ರಹ್ಮಕುಮಾರನು **ಆಹ** = ಹೇಳುತ್ತಾನೆ.

**೩೨೦.** ಬ್ರಹ್ಮನಿಷ್ಠೆಯಲ್ಲಿ ಎಂದಿಗೂ ಎಚ್ಚರತಪ್ಪಕೂಡದು. 'ಪ್ರಮಾದವೇ ಮೃತ್ಯುವು' ಎಂದು ಭಗವಂತನಾದ ಬ್ರಹ್ಮಕುಮಾರನು ಹೇಳುತ್ತಾನೆ.[೧]

[೧ ಇಲ್ಲಿ ಬ್ರಹ್ಮಕುಮಾರನೆಂದು ಸೂಚಿಸಿರುವುದು ಸನತ್ಕುಮಾರನನ್ನು. ಇವನು ಧೃತರಾಷ್ಟ್ರನಿಗೆ ಮಾಡಿದ ಉಪದೇಶದಲ್ಲಿ 'ಪ್ರಮಾದವನ್ನೇ ಮೃತ್ಯುವೆಂದು ನಾನು ಹೇಳುತ್ತೇನೆ' **ಪ್ರಮಾದಂ ವೈ ಮೃತ್ಯುಮಹಂ ಬ್ರವೀಮಿ** ಎಂಬ ಪ್ರಸಿದ್ಧವಾದ ವಾಕ್ಯವು ಕಂಡುಬರುತ್ತದೆ. ಮಹಾಭಾರತದ ಉದ್ಯೋಗಪರ್ವದ ೪೦-೪೫ ಅಧ್ಯಾಯಗಳನ್ನು ಸನತ್ಸುಜಾತ-ಸಂವಾದವು ಒಳಕೊಂಡಿದೆ.]

## ನ ಪ್ರಮಾದಾದನರ್ಥೋಽನ್ಯೋ ಜ್ಞಾನಿನಃ ಸ್ವಸ್ವರೂಪತಃ ।
## ತತೋ ಮೋಹಸ್ತತೋಽಹಂಧೀಸ್ತತೋ ಬಂಧಸ್ತತೋ ವ್ಯಥಾ ॥ ೩೨೧ ॥

**ಜ್ಞಾನಿನಃ** = ಜ್ಞಾನಿಯಾದವನಿಗೆ **ಸ್ವಸ್ವರೂಪತಃ** = ತನ್ನ ಸ್ವರೂಪದಿಂದ **ಪ್ರಮಾದಾತ್** = ಎಚ್ಚರತಪ್ಪುವುದಕ್ಕಿಂತ **ಅನ್ಯಃ** = ಬೇರೆ **ಅನರ್ಥಃ** = ಕೇಡು **ನ** = ಇರುವುದಿಲ್ಲ; **ತತಃ** = ಅದರಿಂದ **ಮೋಹಃ** = ಮೋಹವೂ **ತತಃ** = ಅದರಿಂದ **ಅಹಂ-ಧೀಃ** = ಅಹಂಕಾರವೂ **ತತಃ** = ಅದರಿಂದ **ಬಂಧಃ** = ಬಂಧವೂ **ತತಃ** = ಅದರಿಂದ **ವ್ಯಥಾ** = ವ್ಯಥೆಯೂ [ಉಂಟಾಗುತ್ತವೆ].

೩೨೧. ಜ್ಞಾನಿಯಾದವನಿಗೆ ತನ್ನ ಸ್ವರೂಪದಲ್ಲಿ ಎಚ್ಚರಿಕೆ ತಪ್ಪುವುದಕ್ಕಿಂತ ಬೇರೆ ಕೇಡಿಲ್ಲ. ಅದರಿಂದಲೇ[೧] ಮೋಹವೂ ಅದರಿಂದಲೇ ಅಹಂಕಾರವೂ ಅದರಿಂದಲೇ ಬಂಧವೂ ಅದರಿಂದಲೇ ವ್ಯಥೆಯೂ ಉಂಟಾಗುವುವು.

[೧ ಪ್ರಮಾದದಿಂದಲೇ.]

**ವಿಷಯಾಭಿಮುಖಂ ದೃಷ್ಟ್ವಾ ವಿದ್ವಾಂಸಮಪಿ ವಿಸ್ಮೃತಿಃ ।**
**ವಿಕ್ಷೇಪಯತಿ ಧೀ-ದೋಷೈರ್ಯೋಷಾ ಜಾರಮಿವ ಪ್ರಿಯಮ್**
**॥ ೩೨೨ ॥**

**ವಿಷಯಾಭಿಮುಖಂ** = ವಿಷಯಗಳ ಕಡೆಗೆ ತಿರುಗಿದವನನ್ನು **ವಿದ್ವಾಂಸಮ್ ಅಪಿ** = ವಿದ್ವಾಂಸನಾಗಿದ್ದರೂ **ವಿಸ್ಮೃತಿಃ** = ಪ್ರಮಾದವು **ಧೀ-ದೋಷೈಃ** = ಬುದ್ಧಿಯ ದೋಷಗಳಿಂದ, **ಜಾರಂ ಪ್ರಿಯಂ** = ಜಾರನಾದ ಪ್ರಿಯನನ್ನು **ಯೋಷಾ ಇವ** = ಹೆಂಗಸು ಹೇಗೋ ಹಾಗೆ, **ವಿಕ್ಷೇಪಯತಿ** = ಕ್ಲೇಶಗೊಳಿಸುತ್ತದೆ.

೩೨೨. ವಿಷಯಾಭಿಲಾಷಿಯು ವಿದ್ವಾಂಸನಾಗಿದ್ದರೂ ಆತ್ಮವಿಸ್ಮೃತಿಯೆಂಬ ಪ್ರಮಾದವು ಬುದ್ಧಿಯ ದೋಷಗಳಿಂದ—ಜಾರನಾದ ಪ್ರಿಯನನ್ನು ಕ್ಲೇಶಪಡಿಸುವ ಹೆಂಗಸಿನಂತೆ— ಅವನನ್ನು ಕ್ಲೇಶಗೊಳಿಸುತ್ತದೆ.

**ಯಥಾಪಕೃಷ್ಟಂ ಶೈವಾಲಂ ಕ್ಷಣಮಾತ್ರಂ ನ ತಿಷ್ಠತಿ ।**
**ಆವೃಣೋತಿ ತಥಾ ಮಾಯಾ ಪ್ರಾಜ್ಞಂ ವಾಪಿ ಪರಾಙ್ಮುಖಮ್**
**॥ ೩೨೩ ॥**

**ಅಪಕೃಷ್ಟಂ** = ಸರಿಸಲ್ಪಟ್ಟ **ಶೈವಾಲಂ** = ಪಾಚಿಯು **ಕ್ಷಣಮಾತ್ರಂ** = ಒಂದು ಕ್ಷಣವೂ **ಯಥಾ** = ಹೇಗೆ **ನ ತಿಷ್ಠತಿ** = ನಿಲ್ಲುವುದಿಲ್ಲವೊ **ತಥಾ** = ಹಾಗೆಯೇ **ಮಾಯಾ** = ಮಾಯೆಯು **ಪರಾಙ್ಮುಖಂ** = ಆತ್ಮವಿಮುಖನಾದವನನ್ನು **ಪ್ರಾಜ್ಞಂ ವಾ ಅಪಿ** = ಪ್ರಾಜ್ಞನಾಗಿದ್ದರೂ **ಆವೃಣೋತಿ** = ಆವರಿಸುತ್ತದೆ.

೩೨೩. ಸರಿಸಲ್ಪಟ್ಟ ಪಾಚಿಯು ಕ್ಷಣಮಾತ್ರವೂ ನಿಲ್ಲದೆ ಹೇಗೆ ನೀರನ್ನು ಮುಚ್ಚಿಕೊಳ್ಳುತ್ತದೆಯೊ ಹಾಗೆಯೇ ಆತ್ಮನಿಷ್ಠೆಯಿಂದ ವಿಮುಖನಾದವನು ಪ್ರಾಜ್ಞನಾಗಿದ್ದರೂ ಅವನನ್ನು ಮಾಯೆಯು ಮುಚ್ಚಿಕೊಳ್ಳುತ್ತದೆ.

**ಲಕ್ಷ್ಯಚ್ಯುತಂ ಚೇದ್ಯದಿ ಚಿತ್ತಮೀಷದ್**
**ಬಹಿರ್ಮುಖಂ ಸನ್ನಿಪತೇತ್ ತತಸ್ತತಃ ।**
**ಪ್ರಮಾದತಃ ಪ್ರಚ್ಯುತ-ಕೇಲಿ-ಕಂದುಕಃ**
**ಸೋಪಾನಪಂಕ್ತೌ ಪತಿತೋ ಯಥಾ ತಥಾ ॥ ೩೨೪ ॥**

**ಯಥಾ**=ಹೇಗೆ **ಪ್ರಮಾದತಃ**=ಪ್ರಮಾದದಿಂದ **ಪ್ರಚ್ಯುತ-ಕೇಲಿ-ಕಂದುಕಃ**=ಜಾರಿದ ಆಟದ ಚೆಂಡು **ಸೋಪಾನ-ಪಂಕ್ತೌ**=ಮೆಟ್ಟಿಲುಗಳ ಸಾಲಿನಲ್ಲಿ **ಪತಿತಃ**=ಬೀಳುವುದೊ **ತಥಾ**=ಹಾಗೆಯೇ **ಚಿತ್ತಂ**=ಚಿತ್ತವು **ಲಕ್ಷ್ಯಚ್ಯುತಂ ಚೇತ್ ಯದಿ**=ತನ್ನ ಗುರಿಯಿಂದ ಚ್ಯುತವಾದರೆ **ಬಹಿರ್ಮುಖಂ**=ಬಹಿರ್ಮುಖವಾಗಿ **ತತಃ ತತಃ**=ಅಲ್ಲಲ್ಲಿ **ಸನ್ನಿಪತೇತ್**=ಬಿದ್ದು ಬಿಡುತ್ತದೆ.

**೩೨೪.** ಪ್ರಮಾದವಶದಿಂದ ಮೆಟ್ಟಿಲುಗಳ ಸಾಲಿನ ಮೇಲೆ ಜಾರಿದ ಆಟದ ಚೆಂಡು ಹೇಗೆ ಕೆಳಕ್ಕೆ ಕೆಳಕ್ಕೆ ಹೋಗುವುದೋ ಹಾಗೆಯೇ ಆತ್ಮನೆಂಬ ಗುರಿಯಿಂದ ಜಾರಿದ ಚಿತ್ತವು ಬಹಿರ್ಮುಖವಾಗಿ ಅಲ್ಲಲ್ಲಿ ಕೆಳಕ್ಕೆ ಬಿದ್ದು ಓಡುತ್ತದೆ.

**ವಿಷಯೇಷ್ವಾವಿಶಚ್ಚೇತಃ ಸಂಕಲ್ಪಯತಿ ತದ್ಗುಣಾನ್ ।**
**ಸಮ್ಯಕ್ ಸಂಕಲ್ಪನಾತ್ ಕಾಮಃ ಕಾಮಾತ್ ಪುಂಸಃ**
**ಪ್ರವರ್ತನಮ್ ॥ ೩೨೫ ॥**

**ವಿಷಯೇಷು**=ವಿಷಯವಸ್ತುಗಳಲ್ಲಿ **ಆವಿಶತ್ ಚೇತಃ**=ಪ್ರವೇಶಿಸುತ್ತಿರುವ ಮನಸ್ಸು **ತತ್-ಗುಣಾನ್**=ಅವುಗಳ ಗುಣಗಳನ್ನು **ಸಂಕಲ್ಪಯತಿ**=ಚಿಂತಿಸುತ್ತದೆ; **ಸಮ್ಯಕ್ ಸಂಕಲ್ಪನಾತ್**=ಚೆನ್ನಾಗಿ ಚಿಂತಿಸುವುದರಿಂದ **ಕಾಮಃ**=ಬಯಕೆಯು [ಉಂಟಾಗುತ್ತದೆ]; **ಕಾಮಾತ್**=ಬಯಕೆಯಿಂದ **ಪುಂಸಃ**=ಮನುಷ್ಯನ **ಪ್ರವರ್ತನಂ**=ಪ್ರವೃತ್ತಿಯು [ಉಂಟಾಗುತ್ತದೆ].

**೩೨೫.** ವಿಷಯವಸ್ತುಗಳಲ್ಲಿ ಪ್ರವೇಶಿಸುತ್ತಿರುವ ಮನಸ್ಸು ಅವುಗಳ ಗುಣಗಳನ್ನು ಚಿಂತಿಸುತ್ತದೆ. ಅವುಗಳನ್ನು ಚೆನ್ನಾಗಿ ಚಿಂತಿಸುವುದರಿಂದ ಅವುಗಳಲ್ಲಿ ಬಯಕೆಯುಂಟಾಗುತ್ತದೆ. ಬಯಕೆಯಿಂದ ಮನುಷ್ಯನು ಕರ್ಮದಲ್ಲಿ ಪ್ರವರ್ತಿಸುತ್ತಾನೆ.

**ತತಃ ಸ್ವರೂಪ-ವಿಭ್ರಂಶೋ ವಿಭ್ರಷ್ಟಸ್ತು ಪತತ್ಯಧಃ ।**
**ಪತಿತಸ್ಯ ವಿನಾ ನಾಶಂ ಪುನರ್ನಾರೋಹ ಈಕ್ಷ್ಯತೇ ।**
**ಸಂಕಲ್ಪಂ ವರ್ಜಯೇತ್ ತಸ್ಮಾತ್ ಸರ್ವಾನರ್ಥಸ್ಯ ಕಾರಣಮ್**
**॥ ೩೨೬ ॥**

**ತತಃ**=ಅದರ ದೆಶೆಯಿಂದ **ಸ್ವರೂಪ-ವಿಭ್ರಂಶಃ**=ಸ್ವರೂಪಚ್ಯುತಿಯು; **ವಿಭ್ರಷ್ಟಃ ತು**=ಭ್ರಷ್ಟನಾದವನು **ಅಧಃ**=ಕೆಳಕ್ಕೆ **ಪತತಿ**=ಬೀಳುತ್ತಾನೆ; **ಪತಿತಸ್ಯ**=ಪತಿತನಾದವನಿಗೆ **ನಾಶಂ ವಿನಾ**=ನಾಶವೇ ಹೊರತು **ಪುನಃ**=ಮತ್ತೆ **ಆರೋಹಃ**=ಅಭಿವೃದ್ಧಿಯು **ನ ಈಕ್ಷ್ಯತೇ**=ಕಂಡುಬರುವುದಿಲ್ಲ; **ತಸ್ಮಾತ್**=ಆದುದರಿಂದ **ಸರ್ವ-ಅನರ್ಥಸ್ಯ**=ಎಲ್ಲ ಅನರ್ಥಗಳಿಗೆ **ಕಾರಣಂ**=ಕಾರಣವಾದ **ಸಂಕಲ್ಪಂ**=ವಿಷಯಚಿಂತನೆಯನ್ನು **ವರ್ಜಯೇತ್**=ಬಿಡಬೇಕು.

**೩೨೬.** ಅದರಿಂದ ಸ್ವರೂಪ-ಚ್ಯುತಿಯು ಉಂಟಾಗುತ್ತದೆ. ಸ್ವರೂಪದಿಂದ ಜಾರಿದವನು ಕೆಳಕ್ಕೆ ಬೀಳುತ್ತಾನೆ. ಕೆಳಕ್ಕೆ ಬಿದ್ದವನು ನಾಶವಾಗುವನೇ ಹೊರತು ಪುನಃ ಅಭಿವೃದ್ಧಿಯನ್ನು ಪಡೆಯುವುದಿಲ್ಲ. ಆದುದರಿಂದ ಎಲ್ಲ ಅನರ್ಥಗಳಿಗೂ ಕಾರಣವಾದ ವಿಷಯಚಿಂತೆಯನ್ನು ಬಿಡಬೇಕು.

[ಗೀತಾ ೨. ೬೨-೬೩ ನೋಡಿ.]

**ಅತಃ ಪ್ರಮಾದಾನ್ನ ಪರೋಽಸ್ತಿ ಮೃತ್ಯು-**
**ರ್ವಿವೇಕಿನೋ ಬ್ರಹ್ಮವಿದಃ ಸಮಾಧೌ ।**
**ಸಮಾಹಿತಃ ಸಿದ್ಧಿಮುಪೈತಿ ಸಮ್ಯಕ್**
**ಸಮಾಹಿತಾತ್ಮಾ ಭವ ಸಾವಧಾನಃ ॥ ೩೨೭ ॥**

**ಅತಃ** = ಆದುದರಿಂದ **ವಿವೇಕಿನಃ** = ವಿವೇಕಿಯಾದ **ಬ್ರಹ್ಮವಿದಃ** = ಬ್ರಹ್ಮಜ್ಞಾನಿಗೆ **ಸಮಾಧೌ** = ಸಮಾಧಿಯಲ್ಲಿ **ಪ್ರಮಾದಾತ್** = ಎಚ್ಚರಿಕೆ ತಪ್ಪುವುದಕ್ಕಿಂತ **ಪರಃ** = ಬೇರೊಂದು **ಮೃತ್ಯುಃ** = ಮೃತ್ಯುವು **ನ ಅಸ್ತಿ** = ಇಲ್ಲವು; **ಸಮ್ಯಕ್** = ಚೆನ್ನಾಗಿ **ಸಮಾಹಿತಃ** = ಸಮಾಹಿತನಾದವನೇ **ಸಿದ್ಧಿಂ** = ಸಿದ್ಧಿಯನ್ನು **ಉಪೈತಿ** = ಹೊಂದುತ್ತಾನೆ; [ಆದುದರಿಂದ] **ಸಾವಧಾನಃ** = ಎಚ್ಚರಿಕೆಯುಳ್ಳವನಾಗಿ **ಸಮಾಹಿತಾತ್ಮಾ** ಸಮಾಹಿತವಾದ ಚಿತ್ತವುಳ್ಳವನಾಗು.

**೩೨೭.** ಆದುದರಿಂದ ವಿವೇಕಿಯಾದ ಬ್ರಹ್ಮಜ್ಞಾನಿಗೆ ಸಮಾಧಿಯಲ್ಲಿ ಎಚ್ಚರಿಕೆ ತಪ್ಪುವುದಕ್ಕಿಂತ ಬೇರೊಂದು ಮೃತ್ಯುವಿರುವುದಿಲ್ಲ. ಚೆನ್ನಾಗಿ ಸಮಾಹಿತನಾದವನೇ ಸಿದ್ಧಿಯನ್ನು ಹೊಂದುತ್ತಾನೆ. ಆದುದರಿಂದ ಎಚ್ಚರಿಕೆಯಿಂದ ಮನಸ್ಸನ್ನು ಸಮಾಧಿಯಲ್ಲಿಡು.

**ಜೀವತೋ ಯಸ್ಯ ಕೈವಲ್ಯಂ ವಿದೇಹೇ ಸ ಚ ಕೇವಲಃ ।**
**ಯತ್ಕಿಂಚಿತ್ಪಶ್ಯತೋ ಭೇದಂ ಭಯಂ ಬ್ರೂತೇ ಯಜುಃಶ್ರುತಿಃ**
**॥ ೩೨೮ ॥**

**ಜೀವತಃ** = ಬದುಕಿರುವ **ಯಸ್ಯ** = ಯಾವನಿಗೆ **ಕೈವಲ್ಯಂ** = ಕೈವಲ್ಯವು [ಆಗಿರುವುದೊ] **ವಿದೇಹೇ ಚ** = ದೇಹಾನಂತರದಲ್ಲಿಯೂ **ಸಃ** = ಅವನು **ಕೇವಲಃ** = ಕೇವಲನು; **ಯತ್ ಕಿಂಚಿತ್ ಭೇದಂ** = ಸ್ವಲ್ಪ ಭೇದವನ್ನೂ **ಪಶ್ಯತಃ** = ನೋಡುವವನಿಗೆ **ಭಯಂ** = ಭಯವನ್ನು **ಯಜುಃಶ್ರುತಿಃ ಬ್ರೂತೇ** = ಯಜುರ್ವೇದ-ಶ್ರುತಿಯು ಹೇಳುತ್ತದೆ.

**೩೨೮.** ಬದುಕಿರುವಾಗ ಯಾವನಿಗೆ ಕೈವಲ್ಯವುಂಟಾಗಿರುವುದೊ ಅವನಿಗೇ ದೇಹಾನಂತರದಲ್ಲಿಯೂ ಕೈವಲ್ಯವುಂಟಾಗುತ್ತದೆ. ಸ್ವಲ್ಪ ಭೇದವನ್ನು

ನೋಡುವವನಿಗೂ ಭಯವಿದೆ— ಎಂದು ಯಜುರ್ವೇದದ ಶ್ರುತಿಯು ಹೇಳುತ್ತದೆ.[೧]

[೧ 'ಯಾವಾಗ ಇವನು ಈ ಬ್ರಹ್ಮದಲ್ಲಿ ಒಂದಿಷ್ಟು ಭೇದವನ್ನು ಮಾಡುತ್ತಾನೆಯೊ ಅದರಿಂದ ಅವನಿಗೆ ಭಯವಾಗುತ್ತದೆ' **ಯದಾ ಹ್ಯೇವೈಷ ಏತಸ್ಮಿನ್ನುದರಮಂತರಂ ಕುರುತೇ ಅಥ ತಸ್ಯ ಭಯಂ ಭವತಿ** (ತೈತ್ತಿರೀಯ ಉ. ೨. ೭).]

**ಯದಾ ಕದಾ ವಾಽಪಿ ವಿಪಶ್ಚಿದೇಷ**
**ಬ್ರಹ್ಮಣ್ಯನಂತೇಽಪ್ಯಣುಮಾತ್ರಭೇದಮ್ ।**
**ಪಶ್ಯತ್ಯಥಾಮುಷ್ಯ ಭಯಂ ತದೈವ**
**ಯದ್ವೀಕ್ಷಿತಂ ಭಿನ್ನತಯಾ ಪ್ರಮಾದಾತ್ ॥ ೩೨೯ ॥**

**ಯದಾ ಕದಾ ವಾ ಅಪಿ** = ಯಾವಾಗಲೇ ಆಗಲಿ **ಏಷಃ ವಿಪಶ್ಚಿತ್** = ಈ ಜ್ಞಾನಿಯು **ಅನಂತೇ**–ಅನಂತವಾದ **ಬ್ರಹ್ಮಣಿ**= ಬ್ರಹ್ಮದಲ್ಲಿ **ಅಣುಮಾತ್ರಭೇದಮ್ ಅಪಿ** = ಸ್ವಲ್ಪ ಭೇದವನ್ನಾದರೂ **ಪಶ್ಯತಿ** = ನೋಡಿದರೆ **ಅಥ** = ಅನಂತರ **ಪ್ರಮಾದಾತ್** = ಪ್ರಮಾದದ ಮೂಲಕ **ಭಿನ್ನತಯಾ** = ಭಿನ್ನವಾಗಿ **ಯತ್ ವೀಕ್ಷಿತಂ** = ಯಾವುದು ನೋಡಲ್ಪಟ್ಟಿತೊ [ಅದು] **ತದಾ ಏವ**= ಆಗಲೇ **ಅಮುಷ್ಯ** = ಇವನಿಗೆ **ಭಯಂ** = ಭಯವನ್ನು [ಉಂಟುಮಾಡುತ್ತದೆ].

**೩೨೯.** ಯಾವಾಗಲೇ ಆಗಲಿ ಈ ಜ್ಞಾನಿಯು ಅನಂತವಾದ ಬ್ರಹ್ಮದಲ್ಲಿ ಸ್ವಲ್ಪ ಭೇದವನ್ನಾದರೂ ನೋಡಿದರೆ, ಪ್ರಮಾದದಿಂದ ಭಿನ್ನವಾಗಿ ಕಂಡ ಅದು ಆಗಲೇ ಆ ಭೇದದರ್ಶಿಗೆ ಭಯವನ್ನುಂಟುಮಾಡುತ್ತದೆ.

**ಶ್ರುತಿ-ಸ್ಮೃತಿ-ನ್ಯಾಯ-ಶತೈರ್ನಿಷಿದ್ಧೇ**
**ದೃಶ್ಯೇಽತ್ರ ಯಃ ಸ್ವಾತ್ಮಮತಿಂ ಕರೋತಿ ।**
**ಉಪೈತಿ ದುಃಖೋಪರಿ ದುಃಖಜಾತಂ**
**ನಿಷಿದ್ಧಕರ್ತಾ ಸ ಮಲಿಮ್ಲುಚೋ ಯಥಾ ॥ ೩೩೦ ॥**

**ಶ್ರುತಿ-ಸ್ಮೃತಿ-ನ್ಯಾಯ-ಶತೈಃ** = ಶ್ರುತಿ ಸ್ಮೃತಿ ನೂರಾರು ಯುಕ್ತಿಗಳು— ಇವುಗಳಿಂದ **ನಿಷಿದ್ಧೇ** = ನಿಷೇಧಿಸಲ್ಪಟ್ಟ **ಅತ್ರ ದೃಶ್ಯೇ** = ಈ ದೃಶ್ಯ ಪ್ರಪಂಚದಲ್ಲಿ **ಯಃ** = ಯಾವನು **ಸ್ವ-ಆತ್ಮ-ಮತಿಂ** = ನಾನು ಎಂಬ ಬುದ್ಧಿಯನ್ನು **ಕರೋತಿ** = ಮಾಡುತ್ತಾನೆಯೊ **ಸಃ** = ಅವನು, **ನಿಷಿದ್ಧಕರ್ತಾ** = ಮಾಡಬಾರದ್ದನ್ನು ಮಾಡುವ **ಮಲಿಮ್ಲುಚಃ ಯಥಾ** = ಕಳ್ಳನು ಹೇಗೋ ಹಾಗೆ, **ದುಃಖ-ಉಪರಿ ದುಃಖ-ಜಾತಂ** = ದುಃಖಗಳ ಮೇಲೆ ದುಃಖಸಮೂಹವನ್ನು **ಉಪೈತಿ** = ಹೊಂದುತ್ತಾನೆ.

೩೩೦. ಶ್ರುತಿ, ಸ್ಮೃತಿ ಮತ್ತು ನೂರಾರು ಯುಕ್ತಿಗಳು ನಿಷೇಧಿಸಿರುವ ಈ ದೃಶ್ಯಜಗತ್ತಿನಲ್ಲಿ ಯಾವನು 'ನಾನು' ಎಂಬ ಬುದ್ಧಿಯನ್ನು ಮಾಡುತ್ತಾನೆಯೊ ಅವನು—ಮಾಡಬಾರದ್ದನ್ನು ಮಾಡುವ ಕಳ್ಳನಂತೆ—ದುಃಖಗಳ ಮೇಲೆ ದುಃಖವನ್ನು ಹೊಂದುತ್ತಾನೆ.

**ಸತ್ಯಾಭಿಸಂಧಾನರತೋ ವಿಮುಕ್ತೋ**
**ಮಹತ್ತ್ವಮಾತ್ಮೀಯಮುಪೈತಿ ನಿತ್ಯಮ್ ।**
**ಮಿಥ್ಯಾಭಿಸಂಧಾನರತಸ್ತು ನಶ್ಯೇದ್**
**ದೃಷ್ಟಂ ತದೇತದಚೋರ-ಚೋರಯೋಃ ॥ ೩೩೧ ॥**

**ಸತ್ಯ-ಅಭಿಸಂಧಾನ-ರತಃ** = ಸತ್ಯಬ್ರಹ್ಮವನ್ನು ಅನುಸಂಧಾನಮಾಡುತ್ತಿರುವವನು **ವಿಮುಕ್ತಃ** = ಮುಕ್ತನಾಗಿ **ಆತ್ಮೀಯಂ** = ತನ್ನ **ನಿತ್ಯಂ** = ಶಾಶ್ವತವಾದ **ಮಹತ್ತ್ವಂ** = ಮಹಿಮೆಯನ್ನು **ಉಪೈತಿ** = ಹೊಂದುತ್ತಾನೆ; **ತು** = ಆದರೆ **ಮಿಥ್ಯಾ-ಅಭಿಸಂಧಾನ-ರತಃ** = ಮಿಥ್ಯಾವಸ್ತುವನ್ನೇ ಅನುಸಂಧಾನಮಾಡುತ್ತಿರುವವನು **ನಶ್ಯೇತ್** = ನಾಶವಾಗುತ್ತಾನೆ; **ಯತ್** = ಏಕೆಂದರೆ, **ತತ್ ಏತತ್** = ಆ ಇದು **ಅಚೋರ-ಚೋರಯೋಃ** = ಚೋರನು ಚೋರನಲ್ಲದವನು—ಇವರ ವಿಷಯದಲ್ಲಿ **ದೃಷ್ಟಂ** = ನೋಡಲ್ಪಟ್ಟಿದೆ.

೩೩೧. ಯಾವನು ಸತ್ಯಬ್ರಹ್ಮವನ್ನೇ ಅನುಸಂಧಾನಮಾಡುತ್ತಿರುವನೊ ಅವನು (ಸಂಸಾರದಿಂದ) ಬಿಡುಗಡೆಯನ್ನು ಹೊಂದಿದವನಾಗಿ ತನ್ನ ಶಾಶ್ವತವಾದ ಮಹಿಮೆಯನ್ನು ಹೊಂದುತ್ತಾನೆ; ಆದರೆ ಯಾವನು ಮಿಥ್ಯಾರೂಪವಾಗಿರುವ (ದೇಹಾದಿಗಳನ್ನೇ ಆತ್ಮವಸ್ತುವೆಂದು) ಅನುಸಂಧಾನಮಾಡುತ್ತಾನೆಯೊ ಅವನು ನಾಶವಾಗುತ್ತಾನೆ. ಆ ಇದು ಚೋರನು ಚೋರನಲ್ಲದವನು—ಇವರ ವಿಷಯದಲ್ಲಿ ನೋಡಲ್ಪಟ್ಟಿದೆ.[೧]

[[೧] ಹಿಂದಿನ ಕಾಲದಲ್ಲಿ ಒಂದು ಕೊಡಲಿಯನ್ನು ಕಾಯಿಸಿ ಅದನ್ನು ಆಪಾದಿತನು ಮುಟ್ಟುವ ಹಾಗೆ ಮಾಡುತ್ತಿದ್ದರು; ಅವನ ಕೈಸುಡದಿದ್ದರೆ ಅವನು ನಿರಪರಾಧಿಯೆಂದೂ ಸುಟ್ಟರೆ ಅಪರಾಧಿಯೆಂದೂ ನಿರ್ಧರಿಸುತ್ತಿದ್ದರು. ಇದು ಛಾಂದೋಗ್ಯೋಪನಿಷತ್ತಿನ ೬. ೧೬ರಲ್ಲಿ ಬರುವ ಅಗ್ನಿಪರೀಕ್ಷೆಯನ್ನು ಸೂಚಿಸುತ್ತದೆ.]

**ಯತಿರಸದನುಸಂಧಿಂ ಬಂಧಹೇತುಂ ವಿಹಾಯ**
**ಸ್ವಯಮಯಮಹಮಸ್ಮೀತ್ಯಾತ್ಮದೃಷ್ಟ್ಯೈವ ತಿಷ್ಠೇತ್ ।**
**ಸುಖಯತಿ ನನು ನಿಷ್ಠಾ ಬ್ರಹ್ಮಣಿ ಸ್ವಾನುಭೂತ್ಯಾ**
**ಹರತಿ ಪರಮವಿದ್ಯಾಕಾರ್ಯದುಃಖಂ ಪ್ರತೀತಮ್ ॥ ೩೩೨ ॥**

**ಯತಿಃ** = ಯತ್ನಶೀಲನು **ಬಂಧಹೇತುಂ** = ಬಂಧಕ್ಕೆ ಕಾರಣವಾದ **ಅಸತ್-ಅನುಸಂಧಿಂ**=ಅಸತ್ತಿನ ಅನುಸಂಧಾನವನ್ನು **ವಿಹಾಯ**=ತೊರೆದು **ಅಯಂ**=ಇವನು **ಸ್ವಯಮ್ ಅಹಂ**=ನಾನೇ **ಅಸ್ಮಿ**=ಆಗಿರುವೆನು **ಇತಿ**=ಎಂದು **ಆತ್ಮದೃಷ್ಟ್ಯಾ ಏವ**=ಆತ್ಮದೃಷ್ಟಿಯಿಂದಲೇ **ತಿಷ್ಠೇತ್** = ನಿಲ್ಲಬೇಕು; **ಸ್ವಾನುಭೂತ್ಯಾ**=ಆತ್ಮಾನುಭವದಿಂದ **ಬ್ರಹ್ಮಣಿ**= ಬ್ರಹ್ಮದಲ್ಲಿ **ನಿಷ್ಠಾ** = ನಿಷ್ಠೆಯು **ಸುಖಯತಿ** = ಸುಖವನ್ನು ಕೊಡುತ್ತದೆ, **ಪ್ರತೀತಂ** = ತೋರಿಬರುತ್ತಿರುವ **ಅವಿದ್ಯಾ-ಕಾರ್ಯ-ದುಃಖಂ** = ಅವಿದ್ಯಾಕಾರ್ಯವಾದ ದುಃಖವನ್ನು **ಪರಂ ಹರತಿ** = ಅತ್ಯಂತವಾಗಿ ಹೋಗಲಾಡಿಸುತ್ತದೆ.

೩೩೨. ಪ್ರಯತ್ನಶೀಲನಾದವನು ಬಂಧಕ್ಕೆ ಕಾರಣವಾದ ಅಸದ್ವಸ್ತುವಿನ ಅನುಸಂಧಾನವನ್ನು ತೊರೆದು, 'ನಾನೇ ಇವನಾಗಿರುತ್ತೇನೆ' ಎಂದು ಆತ್ಮದೃಷ್ಟಿಯಿಂದಲೇ ನಿಲ್ಲಬೇಕು. ಆತ್ಮಾನುಭವದಿಂದ ಬ್ರಹ್ಮದಲ್ಲಿಯೇ ನಿಷ್ಠೆಯನ್ನು ಹೊಂದುವುದು ಸುಖಗೊಳಿಸುತ್ತದೆ ಮತ್ತು ಅವಿದ್ಯೆಯ ಕಾರ್ಯವಾಗಿ ತೋರಿಬರುತ್ತಿರುವ ದುಃಖವನ್ನೂ ಆತ್ಯಂತಿಕವಾಗಿ ಹೋಗಲಾಡಿಸುತ್ತದೆ.

**ಬಾಹ್ಯಾನುಸಂಧಿಃ ಪರಿವರ್ಧಯೇತ್ ಫಲಂ**
**ದುರ್ವಾಸನಾಮೇವ ತತಸ್ತತೋಽಧಿಕಾಮ್ ।**
**ಜ್ಞಾತ್ವಾ ವಿವೇಕೈಃ ಪರಿಹೃತ್ಯ ಬಾಹ್ಯಂ**
**ಸ್ವಾತ್ಮಾನುಸಂಧಿಂ ವಿದಧೀತ ನಿತ್ಯಮ್ ॥ ೩೩೩ ॥**

**ಬಾಹ್ಯ-ಅನುಸಂಧಿಃ** = ವಿಷಯಚಿಂತನೆಯು **ತತಃ ತತಃ** = ಪುನಃ ಪುನಃ **ಅಧಿಕಾಂ** = ಅಧಿಕವಾಗುವ **ದುರ್ವಾಸನಾಂ** = ಮಲಿನವಾಸನೆಯೆಂಬ **ಫಲಮ್ ಏವ**=ಫಲವನ್ನೇ **ಪರಿವರ್ಧಯೇತ್** = ಬೆಳೆಯಿಸುತ್ತದೆ; [ಯತಿಯು] **ಜ್ಞಾತ್ವಾ** = [ಇದನ್ನು] ಅರಿತುಕೊಂಡು **ವಿವೇಕೈಃ**=ವಿವೇಚನೆಗಳಿಂದ **ಬಾಹ್ಯಂ**=ವಿಷಯಚಿಂತನೆಯನ್ನು **ಪರಿಹೃತ್ಯ**=ತೊರೆದು **ಸ್ವ-ಆತ್ಮ-ಅನುಸಂಧಿಂ**=ಆತ್ಮಚಿಂತನೆಯನ್ನು **ನಿತ್ಯಂ**=ಯಾವಾಗಲೂ **ವಿದಧೀತ** = ಮಾಡಬೇಕು.

೩೩೩. ವಿಷಯಚಿಂತನೆಯು ಪುನಃಪುನಃ ಹೆಚ್ಚಾಗುವ ಮಲಿನವಾಸನೆಯೆಂಬ ಫಲವನ್ನೇ ಬೆಳೆಯಿಸುತ್ತದೆ. (ಯತಿಯು) ಇದನ್ನು[೧] ಅರಿತುಕೊಂಡು ವಿವೇಚನೆಯಿಂದ ವಿಷಯಚಿಂತನೆಯನ್ನು ತೊರೆದು ಆತ್ಮಚಿಂತನೆಯನ್ನೇ ಯಾವಾಗಲೂ ಮಾಡಬೇಕು.

[[೧] 'ವಾಸನಾವೃದ್ಧಿಯಿಂದ ಕರ್ಮವೂ ಕರ್ಮವೃದ್ಧಿಯಿಂದ ವಾಸನೆಯೂ ಬೆಳೆಯುವುದು' (೩೧೨). ]

**ಬಾಹ್ಯೇ ನಿರುದ್ಧೇ ಮನಸಃ ಪ್ರಸನ್ನತಾ**
**ಮನಃಪ್ರಸಾದೇ ಪರಮಾತ್ಮದರ್ಶನಮ್ ।**
**ತಸ್ಮಿನ್ ಸುದೃಷ್ಟೇ ಭವಬಂಧನಾಶೋ**
**ಬಹಿರ್ನಿರೋಧಃ ಪದವೀ ವಿಮುಕ್ತೇಃ ॥ ೩೩೪ ॥**

**ಬಾಹ್ಯೇ ನಿರುದ್ಧೇ** [ಸತಿ]= ವಿಷಯಚಿಂತನೆಯು ನಿರುದ್ಧವಾದರೆ **ಮನಸಃ**= ಮನಸ್ಸಿನ **ಪ್ರಸನ್ನತಾ**= ಪ್ರಸನ್ನತೆಯು; **ಮನಃಪ್ರಸಾದೇ**= ಮನಸ್ಸು ಪ್ರಸನ್ನವಾದರೆ **ಪರಮಾತ್ಮದರ್ಶನಂ**= ಪರಮಾತ್ಮಸಾಕ್ಷಾತ್ಕಾರವು; **ತಸ್ಮಿನ್ ಸುದೃಷ್ಟೇ**= ಪರಮಾತ್ಮನನ್ನು ಚೆನ್ನಾಗಿ ಸಾಕ್ಷಾತ್ಕರಿಸಿದರೆ **ಭವಬಂಧನಾಶಃ**= ಭವಬಂಧದ ನಾಶವು; [ಆದುದರಿಂದ] **ಬಹಿರ್ನಿರೋಧಃ**= ವಿಷಯಚಿಂತಾನಿರೋಧವೇ **ವಿಮುಕ್ತೇಃ**= ಮುಕ್ತಿಗೆ **ಪದವೀ**= ಮಾರ್ಗವು.

**೩೩೪.** ವಿಷಯಚಿಂತನೆಯ ನಿರೋಧದಿಂದ ಮನಸ್ಸಿನ ಪ್ರಸನ್ನತೆಯೂ, ಮನಸ್ಸಿನ ಪ್ರಸನ್ನತೆಯಿಂದ[೧] ಪರಮಾತ್ಮನ ಸಾಕ್ಷಾತ್ಕಾರವೂ ಉಂಟಾಗುತ್ತದೆ. ಆ ಪರಮಾತ್ಮನನ್ನು ಚೆನ್ನಾಗಿ ಸಾಕ್ಷಾತ್ಕರಿಸಿದರೆ ಸಂಸಾರಬಂಧವು ನಾಶವಾಗುತ್ತದೆ. ಆದುದರಿಂದ ವಿಷಯಚಿಂತನೆಯ ನಿರೋಧವೇ ಮುಕ್ತಿಗೆ ಮಾರ್ಗವು.

[೧ 'ಚಿತ್ತದ ಪ್ರಸನ್ನತೆಯುಂಟಾದರೆ ಇವನ ಸಮಸ್ತದುಃಖಗಳೂ ನಾಶವಾಗುತ್ತವೆ; ಏಕೆಂದರೆ ಪ್ರಸನ್ನಚಿತ್ತವುಳ್ಳ ಮನುಷ್ಯನ ಬುದ್ಧಿಯು ಶೀಘ್ರವಾಗಿ ಸ್ಥಿರವಾಗುವುದು' **ಪ್ರಸಾದೇ ಸರ್ವದುಃಖಾನಾಂ ಹಾನಿರಸ್ಯೋಪಜಾಯತೇ । ಪ್ರಸನ್ನಚೇತಸೋ ಹ್ಯಾಶು ಬುದ್ಧಿಃ ಪರ್ಯವತಿಷ್ಠತೇ॥** (ಗೀತಾ ೨. ೬೫). ]

**ಕಃ ಪಂಡಿತಃ ಸನ್ ಸದಸದ್ವಿವೇಕೀ**
**ಶ್ರುತಿಪ್ರಮಾಣಃ ಪರಮಾರ್ಥದರ್ಶೀ ।**
**ಜಾನನ್ ಹಿ ಕುರ್ಯಾದಸತೋಽವಲಂಬಂ**
**ಸ್ವಪಾತಹೇತೋಃ ಶಿಶುವನ್ಮುಮುಕ್ಷುಃ ॥ ೩೩೫ ॥**

**ಕಃ**= ಯಾವ **ಮುಮುಕ್ಷುಃ**= ಮುಮುಕ್ಷುವು **ಪಂಡಿತಃ ಸನ್**= ಪಂಡಿತನಾಗಿ **ಸತ್-ಅಸತ್-ವಿವೇಕೀ**= ಇದು ಸತ್, ಇದು ಅಸತ್ ಎಂಬ ವಿವೇಚನೆಯುಳ್ಳವನಾಗಿ **ಶ್ರುತಿಪ್ರಮಾಣಃ**= ಶ್ರುತಿಯೇ ಪ್ರಮಾಣವೆಂದು ನಂಬಿದವನಾಗಿ **ಪರಮಾರ್ಥದರ್ಶೀ**= ಪರಮಾರ್ಥದರ್ಶಿಯಾಗಿ **ಜಾನನ್ ಹಿ**= ತಿಳಿದಿದ್ದರೂ **ಶಿಶುವತ್**= ಮಗುವಿನಂತೆ **ಸ್ವಪಾತಹೇತೋಃ**= ತನ್ನ ಪತನಕ್ಕೆ ಕಾರಣವಾದ **ಅಸತಃ**= ಅಸದ್ವಸ್ತುವಿನ **ಅವಲಂಬಂ**= ಆಶ್ರಯವನ್ನು **ಕುರ್ಯಾತ್**= ಮಾಡಿಯಾನು?

**೩೩೫.** ಪಂಡಿತನೂ ಸದಸದ್ವಿವೇಕಿಯೂ ಶ್ರುತಿಪ್ರಮಾಣವನ್ನು ನಂಬಿರುವವನೂ ಪರಮಾರ್ಥದರ್ಶಿಯೂ ಆದ ಯಾವ ಮುಮುಕ್ಷುವು ತಾನೇ ತಿಳಿದೂ ತಿಳಿದೂ—ಮಗುವಿನಂತೆ—ತನ್ನ ಪತನಕ್ಕೆ ಕಾರಣವಾದ ಅಸದ್ವಸ್ತುವನ್ನು ಆಶ್ರಯಿಸಿಯಾನು?

**ದೇಹಾದಿ-ಸಂಸಕ್ತಿಮತೋ ನ ಮುಕ್ತಿ-**
**ರ್ಮುಕ್ತಸ್ಯ ದೇಹಾದ್ಯಭಿಮತ್ಯಭಾವಃ ।**
**ಸುಪ್ತಸ್ಯ ನೋ ಜಾಗರಣಂ ನ ಜಾಗ್ರತಃ**
**ಸ್ವಪ್ನಸ್ತಯೋರ್ಭಿನ್ನ-ಗುಣಾಶ್ರಯತ್ವಾತ್ ॥ ೩೩೬ ॥**

**ದೇಹಾದಿ-ಸಂಸಕ್ತಿಮತಃ**=ಶರೀರಾದಿಗಳಲ್ಲಿ ಅಭಿಮಾನವುಳ್ಳವನಿಗೆ **ಮುಕ್ತಿಃ ನ**=ಮುಕ್ತಿಯಿಲ್ಲ; **ಮುಕ್ತಸ್ಯ**=ಮುಕ್ತನಿಗೆ **ದೇಹಾದಿ-ಅಭಿಮತಿ-ಅಭಾವಃ**=ಶರೀರಾದಿಗಳಲ್ಲಿ ಅಭಿಮಾನವಿರುವುದಿಲ್ಲ; **ಸುಪ್ತಸ್ಯ**=ನಿದ್ರಿಸುತ್ತಿರುವವನಿಗೆ **ನ ಉ ಜಾಗರಣಂ**=ಎಚ್ಚರವಿಲ್ಲ, **ಜಾಗ್ರತಃ**=ಎಚ್ಚರದಲ್ಲಿರುವವನಿಗೆ **ಸ್ವಪ್ನಃ ನ**=ನಿದ್ರೆಯಿಲ್ಲ; **ತಯೋಃ**=ಈ ಅವಸ್ಥೆಗಳೆರಡೂ **ಭಿನ್ನ-ಗುಣ-ಆಶ್ರಯತ್ವಾತ್**=ಪರಸ್ಪರ ವಿರುದ್ಧವಾದ ಗುಣಗಳನ್ನು ಆಶ್ರಯಿಸಿರುವುದರಿಂದ.

**೩೩೬.** ಶರೀರಾದಿಗಳಲ್ಲಿ ಅಭಿಮಾನವುಳ್ಳವನಿಗೆ ಮುಕ್ತಿಯಿಲ್ಲ, ಮುಕ್ತನಾದವನಿಗೆ ಶರೀರಾದಿಗಳಲ್ಲಿ ಅಭಿಮಾನವಿರುವುದಿಲ್ಲ. ನಿದ್ರಿಸುತ್ತಿರುವವನಿಗೆ ಎಚ್ಚರವಿಲ್ಲ, ಎಚ್ಚರದಲ್ಲಿರುವವನಿಗೆ ನಿದ್ರೆಯಿಲ್ಲ; ಏಕೆಂದರೆ ಈ ಅವಸ್ಥೆಗಳು ಪರಸ್ಪರ ವಿರುದ್ಧಗುಣಗಳನ್ನು ಆಶ್ರಯಿಸಿರುತ್ತವೆ.

**ಅಂತರ್ಬಹಿಃ ಸ್ವಂ ಸ್ಥಿರಜಂಗಮೇಷು**
**ಜ್ಞಾತ್ವಾಽತ್ಮನಾಽಧಾರತಯಾ ವಿಲೋಕ್ಯ ।**
**ತ್ಯಕ್ತಾಖಿಲೋಪಾಧಿರಖಂಡರೂಪಃ**
**ಪೂರ್ಣಾತ್ಮನಾ ಯಃ ಸ್ಥಿತ ಏಷ ಮುಕ್ತಃ ॥ ೩೩೭ ॥**

**ಸ್ಥಿರ-ಜಂಗಮೇಷು**=ಸ್ಥಾವರ-ಜಂಗಮಗಳಲ್ಲಿ **ಅಂತಃ**=ಒಳಗೂ **ಬಹಿಃ**=ಹೊರಗೂ **ಸ್ವಂ**=ತನ್ನ ಆತ್ಮನನ್ನೇ **ಜ್ಞಾತ್ವಾ**=ತಿಳಿದು, **ಆತ್ಮನಾ**=ತನ್ನ ಮೂಲಕವೇ **ಆಧಾರತಯಾ**=ಆಧಾರಭಾವದಿಂದಲೇ **ವಿಲೋಕ್ಯ**=ತಿಳಿದು **ತ್ಯಕ್ತ-ಅಖಿಲ-ಉಪಾಧಿಃ**=ಸಮಸ್ತ ಉಪಾಧಿಗಳನ್ನು ಬಿಟ್ಟವನಾಗಿ **ಅಖಂಡರೂಪಃ**=ಪರಿಪೂರ್ಣಸ್ವರೂಪನಾಗಿ **ಪೂರ್ಣಾತ್ಮನಾ**=ಸರ್ವಾತ್ಮಸ್ವರೂಪದಿಂದ **ಯಃ**=ಯಾವನು **ಸ್ಥಿತಃ**=ಇರುವನೊ **ಏಷಃ**=ಇವನೇ **ಮುಕ್ತಃ**=ಮುಕ್ತನು.

**೩೩೭.** ಸ್ಥಾವರ-ಜಂಗಮಗಳಲ್ಲೆಲ್ಲ ಒಳಗೂ ಹೊರಗೂ ತನ್ನ ಆತ್ಮನನ್ನೇ ತಿಳಿದುಕೊಂಡು, ಆತ್ಮನನ್ನೇ ಅವುಗಳ ಆಧಾರವೆಂದು ಅರಿತುಕೊಂಡು, ಸಮಸ್ತ ಉಪಾಧಿಗಳನ್ನೂ ಬಿಟ್ಟವನಾಗಿ, ಪರಿಪೂರ್ಣಸ್ವರೂಪನಾಗಿಯೂ ಸರ್ವಾತ್ಮಸ್ವರೂಪದಿಂದಲೂ ಯಾವನು ಇರುವನೊ ಅವನೇ ಮುಕ್ತನು.

**ಸರ್ವಾತ್ಮನಾ ಬಂಧವಿಮುಕ್ತಿಹೇತುಃ**
**ಸರ್ವಾತ್ಮಭಾವಾನ್ನ ಪರೋಽಸ್ತಿ ಕಶ್ಚಿತ್ ।**
**ದೃಶ್ಯಾಗ್ರಹೇ ಸತ್ಯುಪಪದ್ಯತೇಽಸೌ**
**ಸರ್ವಾತ್ಮಭಾವೋಽಸ್ಯ ಸದಾಽಽತ್ಮನಿಷ್ಠಯಾ ॥ ೩೩೮ ॥**

**ಸರ್ವಾತ್ಮನಾ** = ಹೇಗೆ ನೋಡಿದರೂ **ಸರ್ವಾತ್ಮಭಾವಾತ್** = ಸರ್ವಾತ್ಮಭಾವಕ್ಕಿಂತ **ಪರಃ** = ಬೇರೆಯಾದ **ಕಶ್ಚಿತ್** = ಯಾವುದೊಂದೂ **ಬಂಧವಿಮುಕ್ತಿಹೇತುಃ ನ** = ಬಂಧವಿಮುಕ್ತಿಗೆ ಕಾರಣವಾಗಲಾರದು; **ಅಸ್ಯ** = ಇವನಿಗೆ **ಅಸೌ ಸರ್ವಾತ್ಮಭಾವಃ** = ಈ ಸರ್ವಾತ್ಮಭಾವವು **ಸದಾ** = ಯಾವಾಗಲೂ **ಆತ್ಮನಿಷ್ಠಯಾ** = ಆತ್ಮನಿಷ್ಠೆಯ ಮೂಲಕ **ದೃಶ್ಯ-ಅಗ್ರಹೇ ಸತಿ** = ದೃಶ್ಯವನ್ನು ಗ್ರಹಿಸದಿದ್ದಾಗ **ಉಪಪದ್ಯತೇ** = ಉಂಟಾಗುತ್ತದ.

**೩೩೮.** ಸಂಸಾರಬಂಧದಿಂದ ಮುಕ್ತನಾಗುವುದಕ್ಕೆ ಸರ್ವಾತ್ಮಭಾವಕ್ಕಿಂತ ಬೇರೆ ಯಾವ ಕಾರಣವೂ ಸರ್ವಪ್ರಕಾರದಿಂದಲೂ ಇರುವುದಿಲ್ಲ. ಇವನಿಗೆ ಈ ಸರ್ವಾತ್ಮಭಾವವು ಸದಾ ಆತ್ಮನಿಷ್ಠೆಯ ಮೂಲಕ ದೃಶ್ಯಜಗತ್ತನ್ನು ಗ್ರಹಿಸದಿದ್ದಾಗ ಉಂಟಾಗುತ್ತದೆ.

**ದೃಶ್ಯಸ್ಯಾಗ್ರಹಣಂ ಕಥಂ ನು ಘಟತೇ ದೇಹಾತ್ಮನಾ ತಿಷ್ಠತೋ**
**ಬಾಹ್ಯಾರ್ಥಾನುಭವ-ಪ್ರಸಕ್ತ-ಮನಸಸ್ತತ್ತತ್ಕ್ರಿಯಾಂ ಕುರ್ವತಃ ।**
**ಸಂನ್ಯಸ್ತಾಖಿಲ-ಧರ್ಮ-ಕರ್ಮ-ವಿಷಯೈರ್ನಿತ್ಯಾತ್ಮನಿಷ್ಠಾಪರೈ-**
**ಸ್ತತ್ತ್ವಜ್ಞೈಃ ಕರಣೀಯಮಾತ್ಮನಿ ಸದಾನಂದೇಚ್ಛುಭಿರ್ಯತ್ನತಃ**
**॥ ೩೩೯ ॥**

**ದೇಹಾತ್ಮನಾ** = ದೇಹಾತ್ಮಭಾವದಿಂದ **ತಿಷ್ಠತಃ** = ಇರುತ್ತಿರುವವನಿಗೆ **ಬಾಹ್ಯ-ಅರ್ಥ-ಅನುಭವ-ಪ್ರಸಕ್ತ-ಮನಸಃ** = ವಿಷಯಾನುಭವದಲ್ಲಿ ನೆಲೆಗೊಂಡ ಮನಸ್ಸುಳ್ಳವನಿಗೆ **ತತ್-ತತ್-ಕ್ರಿಯಾಂ** = ಆಯಾ ಕರ್ಮವನ್ನು **ಕುರ್ವತಃ** = ಮಾಡುತ್ತಿರುವವನಿಗೆ **ದೃಶ್ಯಸ್ಯ** = ದೃಶ್ಯಪ್ರಪಂಚದ **ಅಗ್ರಹಣಂ** = ಪರಿಗ್ರಹಿಸದಿರೋಣವು **ಕಥಂ ನು ಘಟತೇ** = ಹೇಗೆ ಸಾಧ್ಯವಾಗುತ್ತದೆ? **ಸಂನ್ಯಸ್ತ-ಅಖಿಲ-ಧರ್ಮ-ಕರ್ಮ-ವಿಷಯೈಃ** = ಸರ್ವಧರ್ಮಗಳನ್ನೂ ಕರ್ಮಗಳನ್ನೂ ವಿಷಯಗಳನ್ನೂ ಬಿಟ್ಟಿರುವ

**ನಿತ್ಯ-ಆತ್ಮ-ನಿಷ್ಠಾ-ಪರೈಃ** = ನಿತ್ಯಾತ್ಮ-ನಿಷ್ಠೆಯಲ್ಲಿ ಆಸಕ್ತರಾದ **ಆತ್ಮನಿ** = ತನ್ನಲ್ಲಿ **ಸದಾನಂದ-ಇಚ್ಛುಭಿಃ** = ನಿತ್ಯಾನಂದವನ್ನು ಬಯಸುವ **ತತ್ತ್ವಜ್ಞೈಃ** = ಜ್ಞಾನಿಗಳಿಂದ **ಯತ್ನತಃ** = ಪ್ರಯತ್ನಪೂರ್ವಕವಾಗಿ **ಕರಣೀಯಂ** = [ದೃಶ್ಯದ ಅಗ್ರಹಣವು] ಮಾಡಲ್ಪಡತಕ್ಕದ್ದು.

**೩೭೯.** ದೇಹಾತ್ಮಭಾವದಿಂದ ಕೂಡಿ, ವಿಷಯಾನುಭವದಲ್ಲಿ ನೆಲೆಗೊಂಡ ಮನಸ್ಸುಳ್ಳವನಾಗಿ, ಆಯಾ ಕರ್ಮವನ್ನು ಮಾಡುತ್ತಿರುವವನಿಗೆ[೧] ದೃಶ್ಯ ಜಗತ್ತನ್ನು ಪರಿಗ್ರಹಿಸದಿರುವಿಕೆಯು ಹೇಗೆ ಸಾಧ್ಯವಾಗುತ್ತದೆ? ಸಮಸ್ತ ಧರ್ಮಗಳನ್ನೂ[೨] ಕರ್ಮಗಳನ್ನೂ[೩] ವಿಷಯಗಳನ್ನೂ[೪] ತೊರೆದು ನಿತ್ಯಾತ್ಮ ನಿಷ್ಠೆಯಲ್ಲಿ ಆಸಕ್ತರಾಗಿ ತಮ್ಮಲ್ಲಿ ಸದಾನಂದವನ್ನು ಬಯಸುವ ತತ್ತ್ವಜ್ಞರಿಂದಲೇ (ಈ ದೃಶ್ಯಜಗತ್ತಿನ ಅಪರಿಗ್ರಹವು) ಪ್ರಯತ್ನಪೂರ್ವಕವಾಗಿ ಮಾಡಲ್ಪಡತಕ್ಕದ್ದು.

[೧ ವಿಷಯಲಾಭಕ್ಕೋಸ್ಕರ.
೨ ವೈದಿಕ-ಧರ್ಮಗಳನ್ನು.
೩ ಲೌಕಿಕ-ಕರ್ಮಗಳನ್ನು.
೪ ಶಬ್ದಾದಿ-ವಿಷಯಗಳನ್ನು.]

**ಸರ್ವಾತ್ಮಸಿದ್ಧಯೇ ಭಿಕ್ಷೋಃ ಕೃತ-ಶ್ರವಣ-ಕರ್ಮಣಃ ।**
**ಸಮಾಧಿಂ ವಿದಧಾತ್ಯೇಷಾ ಶಾಂತೋ ದಾಂತ ಇತಿ ಶ್ರುತಿಃ ॥ ೩೮೦ ॥**

**ಕೃತ-ಶ್ರವಣ-ಕರ್ಮಣಃ** = ವೇದಾಂತಶ್ರವಣವನ್ನು ಮಾಡಿರುವ **ಭಿಕ್ಷೋಃ** = ಭಿಕ್ಷುವಿಗೆ **ಸರ್ವಾತ್ಮ-ಸಿದ್ಧಯೇ** = ಸರ್ವಾತ್ಮಭಾವದ ಸಿದ್ಧಿಗೋಸ್ಕರ **ಶಾಂತಃ ದಾಂತಃ** = ಶಾಂತನು, ದಾಂತನು **ಇತಿ** = ಎಂಬ **ಏಷಾ ಶ್ರುತಿಃ** = ಈ ಶ್ರುತಿಯು **ಸಮಾಧಿಂ** = ಸಮಾಧಿಯನ್ನು **ವಿದಧಾತಿ** = ವಿಧಿಸುತ್ತದೆ.

**೩೮೦.** ವೇದಾಂತವಾಕ್ಯದ ಶ್ರವಣವನ್ನು ಮಾಡಿರುವ ಭಿಕ್ಷುವಿಗೆ ಸರ್ವಾತ್ಮಭಾವದ ಸಿದ್ಧಿಗೋಸ್ಕರ 'ಶಾಂತನೂ ದಾಂತನೂ'[೧] ಎಂಬ ಈ ಶ್ರುತಿಯು ಸಮಾಧಿಯನ್ನು ವಿಧಿಸುತ್ತದೆ.

[೧ 'ಆದುದರಿಂದ ಹೀಗೆ ಅರಿತುಕೊಂಡಿರುವವನು ಶಾಂತನೂ ದಾಂತನೂ ಉಪರತನೂ ತಿತಿಕ್ಷುವೂ ಸಮಾಹಿತನೂ ಆಗಿ ತನ್ನ ಶರೀರದಲ್ಲಿಯೇ ಆತ್ಮನನ್ನು ನೋಡುತ್ತಾನೆ, ಸರ್ವವನ್ನೂ ಆತ್ಮನನ್ನಾಗಿ ನೋಡುತ್ತಾನೆ' **ತಸ್ಮಾದೇವಂವಿಚ್ಛಾಂತೋ ದಾಂತ ಉಪರತಸ್ತಿತಿಕ್ಷುಃ ಸಮಾಹಿತೋ ಭೂತ್ವಾಽಽತ್ಮನ್ಯೇವಾತ್ಮಾನಂ ಪಶ್ಯತಿ, ಸರ್ವಮಾತ್ಮಾನಂ ಪಶ್ಯತಿ** (ಬೃಹದಾರಣ್ಯಕ ಉ. ೪. ೪. ೨೩). ]

**ಆರೂಢಶಕ್ತೇರಹಮೋ ವಿನಾಶಃ**
**ಕರ್ತುಂ ನ ಶಕ್ಯಃ ಸಹಸಾಽಪಿ ಪಂಡಿತೈಃ ।**
**ಯೇ ನಿರ್ವಿಕಲ್ಪಾಖ್ಯ-ಸಮಾಧಿ-ನಿಶ್ಚಲಾ-**
**ಸ್ತಾನಂತರಾಽನಂತ-ಭವಾ ಹಿ ವಾಸನಾಃ ॥ ೩೪೧ ॥**

**ಯೇ** = ಯಾರು **ನಿರ್ವಿಕಲ್ಪಾಖ್ಯ-ಸಮಾಧಿ-ನಿಶ್ಚಲಾಃ** = ನಿರ್ವಿಕಲ್ಪವೆಂಬ ಸಮಾಧಿಯಲ್ಲಿ ನೆಲೆಗೊಂಡಿರುವರೊ **ತಾನ್ ಅಂತರಾ** = ಅವರನ್ನು ಬಿಟ್ಟರೆ **ಆರೂಢ-ಶಕ್ತೇಃ** = ಪ್ರಬಲವಾದ ಶಕ್ತಿಯುಳ್ಳ **ಅಹಮಃ** = ಅಹಂಕಾರದ **ವಿನಾಶಃ** = ನಾಶವು **ಪಂಡಿತೈಃ ಅಪಿ** = ಜ್ಞಾನಿಗಳಿಂದಲೂ **ಸಹಸಾ** = ಕೂಡಲೇ **ಕರ್ತುಂ** = ಮಾಡಲು **ನ ಶಕ್ಯಃ** = ಶಕ್ಯವಲ್ಲ; **ಹಿ** = ಏಕೆಂದರೆ **ವಾಸನಾಃ** = ಸಂಸ್ಕಾರಗಳು **ಅನಂತ-ಭವಾಃ** = ಅನೇಕ ಜನ್ಮಗಳಿಂದ ಸಂಪಾದಿಸಲ್ಪಟ್ಟವು.

**೩೪೧.** ಯಾರು ನಿರ್ವಿಕಲ್ಪವೆಂಬ ಸಮಾಧಿಯಲ್ಲಿ ನೆಲೆಗೊಂಡಿರುವರೊ ಅವರನ್ನು ಬಿಟ್ಟರೆ ಇತರರು ಜ್ಞಾನಿಗಳಾಗಿದ್ದರೂ ಪ್ರಬಲವಾದ ಶಕ್ತಿಯುಳ್ಳ ಅಹಂಕಾರವನ್ನು ಕೂಡಲೇ ನಾಶಮಾಡಲು ಅವರಿಂದ ಆಗುವುದಿಲ್ಲ; ಏಕೆಂದರೆ ಸಂಸ್ಕಾರಗಳು ಅನೇಕ ಜನ್ಮಗಳಿಂದ ಸಂಪಾದಿಸಲ್ಪಟ್ಟು ಬಂದಿರುತ್ತವೆ.

**ಅಹಂಬುದ್ಧ್ಯೈವ ಮೋಹಿನ್ಯಾ ಯೋಜಯಿತ್ವಾಽಽವೃತೇರ್ಬಲಾತ್ ।**
**ವಿಕ್ಷೇಪಶಕ್ತಿಃ ಪುರುಷಂ ವಿಕ್ಷೇಪಯತಿ ತದ್ಗುಣೈಃ ॥ ೩೪೨ ॥**

**ವಿಕ್ಷೇಪಶಕ್ತಿಃ** = ವಿಕ್ಷೇಪಶಕ್ತಿಯು **ಆವೃತೇಃ ಬಲಾತ್** = ಆವರಣಶಕ್ತಿಯ ಬಲದ ಮೂಲಕ **ಪುರುಷಂ** = ಮನುಷ್ಯನನ್ನು **ಅಹಂಬುದ್ಧ್ಯಾ ಏವ** = ಅಹಂಬುದ್ಧಿಯೆಂಬ **ಮೋಹಿನ್ಯಾ** = ಮೋಹಿನಿಯೊಡನೆ **ಯೋಜಯಿತ್ವಾ** = ಸೇರಿಸಿ **ತದ್ಗುಣೈಃ** = ಅದರ ಗುಣಗಳಿಂದ **ವಿಕ್ಷೇಪಯತಿ** = ವಿಕ್ಷೇಪಗೊಳಿಸುತ್ತದೆ.

**೩೪೨.** ವಿಕ್ಷೇಪಶಕ್ತಿಯು ಆವರಣಶಕ್ತಿಯ ಬಲದ ಮೂಲಕ ಮನುಷ್ಯನನ್ನು ಅಹಂಬುದ್ಧಿಯೆಂಬ ಮೋಹಿನಿಯೊಂದಿಗೆ ಸೇರಿಸಿ ಅದರ ಗುಣಗಳಿಂದ[1] ಅವನನ್ನು ವಿಕ್ಷೇಪಗೊಳಿಸುತ್ತದೆ.

[[1] ಕರ್ತೃತ್ವವೇ ಮೊದಲಾದ.]

**ವಿಕ್ಷೇಪಶಕ್ತಿ-ವಿಜಯೋ ವಿಷಮೋ ವಿಧಾತುಂ**
**ನಿಃಶೇಷಮಾವರಣಶಕ್ತಿ-ನಿವೃತ್ತ್ಯಭಾವೇ ।**
**ದೃಗ್-ದೃಶ್ಯಯೋಃ ಸ್ಫುಟಪಯೋಜಲವದ್ವಿಭಾಗೇ**
**ನಶ್ಯೇತ್ ತದಾವರಣಮಾತ್ಮನಿ ಚ ಸ್ವಭಾವಾತ್ ।**

**ನಿಃಸಂಶಯೇನ ಭವತಿ ಪ್ರತಿಬಂಧಶೂನ್ಯೋ**
**ವಿಕ್ಷೇಪಣಂ ನ ಹಿ ತದಾ ಯದಿ ಚೇನ್ಮೃಷಾರ್ಥೇ ॥ ೩೪೩ ॥**

**ನಿಃಶೇಷಂ** = ನಿಃಶೇಷವಾಗಿ **ಆವರಣಶಕ್ತಿ-ನಿವೃತ್ತಿ-ಅಭಾವೇ** = ಆವರಣ ಶಕ್ತಿಯು ಅಭಾವವಾಗದಿದ್ದರೆ **ವಿಕ್ಷೇಪಶಕ್ತಿ-ವಿಜಯಃ**=ವಿಕ್ಷೇಪಶಕ್ತಿಯ ವಿಜಯವು **ವಿಧಾತುಂ** = ಸಾಧಿಸಲು **ವಿಷಮಃ** = ಕಷ್ಟ; **ದೃಗ್-ದೃಶ್ಯಯೋಃ** = ದೃಗ್-ದೃಶ್ಯಗಳ **ಸ್ಫುಟ-ಪಯೋಜಲವತ್** = ಸ್ಫುಟವಾದ ಹಾಲುನೀರುಗಳಂತೆ **ವಿಭಾಗೇ [ಸತಿ]** = ವಿವೇಚನೆಯಿರುತ್ತಿರಲು **ತದಾ** = ಆಗ **ಆತ್ಮನಿ** = ಆತ್ಮನಲ್ಲಿ **ಸ್ವಭಾವಾತ್** = ತಾನಾಗಿಯೇ **ಆವರಣಂ** = ಆವರಣವು **ನಶ್ಯೇತ್** = ನಾಶವಾಗುವುದು; **ಮೃಷಾರ್ಥೇ** = ಮಿಥ್ಯೆಯಾದ ಅನಾತ್ಮನಲ್ಲಿ **ವಿಕ್ಷೇಪಣಂ** – ವಿಕ್ಷೇಪವು **ನ ಹಿ ಚೇತ್ ಯದಿ** = ಆಗದಿದ್ದರೆ **ತದಾ** = ಆಗ **ನಿಃಸಂಶಯೇನ** = ನಿಃಸಂಶಯವಾಗಿ **ಪ್ರತಿಬಂಧಶೂನ್ಯಃ ಭವತಿ** = ಪ್ರತಿಬಂಧವಿಲ್ಲದೆ ಆಗುವುದು.

**೩೪೩.** ಆವರಣಶಕ್ತಿಯನ್ನು ನಿಃಶೇಷವಾಗಿ ತೊಲಗಿಸಿಕೊಳ್ಳದಿದ್ದರೆ ವಿಕ್ಷೇಪಶಕ್ತಿಯನ್ನು ಜಯಿಸಿಕೊಳ್ಳುವುದು ಕಷ್ಟ. ದೃಗ್ರೂಪನಾದ ಆತ್ಮ, ದೃಶ್ಯವಾದ ಜಗತ್ತು ಇವೆರಡನ್ನೂ—(ಹಂಸವು) ಹಾಲುನೀರುಗಳನ್ನು ಸ್ಫುಟವಾಗಿ ವಿಂಗಡಿಸುವಂತೆ—ವಿವೇಚನೆಮಾಡಿದಾಗ ಆ ಆವರಣವು ಆತ್ಮನಲ್ಲಿ ತಾನಾಗಿಯೇ ನಾಶವಾಗುವುದು. ಮಿಥ್ಯಾಭೂತವಾದ ಅನಾತ್ಮನಲ್ಲಿ (ಮನಸ್ಸು) ವಿಕ್ಷೇಪಹೊಂದದಿದ್ದರೆ (ವಿಕ್ಷೇಪಶಕ್ತಿಯನ್ನು ಗೆಲ್ಲುವುದು) ನಿಃಸಂಶಯವಾಗಿ ಪ್ರತಿಬಂಧವಿಲ್ಲದೆ ಆಗುವುದು.

**ಸಮ್ಯಗ್ವಿವೇಕಃ ಸ್ಫುಟಬೋಧಜನ್ಯೋ**
**ವಿಭಜ್ಯ ದೃಗ್-ದೃಶ್ಯ-ಪದಾರ್ಥ-ತತ್ತ್ವಮ್ ।**
**ಛಿನತ್ತಿ ಮಾಯಾಕೃತ-ಮೋಹಬಂಧಂ**
**ಯಸ್ಮಾದ್ವಿಮುಕ್ತಸ್ಯ ಪುನರ್ನ ಸಂಸೃತಿಃ ॥ ೩೪೪ ॥**

**ಸ್ಫುಟಬೋಧಜನ್ಯಃ** = ಸ್ಫುಟವಾದ ಜ್ಞಾನದಿಂದ ಉಂಟಾದ **ಸಮ್ಯಗ್-ವಿವೇಕಃ** = ಸಮ್ಯಗ್ವಿವೇಕವು **ದೃಗ್-ದೃಶ್ಯ-ಪದಾರ್ಥ-ತತ್ತ್ವಂ** = ದೃಕ್ ಮತ್ತು ದೃಶ್ಯ ಎಂಬ ಪದಾರ್ಥಗಳ ತತ್ತ್ವವನ್ನು **ವಿಭಜ್ಯ** = ವಿಂಗಡಿಸಿ **ಮಾಯಾಕೃತ-ಮೋಹಬಂಧಂ** = ಮಾಯೆಯಿಂದ ಆದ ಮೋಹವೆಂಬ ಬಂಧವನ್ನು **ಛಿನತ್ತಿ** = ಕತ್ತರಿಸುತ್ತದೆ; **ಯಸ್ಮಾತ್** = ಯಾವುದರಿಂದ **ವಿಮುಕ್ತಸ್ಯ** = ಮುಕ್ತನಾದವನಿಗೆ **ಪುನಃ** = ಮತ್ತೆ **ನ ಸಂಸೃತಿಃ** = ಸಂಸಾರವಿಲ್ಲವೊ.

**೩೪೪.** ಸ್ಫುಟವಾದ ಜ್ಞಾನದಿಂದ ಉತ್ಪನ್ನವಾದ ಸಮ್ಯಗ್ವಿವೇಕವು ದೃಗ್ರೂಪನಾದ ಆತ್ಮ, ದೃಶ್ಯರೂಪವಾದ ಪ್ರಪಂಚ—ಎಂಬ ಪದಾರ್ಥಗಳ

ತತ್ತ್ವವನ್ನು ವಿಂಗಡಿಸಿ, ಮಾಯಾಕೃತವಾದ ಮೋಹವೆಂಬ ಬಂಧವನ್ನು ಕತ್ತರಿಸುತ್ತದೆ; ಅದರಿಂದ ಮುಕ್ತನಾದವನಿಗೆ ಪುನಃ ಸಂಸಾರವಿಲ್ಲ.

[೧ ಶಾಸ್ತ್ರ ಆಚಾರ್ಯ—ಇವರ ಪ್ರಸಾದದಿಂದಲೂ ಮಹಾವಾಕ್ಯಾರ್ಥದ ಅನುಭವದಿಂದಲೂ ಉತ್ಪನ್ನವಾದ.

೨ ಬ್ರಹ್ಮವು ಸತ್ಯ, ಜಗತ್ತು ಮಿಥ್ಯೆ ಎಂಬ ರೂಪದ ಸರಿಯಾದ ವಿವೇಕ.]

**ಪರಾವರೈಕತ್ವ-ವಿವೇಕವಹ್ನಿ-**
**ರ್ದಹತ್ಯವಿದ್ಯಾಗಹನಂ ಹ್ಯಶೇಷಮ್ ।**
**ಕಿಂ ಸ್ಯಾತ್ ಪುನಃ ಸಂಸರಣಸ್ಯ ಬೀಜ-**
**ಮದ್ವೈತಭಾವಂ ಸಮುಪೇಯುಷೋಽಸ್ಯ ॥ ೩೪೫ ॥**

**ಪರ-ಅವರ-ಏಕತ್ವ-ವಿವೇಕ-ವಹ್ನಿಃ** = ಜೀವ-ಪರಮಾತ್ಮರಿಬ್ಬರೂ ಒಂದೇ ಎಂಬ ವಿವೇಕಾಗ್ನಿಯು **ಅವಿದ್ಯಾಗಹನಂ** = ಅವಿದ್ಯೆಯೆಂಬ ಕಾಡನ್ನು **ಅಶೇಷಂ** = ನಿಃಶೇಷವಾಗಿ **ದಹತಿ** = ಸುಡುತ್ತದೆ: **ಅದ್ವೈತಭಾವಂ** = ಅದ್ವೈತಭಾವವನ್ನು **ಸಮ್-ಉಪೇಯುಷಃ** = ಚೆನ್ನಾಗಿ ಪಡೆದಿರುವ **ಅಸ್ಯ** = ಇವನಿಗೆ **ಪುನಃ** = ಮತ್ತೆ **ಸಂಸರಣಸ್ಯ** = ಸಂಸಾರಕ್ಕೆ **ಬೀಜಂ** = ಕಾರಣವು **ಕಿಂ ಸ್ಯಾತ್** = ಯಾವುದು ಇದ್ದೀತು?

**೩೪೫.** ಜೀವ ಈಶ್ವರ—ಇವರಿಬ್ಬರೂ ಒಂದೇ ಎಂಬ ವಿವೇಕಾಗ್ನಿಯು ಅವಿದ್ಯೆಯೆಂಬ ಕಾಡನ್ನು ನಿಃಶೇಷವಾಗಿ ಸುಡುತ್ತದೆ. ಅದ್ವೈತಭಾವವನ್ನೇ ಚೆನ್ನಾಗಿ ಪಡೆದಿರುವ ಜ್ಞಾನಿಗೆ ಪುನಃ ಸಂಸಾರಕ್ಕೆ ಬರಲು ಯಾವ ಕಾರಣವು ಇದ್ದೀತು?

**ಆವರಣಸ್ಯ ನಿವೃತ್ತಿರ್ಭವತಿ ಹಿ ಸಮ್ಯಕ್ಪದಾರ್ಥ-ದರ್ಶನತಃ ।**
**ಮಿಥ್ಯಾಜ್ಞಾನ-ವಿನಾಶಸ್ತದ್ವದ್ವಿಕ್ಷೇಪ-ಜನಿತ-ದುಃಖನಿವೃತ್ತಿಃ ॥೩೪೬॥**

**ಸಮ್ಯಕ್-ಪದಾರ್ಥ-ದರ್ಶನತಃ** = ವಸ್ತುವನ್ನು ಚೆನ್ನಾಗಿ ಸಾಕ್ಷಾತ್ಕರಿಸುವುದರಿಂದ **ಆವರಣಸ್ಯ** = ಆವರಣದ **ನಿವೃತ್ತಿಃ** = ನಿವೃತ್ತಿಯು **ಭವತಿ** = ಉಂಟಾಗುತ್ತದೆ, **ಮಿಥ್ಯಾಜ್ಞಾನ-ವಿನಾಶಃ** = ಮಿಥ್ಯಾಜ್ಞಾನದ ನಾಶವು [ಆಗುತ್ತದೆ], **ತದ್ವತ್** = ಹಾಗೆಯೇ **ವಿಕ್ಷೇಪಜನಿತ-ದುಃಖನಿವೃತ್ತಿಃ** = ವಿಕ್ಷೇಪದಿಂದ ಆದ ದುಃಖದಿಂದ ನಿವೃತ್ತಿಯೂ [ಆಗುತ್ತದೆ].

**೩೪೬.** ಪರಮಾರ್ಥವಸ್ತುವನ್ನು ಚೆನ್ನಾಗಿ ಸಾಕ್ಷಾತ್ಕರಿಸುವುದರಿಂದ ಆವರಣವು ಹೋಗುತ್ತದೆ, ಮಿಥ್ಯಾಜ್ಞಾನವೂ ಹೋಗುತ್ತದೆ; ಹಾಗೆಯೇ ವಿಕ್ಷೇಪದಿಂದ ಉಂಟಾದ ದುಃಖವೂ ಹೋಗುತ್ತದೆ.

**ಏತತ್ ತ್ರಿತಯಂ ದೃಷ್ಟಂ ಸಮ್ಯಗ್-ರಜ್ಜು ಸ್ವರೂಪ-ವಿಜ್ಞಾನಾತ್ ।**
**ತಸ್ಮಾದ್ವಸ್ತು-ಸತತ್ತ್ವಂ ಜ್ಞಾತವ್ಯಂ ಬಂಧಮುಕ್ತಯೇ ವಿದುಷಾ**
**॥ ೩೪೭ ॥**

**ಸಮ್ಯಕ್-ರಜ್ಜುಸ್ವರೂಪ-ವಿಜ್ಞಾನಾತ್** = ಚೆನ್ನಾಗಿ ಆದ ಹಗ್ಗದ ಸ್ವರೂಪ-ಜ್ಞಾನದಿಂದ **ಏತತ್ ತ್ರಿತಯಂ** = ಈ ಮೂರು **ದೃಷ್ಟಂ** = ನೋಡಲ್ಪಟ್ಟಿದೆ; **ತಸ್ಮಾತ್** = ಆದುದರಿಂದ **ವಸ್ತು-ಸತತ್ತ್ವಂ** = ವಸ್ತುವಿನ ಯಾಥಾತ್ಮ್ಯವು **ಬಂಧಮುಕ್ತಯೇ** = ಬಂಧನಿವೃತ್ತಿಗಾಗಿ **ವಿದುಷಾ** = ಹೀಗೆ ಅರಿತಿರುವವನಿಂದ **ಜ್ಞಾತವ್ಯಂ** = ತಿಳಿಯಲ್ಪಡತಕ್ಕದ್ದು.

**೩೪೭.** ಹಗ್ಗದ ಸ್ವರೂಪವನ್ನು ಚೆನ್ನಾಗಿ ಅರಿತುಕೊಂಡದ್ದರಿಂದ ಈ ಮೂರೂ[೧] ಕಂಡುಬರುತ್ತವೆ. ಆದುದರಿಂದ ಮುಮುಕ್ಷುವು ಸಂಸಾರಬಂಧ ನಿವೃತ್ತಿಗಾಗಿ ವಸ್ತುವಿನ ಯಾಥಾತ್ಮ್ಯವನ್ನು ಅರಿತುಕೊಳ್ಳಬೇಕು.

[೧ ಆವರಣ, ಮಿಥ್ಯಾಜ್ಞಾನ, ದುಃಖ—ಇವುಗಳ ನಿವೃತ್ತಿ.]

**ಅಯೋಽಗ್ನಿಯೋಗಾದಿವ ಸತ್ಸಮನ್ವಯಾ-**
**ನ್ಮಾತ್ರಾದಿರೂಪೇಣ ವಿಜೃಂಭತೇ ಧೀಃ ।**
**ತತ್ಕಾರ್ಯಮೇತತ್ತ್ರಿತಯಂ ಯತೋ ಮೃಷಾ**
**ದೃಷ್ಟಂ ಭ್ರಮ-ಸ್ವಪ್ನ-ಮನೋರಥೇಷು ॥ ೩೪೮ ॥**

**ತತೋ ವಿಕಾರಾಃ ಪ್ರಕೃತೇರಹಂಮುಖಾ**
**ದೇಹಾವಸಾನಾ ವಿಷಯಾಶ್ಚ ಸರ್ವೇ ।**
**ಕ್ಷಣೇಽನ್ಯಥಾಭಾವಿತಯಾ ಹ್ಯಮೀಷಾ-**
**ಮಸತ್ತ್ವಮಾತ್ಮಾ ತು ಕದಾಪಿ ನಾನ್ಯಥಾ ॥ ೩೪೯ ॥**

**ಅಗ್ನಿಯೋಗಾತ್** = ಅಗ್ನಿಸಂಬಂಧದಿಂದ **ಅಯಃ ಇವ** = ಕಬ್ಬಿಣವು ಹೇಗೋ ಹಾಗೆ **ಧೀಃ** = ಬುದ್ಧಿಯು **ಸತ್-ಸಮನ್ವಯಾತ್** = ಸದ್ವಸ್ತುವಿನ ಸಂಬಂಧದಿಂದ **ಮಾತ್ರಾದಿರೂಪೇಣ** = ಪ್ರಮಾತೃ ಮೊದಲಾದ ರೂಪದಿಂದ **ವಿಜೃಂಭತೇ** = ತೋರಿಕೊಳ್ಳುತ್ತದೆ; **ಯತಃ** = ಯಾವ ಕಾರಣದಿಂದ **ತತ್-ಕಾರ್ಯಂ** = ಬುದ್ಧಿಯ ಕಾರ್ಯವಾದ **ಏತತ್ ತ್ರಿತಯಂ** = ಈ ಮೂರು **ಭ್ರಮ-ಸ್ವಪ್ನ-ಮನೋರಥೇಷು** = ಭ್ರಾಂತಿ-ಸ್ವಪ್ನ-ಕೋರಿಕೆಗಳಲ್ಲಿ **ಮೃಷಾ** = ಹುಸಿಯಾಗಿ **ದೃಷ್ಟಂ** = ನೋಡಲ್ಪಟ್ಟಿದೆಯೊ [ಆ ಕಾರಣದಿಂದ] **ಅಹಂಮುಖಾಃ** = ಅಹಂಕಾರವೇ ಮೊದಲಾಗಿ **ದೇಹಾವಸಾನಾಃ** = ದೇಹದ ವರೆಗಿನ **ಪ್ರಕೃತೇಃ ವಿಕಾರಾಃ** = ಪ್ರಕೃತಿಯ ವಿಕಾರಗಳು **ಸರ್ವೇ ವಿಷಯಾಃ ಚ** = ಮತ್ತು ಸಮಸ್ತವಿಷಯಗಳೂ **ಕ್ಷಣೇ** = ಕ್ಷಣಕಾಲದಲ್ಲಿಯೇ **ಅನ್ಯಥಾಭಾವಿತಯಾ** = ಬೇರೆಯಾಗಿ ಪರಿಣಮಿಸುವುದರಿಂದ **ಅಮೀಷಾಂ** = ಇವುಗಳಿಗೆ **ಅಸತ್ತ್ವಂ** =

ಮಿಥ್ಯಾಸ್ವರೂಪವು [ಸಿದ್ಧವಾಗಿದೆ]; **ಆತ್ಮಾ ತು** = ಆತ್ಮನಾದರೋ **ಕದಾ ಅಪಿ** = ಯಾವಾಗಲೂ **ನ ಅನ್ಯಥಾ** = ಪರಿಣಮಿಸುವುದಿಲ್ಲ.

**೩೪೮-೩೪೯.** ಅಗ್ನಿಯ ಸಂಬಂಧದಿಂದ ಕಬ್ಬಿಣವು ಕಾದು ಕೆಂಪಾಗುವಂತೆ ಸದ್ವಸ್ತುವಾದ ಆತ್ಮನ ಸಂಬಂಧದಿಂದ ಬುದ್ಧಿಯು ಪ್ರಮಾತೃ (ಪ್ರಮಾಣ ಪ್ರಮೇಯ) ಮೊದಲಾದ ರೂಪದಿಂದ ತೋರಿಕೊಳ್ಳುತ್ತದೆ. ಹೇಗೆ ಬುದ್ಧಿಯ ಕಾರ್ಯವಾದ ಈ ಪ್ರಮಾತೃವೇ ಮೊದಲಾದ ತ್ರಿತಯವು ಭ್ರಾಂತಿ ಸ್ವಪ್ನ ಮನೋರಥ— ಇವುಗಳಲ್ಲಿ ಹುಸಿಯಾಗಿರುತ್ತದೆಯೊ ಹಾಗೆಯೇ ಅಹಂಕಾರದಿಂದ ಪ್ರಾರಂಭಿಸಿ ದೇಹದ ವರೆಗಿನ ಪ್ರಕೃತಿಯ ವಿಕಾರಗಳೂ ಸಮಸ್ತ ವಿಷಯಗಳೂ ಪ್ರತಿಕ್ಷಣವೂ ಬೇರೆಯಾಗಿ ಪರಿಣಮಿಸುತ್ತಿರುವುದರಿಂದ ಮಿಥ್ಯೆಯಾಗಿರುವುವು. ಆತ್ಮನಾದರೋ ಯಾವಾಗಲೂ ಪರಿಣಮಿಸುವುದಿಲ್ಲ.

**ನಿತ್ಯಾದ್ವಯಾಖಂಡ-ಚಿದೇಕರೂಪೋ**
**ಬುದ್ಧ್ಯಾದಿಸಾಕ್ಷೀ ಸದಸದ್ವಿಲಕ್ಷಣಃ ।**
**ಅಹಂಪದ-ಪ್ರತ್ಯಯ-ಲಕ್ಷಿತಾರ್ಥಃ**
**ಪ್ರತ್ಯಕ್-ಸದಾನಂದಘನಃ ಪರಾತ್ಮಾ ॥ ೩೫೦ ॥**

**ಪರಾತ್ಮಾ** = ಪರಮಾತ್ಮನು **ನಿತ್ಯ-ಅದ್ವಯ-ಅಖಂಡ-ಚಿದೇಕರೂಪಃ** = ನಿತ್ಯನೂ ಅದ್ವಯನೂ ಅಖಂಡನೂ ಚಿದ್ರೂಪನೂ **ಬುದ್ಧ್ಯಾದಿಸಾಕ್ಷೀ** = ಬುದ್ಧಿ ಮೊದಲಾದುವುಗಳಿಗೆ ಸಾಕ್ಷಿಯೂ **ಸತ್-ಅಸತ್-ವಿಲಕ್ಷಣಃ** = ಸ್ಥೂಲಸೂಕ್ಷ್ಮಗಳಿಗಿಂತ ವಿಲಕ್ಷಣನೂ **ಅಹಂಪದ-ಪ್ರತ್ಯಯ-ಲಕ್ಷಿತಾರ್ಥಃ** = ಅಹಂಪದ, ಅಹಂ ಪ್ರತ್ಯಯ ಇವುಗಳಿಂದ ಲಕ್ಷಿತನಾದವನೂ **ಪ್ರತ್ಯಕ್** = ಪ್ರತ್ಯಕ್‌ಸ್ವರೂಪನೂ **ಸದಾನಂದಘನಃ** = ಸದಾನಂದಘನನೂ [ಆಗಿರುತ್ತಾನೆ].

**೩೫೦.** ಪರಮಾತ್ಮನು ನಿತ್ಯನೂ ಅದ್ವಯನೂ ಅಖಂಡನೂ ಚಿದ್ರೂಪನೂ ಬುದ್ಧ್ಯಾದಿಗಳಿಗೆ ಸಾಕ್ಷಿಯೂ ಸ್ಥೂಲ-ಸೂಕ್ಷ್ಮಗಳಿಗಿಂತ ವಿಲಕ್ಷಣನೂ ಅಹಂಪದ-ಪ್ರತ್ಯಯಗಳಿಂದ ಲಕ್ಷಿತನಾದವನೂ ಪ್ರತ್ಯಕ್‌ಸ್ವರೂಪನೂ ಸದಾನಂದಘನನೂ ಆಗಿರುತ್ತಾನೆ.

**ಇತ್ಥಂ ವಿಪಶ್ಚಿತ್ ಸದಸದ್ವಿಭಜ್ಯ**
**ನಿಶ್ಚಿತ್ಯ ತತ್ತ್ವಂ ನಿಜಬೋಧದೃಷ್ಟ್ಯಾ ।**
**ಜ್ಞಾತ್ವಾ ಸ್ವಮಾತ್ಮಾನಮಖಂಡಬೋಧಂ**
**ತೇಭ್ಯೋ ವಿಮುಕ್ತಃ ಸ್ವಯಮೇವ ಶಾಮ್ಯತಿ ॥ ೩೫೧ ॥**

**ವಿಪಶ್ಚಿತ್** = ಜ್ಞಾನಿಯಾದವನು **ಇತ್ಥಂ** = ಹೀಗೆ **ಸತ್-ಅಸತ್ ವಿಭಜ್ಯ** = ಸದ್ವಸ್ತುವನ್ನೂ ಅಸದ್ವಸ್ತುವನ್ನೂ ವಿಂಗಡಿಸಿ **ನಿಜಬೋಧದೃಷ್ಟ್ಯಾ** = ಸ್ವಾನುಭವ-ದೃಷ್ಟಿಯಿಂದ **ತತ್ತ್ವಂ** = ವಸ್ತುಯಾಥಾತ್ಮ್ಯವನ್ನು **ನಿಶ್ಚಿತ್ಯ** = ಗೊತ್ತುಮಾಡಿಕೊಂಡು, **ಅಖಂಡಬೋಧಂ** = ಅಖಂಡಜ್ಞಾನಸ್ವರೂಪನಾದ **ಸ್ವಮ್ ಆತ್ಮಾನಂ** = ತನ್ನ ಆತ್ಮನನ್ನೇ **ಜ್ಞಾತ್ವಾ** = ಅರಿತುಕೊಂಡು **ತೇಭ್ಯಃ** = ಆ ಅನಾತ್ಮ ವಸ್ತುಗಳಿಂದ **ವಿಮುಕ್ತಃ** = ಮುಕ್ತನಾಗಿ **ಸ್ವಯಮ್ ಏವ** = ತಾನಾಗಿಯೇ **ಶಾಮ್ಯತಿ** = ಶಾಂತನಾಗುತ್ತಾನೆ.

**೩೫೧.** ಜ್ಞಾನಿಯಾದ ಮುಮುಕ್ಷುವು ಹೀಗೆ ಸದ್ವಸ್ತುವನ್ನೂ[೧] ಅಸದ್ವಸ್ತುವನ್ನೂ[೨] ವಿಂಗಡಿಸಿ, (ವಿಚಾರದಿಂದ ಉತ್ಪನ್ನವಾದ) ಸ್ವಾನುಭವದೃಷ್ಟಿಯಿಂದ ವಸ್ತುಯಾಥಾತ್ಮ್ಯವನ್ನು ಗೊತ್ತುಮಾಡಿಕೊಂಡು, ಅಖಂಡಜ್ಞಾನಸ್ವರೂಪನಾದ ತನ್ನ ಆತ್ಮನನ್ನೇ ಅರಿತುಕೊಂಡು, ಆ ಅನಾತ್ಮವಸ್ತುಗಳಿಂದ ಮುಕ್ತನಾಗಿ ತಾನಾಗಿಯೇ ಶಾಂತನಾಗುತ್ತಾನೆ.

[೧ ಬ್ರಹ್ಮವನ್ನೂ.
೨ ಅವಿದ್ಯೆ ಮತ್ತು ಅದರ ಕಾರ್ಯಗಳು—ಇವುಗಳನ್ನೂ.]

**ಅಜ್ಞಾನ-ಹೃದಯ-ಗ್ರಂಥೇರ್ನಿಃಶೇಷ-ವಿಲಯಸ್ತದಾ ।**
**ಸಮಾಧಿನಾಽವಿಕಲ್ಪೇನ ಯದಾಽದ್ವೈತಾತ್ಮ-ದರ್ಶನಮ್ ॥ ೩೫೨ ॥**

**ಅವಿಕಲ್ಪೇನ** = ನಿರ್ವಿಕಲ್ಪವಾದ **ಸಮಾಧಿನಾ** = ಸಮಾಧಿಯಿಂದ **ಯದಾ** = ಯಾವಾಗ **ಅದ್ವೈತಾತ್ಮ-ದರ್ಶನಂ** = ಅದ್ವಯನಾದ ಪರಮಾತ್ಮನ ಸಾಕ್ಷಾತ್ಕಾರವು [**ಭವತಿ** = ಆಗುವುದೊ] **ತದಾ** = ಆಗಲೇ **ಅಜ್ಞಾನ-ಹೃದಯ-ಗ್ರಂಥೇಃ** = ಅಜ್ಞಾನವೆಂಬ ಹೃದಯಗ್ರಂಥಿಯ **ನಿಃಶೇಷ-ವಿಲಯಃ** = ಸಂಪೂರ್ಣನಾಶವು [ಆಗುತ್ತದೆ].

**೩೫೨.** ಯಾವಾಗ ನಿರ್ವಿಕಲ್ಪಸಮಾಧಿಯಿಂದ ಅದ್ವಯನಾದ ಪರಮಾತ್ಮನ ಸಾಕ್ಷಾತ್ಕಾರವಾಗುವುದೊ ಆಗಲೇ ಅಜ್ಞಾನವೆಂಬ ಹೃದಯಗ್ರಂಥಿಯು ಸಂಪೂರ್ಣವಾಗಿ ನಾಶವಾಗುವುದು.

**ತ್ವಮಹಮಿದಮಿತೀಯಂ ಕಲ್ಪನಾ ಬುದ್ಧಿದೋಷಾತ್**
**ಪ್ರಭವತಿ ಪರಮಾತ್ಮನ್ಯದ್ವಯೇ ನಿರ್ವಿಶೇಷೇ ।**
**ಪ್ರವಿಲಸತಿ ಸಮಾಧಾವಸ್ಯ ಸರ್ವೋ ವಿಕಲ್ಪೋ**
**ವಿಲಯನಮುಪಗಚ್ಛೇದ್ವಸ್ತುತತ್ತ್ವಾವಧೃತ್ಯಾ ॥ ೩೫೩ ॥**

**ಅದ್ವಯೇ** = ಅದ್ವಿತೀಯನಾದ **ನಿರ್ವಿಶೇಷೇ** = ವಿಶೇಷಶೂನ್ಯನಾದ **ಪರಮಾತ್ಮನಿ** = ಪರಮಾತ್ಮನಲ್ಲಿ **ಬುದ್ಧಿದೋಷಾತ್** = ಬುದ್ಧಿಯ ದೋಷದಿಂದ **ತ್ವಂ** = ನೀನು **ಅಹಂ** = ನಾನು **ಇದಂ** = ಇದು **ಇತಿ** = ಎಂಬ **ಇಯಂ ಕಲ್ಪನಾ** = ಈ ಕಲ್ಪನೆಯು

**ಪ್ರಭವತಿ** = ಉಂಟಾಗುತ್ತದೆ; **ಅಸ್ಯ** = ಇವನಿಗೆ **ಸಮಾಧೌ** = ಸಮಾಧಿಯಲ್ಲಿ **ಪ್ರವಿಲಸತಿ** [**ಸತಿ**] = [ಪರಮಾರ್ಥವು] ಪ್ರಕಾಶಿಸುತ್ತಿರುವಾಗ **ವಸ್ತುತತ್ತ್ವ-ಅವಧೃತ್ಯಾ** = ವಸ್ತುಯಾಥಾತ್ಮ್ಯದ ಅವಧಾರಣೆಯ ಮೂಲಕ **ಸರ್ವಃ ವಿಕಲ್ಪಃ** = ವಿಕಲ್ಪಗಳೆಲ್ಲವೂ **ವಿಲಯನಮ್ ಉಪಗಚ್ಛೇತ್** = ವಿನಾಶವನ್ನು ಹೊಂದುತ್ತವೆ.

**೩೫೩.** ಅದ್ವಿತೀಯನೂ ವಿಶೇಷಶೂನ್ಯನೂ ಆದ ಪರಮಾತ್ಮನಲ್ಲಿ 'ನೀನು' 'ನಾನು' 'ಇದು'—ಎಂಬ ಕಲ್ಪನೆಯು ಬುದ್ಧಿದೋಷದಿಂದ ಉಂಟಾಗುತ್ತದೆ. ಇವನಿಗೆ ಸಮಾಧಿಯಲ್ಲಿ (ಪರಮಾರ್ಥತತ್ತ್ವವು) ಪ್ರಕಾಶಿಸುತ್ತಿರುವಾಗ ವಸ್ತುಯಾಥಾತ್ಮ್ಯದ ಅವಧಾರಣೆಯ ಮೂಲಕ ವಿಕಲ್ಪಗಳೆಲ್ಲವೂ ವಿನಾಶವನ್ನು ಹೊಂದುತ್ತವೆ.

**ಶಾಂತೋ ದಾಂತಃ ಪರಮುಪರತಃ ಕ್ಷಾಂತಿಯುಕ್ತಃ ಸಮಾಧಿಂ**
**ಕುರ್ವನ್ನಿತ್ಯಂ ಕಲಯತಿ ಯತಿಃ ಸ್ವಸ್ಯ ಸರ್ವಾತ್ಮಭಾವಮ್ ।**
**ತೇನಾವಿದ್ಯಾ-ತಿಮಿರ-ಜನಿತಾನ್ ಸಾಧು ದಗ್ಧ್ವಾ ವಿಕಲ್ಪಾನ್**
**ಬ್ರಹ್ಮಾಕೃತ್ಯಾ ನಿವಸತಿ ಸುಖಂ ನಿಷ್ಕ್ರಿಯೋ ನಿರ್ವಿಕಲ್ಪಃ ॥ ೩೫೪ ॥**

**ಶಾಂತಃ** = ಶಾಂತನಾದ **ದಾಂತಃ** = ದಾಂತನಾದ **ಪರಮ್ ಉಪರತಃ** = ಅತ್ಯಂತವಾಗಿ ಉಪರತನಾದ **ಕ್ಷಾಂತಿಯುಕ್ತಃ** = ದ್ವಂದ್ವಸಹಿಷ್ಣುವಾದ **ಯತಿಃ** = ಯತಿಯು **ನಿತ್ಯಂ** = ಯಾವಾಗಲೂ **ಸಮಾಧಿಂ ಕುರ್ವನ್** = ಸಮಾಧಿಯನ್ನು ಮಾಡುತ್ತ **ಸ್ವಸ್ಯ** = ತನ್ನ **ಸರ್ವಾತ್ಮಭಾವಂ** = ಸರ್ವಾತ್ಮಭಾವವನ್ನು **ಕಲಯತಿ** = ಅನುಭವಿಸುತ್ತಾನೆ; **ತೇನ** = ಆ ಸಮಾಧಿಯಿಂದ **ಅವಿದ್ಯಾ-ತಿಮಿರ-ಜನಿತಾನ್** = ಅವಿದ್ಯೆಯೆಂಬ ಅಂಧಕಾರದಿಂದ ಉಂಟಾದ **ವಿಕಲ್ಪಾನ್** = ವಿಕಲ್ಪಗಳನ್ನು **ಸಾಧು ದಗ್ಧ್ವಾ** = ಚೆನ್ನಾಗಿ ಸುಟ್ಟು **ನಿಷ್ಕ್ರಿಯಃ** = ನಿಷ್ಕ್ರಿಯನಾಗಿ **ನಿರ್ವಿಕಲ್ಪಃ** = ನಿರ್ವಿಕಲ್ಪನಾಗಿ **ಬ್ರಹ್ಮ-ಆಕೃತ್ಯಾ** = ಬ್ರಹ್ಮಾಕಾರದಿಂದ **ಸುಖಂ ನಿವಸತಿ** = ಸುಖವಾಗಿರುತ್ತಾನೆ.

**೩೫೪.** ಶಾಂತನೂ[೧] ದಾಂತನೂ[೨] ಅತ್ಯಂತವಾಗಿ ಉಪರತನೂ[೩] ದ್ವಂದ್ವಸಹಿಷ್ಣುವೂ ಆದ ಯತಿಯು ಯಾವಾಗಲೂ ಸಮಾಧಿಯನ್ನು ಮಾಡುತ್ತ, ತನ್ನ ಸರ್ವಾತ್ಮಭಾವವನ್ನು ಅನುಭವಿಸುತ್ತಾನೆ. ಅವಿದ್ಯೆಯೆಂಬ ಅಂಧಕಾರದಿಂದ ಉಂಟಾದ ವಿಕಲ್ಪಗಳನ್ನು ಆ ಸಮಾಧಿಯಿಂದ ಚೆನ್ನಾಗಿ ಸುಟ್ಟು, ನಿಷ್ಕ್ರಿಯನೂ ನಿರ್ವಿಕಲ್ಪನೂ ಆಗಿ ಬಹ್ಮಾಕಾರದಿಂದ ಸುಖವಾಗಿರುತ್ತಾನೆ.

[ಇಲ್ಲಿ ಸಮಾಧಿಯನ್ನೂ ಸಮಾಧಿಯ ಫಲವನ್ನೂ ಹೇಳಿದೆ.
೧ ಮನಸ್ಸನ್ನು ನಿಗ್ರಹಿಸಿದವನಾಗಿ.
೨ ಬಾಹ್ಯೇಂದ್ರಿಯಗಳನ್ನು ನಿಗ್ರಹಿಸಿದವನಾಗಿ.
೩ ಹೊರಗಿನ ವೃತ್ತಿಗಳನ್ನು ಅವಲಂಬಿಸದೆ.]

ಸಮಾಹಿತಾ ಯೇ ಪ್ರವಿಲಾಪ್ಯ ಬಾಹ್ಯಂ
ಶ್ರೋತ್ರಾದಿ ಚೇತಃ ಸ್ವಮಹಂ ಚಿದಾತ್ಮನಿ ।
ತ ಏವ ಮುಕ್ತಾ ಭವಪಾಶಬಂಧೈ-
ರ್ನಾನ್ಯೇ ತು ಪಾರೋಕ್ಷ್ಯ-ಕಥಾಭಿಧಾಯಿನಃ ॥ ೩೫೫ ॥

**ಯೇ** = ಯಾರು **ಬಾಹ್ಯಂ** = ಹೊರಗಿನ **ಶ್ರೋತ್ರಾದಿ** = ಶ್ರೋತ್ರವೇ ಮೊದಲಾದ ಸಮುದಾಯವನ್ನು **ಚೇತಃ** = ಚಿತ್ತವನ್ನು **ಸ್ವಮ್ ಅಹಂ** = ತನ್ನ ಅಹಂಕಾರವನ್ನು **ಚಿದಾತ್ಮನಿ** = ಚಿದಾತ್ಮನಲ್ಲಿ **ಪ್ರವಿಲಾಪ್ಯ** = ಲಯಮಾಡಿಕೊಂಡು **ಸಮಾಹಿತಾಃ** = ಸಮಾಹಿತರಾಗಿರುವರೊ **ತೇ ಏವ** = ಅಂತಹವರೇ **ಭವ-ಪಾಶ-ಬಂಧೈಃ** = ಸಂಸಾರಪಾಶಗಳ ಬಂಧಗಳಿಂದ **ಮುಕ್ತಾಃ** = ಮುಕ್ತಿಯನ್ನು ಹೊಂದಿರುವರು — **ಪಾರೋಕ್ಷ್ಯ-ಕಥಾ-ಅಭಿಧಾಯಿನಃ** = ಪರೋಕ್ಷವಾಗಿರುವ ಮಾತುಗಳನ್ನು ಆಡುವವರಾದ **ಅನ್ಯೇ** = ಇತರರು **ನ ತು** = ಅಲ್ಲ.

**೩೫೫.** ಯಾರು ತಮ್ಮ ಹೊರಗಿನ ಶ್ರೋತ್ರಾದಿ ಇಂದ್ರಿಯಸಮೂಹವನ್ನೂ ಚಿತ್ತವನ್ನೂ ಅಹಂಕಾರವನ್ನೂ ಚಿದಾತ್ಮನಲ್ಲಿ ಲಯಮಾಡಿಕೊಂಡು ಸಮಾಹಿತರಾಗಿರುವರೊ ಅವರೇ ಸಂಸಾರಪಾಶದ ಬಂಧಗಳಿಂದ ಮುಕ್ತರಾಗಿರುವರು — ಪರೋಕ್ಷವಾದ ಮಾತುಗಳನ್ನಾಡುವ ಇತರರಲ್ಲ.[೧]

[[೧] ಸಮಾಧಿಯಿಲ್ಲದೆ ಕೇವಲ ಶ್ರವಣದಿಂದ ಬ್ರಹ್ಮಾನುಭವವು ಉಂಟಾಗುವುದಿಲ್ಲ ಎಂಬುದು ತಾತ್ಪರ್ಯ.]

ಉಪಾಧಿ-ಭೇದಾತ್ ಸ್ವಯಮೇವ ಭಿದ್ಯತೇ
ಚೋಪಾಧ್ಯಪೋಹೇ ಸ್ವಯಮೇವ ಕೇವಲಃ ।
ತಸ್ಮಾದುಪಾಧೇರ್ವಿಲಯಾಯ ವಿದ್ವಾನ್
ವಸೇತ್ ಸದಾಽಕಲ್ಪಸಮಾಧಿನಿಷ್ಠಯಾ ॥ ೩೫೬ ॥

**ಉಪಾಧಿ-ಭೇದಾತ್** = ಉಪಾಧಿಭೇದಗಳ ದೆಸೆಯಿಂದ **ಸ್ವಯಮ್ ಏವ** = ತಾನೇ **ಭಿದ್ಯತೇ** = ಭೇದಭಾವವನ್ನು ಹೊಂದುತ್ತಾನೆ, **ಉಪಾಧಿ-ಅಪೋಹೇ ಚ** = ಮತ್ತು ಉಪಾಧಿಗಳ ನಿರಸನವಾದಾಗ **ಸ್ವಯಮ್ ಏವ** = ತಾನೇ **ಕೇವಲಃ** = ಕೇವಲನಾಗುತ್ತಾನೆ; **ತಸ್ಮಾತ್** = ಆದುದರಿಂದ **ವಿದ್ವಾನ್** = ಜ್ಞಾನಿಯು **ಉಪಾಧೇಃ** = ಉಪಾಧಿಯ **ವಿಲಯಾಯ** = ನಾಶಕ್ಕಾಗಿ **ಸದಾ** = ಯಾವಾಗಲೂ **ಅಕಲ್ಪ-ಸಮಾಧಿ-ನಿಷ್ಠಯಾ** = ನಿರ್ವಿಕಲ್ಪ-ಸಮಾಧಿ-ನಿಷ್ಠೆಯಿಂದ **ವಸೇತ್** = ಇರಬೇಕು.

**೩೫೬.** ಆತ್ಮನು ಒಬ್ಬನೇ ಆಗಿದ್ದರೂ ಉಪಾಧಿಗಳ ಭೇದದಿಂದ ಭೇದಭಾವವನ್ನು ಹೊಂದುತ್ತಾನೆ, ಉಪಾಧಿಗಳನ್ನು ತೆಗೆದುಹಾಕಿದಾಗ[೧] ಒಬ್ಬನೇ

ಆಗುತ್ತಾನೆ. ಆದುದರಿಂದ ಉಪಾಧಿಯ ನಾಶಕ್ಕಾಗಿ ಜ್ಞಾನಿಯು ಯಾವಾಗಲೂ ನಿರ್ವಿಕಲ್ಪಸಮಾಧಿಯ ನಿಷ್ಠೆಯಲ್ಲಿಯೇ ಇರಬೇಕು.

[೧ ಸ್ಫಟಿಕದ ಕೆಳಗಿರುವ ಹೂವನ್ನು ತೆಗೆದಾಗ ಅದು ಸ್ವಚ್ಛವಾಗಿ ಕಾಣುತ್ತದೆ.]

**ಸತಿ ಸಕ್ತೋ ನರೋ ಯಾತಿ ಸದ್ಭಾವಂ ಹ್ಯೇಕನಿಷ್ಠಯಾ ।**
**ಕೀಟಕೋ ಭ್ರಮರಂ ಧ್ಯಾಯನ್ ಭ್ರಮರತ್ವಾಯ ಕಲ್ಪತೇ ॥ ೩೫೭ ॥**

**ಸತಿ** – ಬ್ರಹ್ಮದಲ್ಲಿ **ಸಕ್ತಃ** – ಆಸಕ್ತನಾಗಿರುವ **ನರಃ** – ಮನುಷ್ಯನು **ಏಕ-ನಿಷ್ಠಯಾ** – ತದೇಕನಿಷ್ಠೆಯಿಂದಲೇ **ಸದ್ಭಾವಂ** – ಬ್ರಹ್ಮಭಾವವನ್ನು **ಯಾತಿ** – ಹೊಂದುತ್ತಾನೆ; **ಕೀಟಕಃ** – ಕೀಟವು **ಭ್ರಮರಂ** – ಭ್ರಮರವನ್ನು **ಧ್ಯಾಯನ್** – ಚಿಂತಿಸುತ್ತ **ಭ್ರಮರತ್ವಾಯ ಕಲ್ಪತೇ** – ಭ್ರಮರವೇ ಆಗುತ್ತದೆ.

**೩೫೭.** ಸದ್ರೂಪವಾದ ಬ್ರಹ್ಮದಲ್ಲಿ ಆಸಕ್ತನಾಗಿರುವ ಮನುಷ್ಯನು ತದೇಕನಿಷ್ಠೆಯಿಂದ ತಾನೇ ಬ್ರಹ್ಮಭಾವವನ್ನು ಹೊಂದುತ್ತಾನೆ. ಕೀಟವು ಭ್ರಮರವನ್ನೇ ಚಿಂತಿಸುತ್ತ ತಾನೂ ಭ್ರಮರವಾಗುತ್ತದೆ.

[ಸಮಾಧಿನಿಷ್ಠನಾದವನಿಗೆ ಹೇಗೆ ಬ್ರಹ್ಮಾಕಾರವುಂಟಾಗುತ್ತದೆಂದು ದೃಷ್ಟಾಂತದ ಮೂಲಕ ಹೇಳಿದೆ.]

**ಕ್ರಿಯಾಂತರಾಸಕ್ತಿಮಪಾಸ್ಯ ಕೀಟಕೋ**
**ಧ್ಯಾಯನ್ನಲಿತ್ವಂ ಹ್ಯಲಿಭಾವಮೃಚ್ಛತಿ ।**
**ತಥೈವ ಯೋಗೀ ಪರಮಾತ್ಮತತ್ತ್ವಂ**
**ಧ್ಯಾತ್ವಾ ಸಮಾಯಾತಿ ತದೇಕನಿಷ್ಠಯಾ ॥ ೩೫೮ ॥**

**ಕೀಟಕಃ** – ಕೀಟವು **ಕ್ರಿಯಾ-ಅಂತರ-ಆಸಕ್ತಿಂ** – ಬೇರೆ ಕೆಲಸದಲ್ಲಿ ಆಸಕ್ತಿಯನ್ನು **ಅಪಾಸ್ಯ** – ಬಿಟ್ಟು **ಅಲಿತ್ವಂ** – ಭ್ರಮರಭಾವವನ್ನು **ಧ್ಯಾಯನ್** – ಚಿಂತಿಸುತ್ತ [ಹೇಗೆ] **ಅಲಿಭಾವಂ** – ಭ್ರಮರಭಾವವನ್ನು **ಋಚ್ಛತಿ ಹಿ** – ಹೊಂದುತ್ತದೆಯೊ **ತಥಾ ಏವ** – ಹಾಗೆಯೇ **ಯೋಗೀ** – ಯೋಗಿಯು **ಪರಮಾತ್ಮ-ತತ್ತ್ವಂ** – ಪರಮಾತ್ಮತತ್ತ್ವವನ್ನು **ತದೇಕನಿಷ್ಠಯಾ** – ತದೇಕನಿಷ್ಠೆಯಿಂದಲೇ **ಧ್ಯಾತ್ವಾ** – ಧ್ಯಾನಿಸುತ್ತ [ಅದನ್ನೇ] **ಸಮಾಯಾತಿ** – ಹೊಂದುತ್ತಾನೆ.

**೩೫೮.** ಹೇಗೆ ಕೀಟವು ಬೇರೆ ಕೆಲಸದಲ್ಲಿ ಆಸಕ್ತಿಯನ್ನು ಬಿಟ್ಟು ಭ್ರಮರವನ್ನೇ ಚಿಂತಿಸುತ್ತ ಭ್ರಮರಭಾವವನ್ನೇ ಹೊಂದುತ್ತದೆಯೊ ಹಾಗೆಯೇ ಯೋಗಿಯು ಪರಮಾತ್ಮ-ತತ್ತ್ವವನ್ನು ತದೇಕನಿಷ್ಠೆಯಿಂದ ಧ್ಯಾನಿಸುತ್ತ ಅದೇ ರೂಪವನ್ನು ಹೊಂದುತ್ತಾನೆ.

**ಅತೀವ ಸೂಕ್ಷ್ಮಂ ಪರಮಾತ್ಮ-ತತ್ತ್ವಂ**
**ನ ಸ್ಥೂಲದೃಷ್ಟ್ಯಾ ಪ್ರತಿಪತ್ತುಮರ್ಹತಿ ।**
**ಸಮಾಧಿನಾತ್ಯಂತ-ಸುಸೂಕ್ಷ್ಮ-ವೃತ್ತ್ಯಾ**
**ಜ್ಞಾತವ್ಯಮಾರ್ಯೈರತಿಶುದ್ಧಬುದ್ಧಿಭಿಃ ॥ ೩೫೯ ॥**

**ಪರಮಾತ್ಮ-ತತ್ತ್ವಂ** = ಪರಮಾತ್ಮತತ್ತ್ವವು **ಅತೀವ** = ಅತ್ಯಂತ **ಸೂಕ್ಷ್ಮಂ** = ಸೂಕ್ಷ್ಮವಾದದ್ದು; **ಸ್ಥೂಲದೃಷ್ಟ್ಯಾ** = ಸ್ಥೂಲದೃಷ್ಟಿಯಿಂದ **ಪ್ರತಿಪತ್ತುಂ** = ತಿಳಿಯುವುದಕ್ಕೆ **ನ ಅರ್ಹತಿ** = ಆಗುವುದಿಲ್ಲ; **ಅತಿ-ಶುದ್ಧ-ಬುದ್ಧಿಭಿಃ** = ಅತ್ಯಂತ ಶುದ್ಧವಾದ ಬುದ್ಧಿಯುಳ್ಳ **ಆರ್ಯೈಃ** = ಆರ್ಯರಿಂದ **ಅತ್ಯಂತ-ಸುಸೂಕ್ಷ್ಮ-ವೃತ್ತ್ಯಾ** = ಅತ್ಯಂತ ಸೂಕ್ಷ್ಮವಾದ ವೃತ್ತಿಯುಳ್ಳ **ಸಮಾಧಿನಾ** = ಸಮಾಧಿಯಿಂದ **ಜ್ಞಾತವ್ಯಂ** = ತಿಳಿಯುತಕ್ಕದ್ದು.

**೩೫೯.** ಪರಮಾತ್ಮ-ತತ್ತ್ವವು ಅತ್ಯಂತ ಸೂಕ್ಷ್ಮವಾದದ್ದು. ಸ್ಥೂಲವಸ್ತುವನ್ನು ವಿಷಯೀಕರಿಸುವ ದೃಷ್ಟಿಯಿಂದ ಅದನ್ನು ತಿಳಿಯುವುದಕ್ಕೆ ಆಗುವುದಿಲ್ಲ; ಅತ್ಯಂತ ಶುದ್ಧವಾದ ಬುದ್ಧಿಯುಳ್ಳ ಆರ್ಯರು[೧] ಅತಿ ಸೂಕ್ಷ್ಮವಾದ ವೃತ್ತಿಯುಳ್ಳ ಸಮಾಧಿಯಿಂದ ಅದನ್ನು ತಿಳಿಯತಕ್ಕದ್ದು.

[[೧] ಶ್ರುತಿ ಸ್ಮೃತಿ—ಇವುಗಳು ನಿರ್ದೇಶಿಸಿರುವ ಮಾರ್ಗದಲ್ಲಿ ಹೋಗುವವರು.]

**ಯಥಾ ಸುವರ್ಣಂ ಪುಟಪಾಕಶೋಧಿತಂ**
**ತ್ಯಕ್ತ್ವಾ ಮಲಂ ಸ್ವಾತ್ಮಗುಣಂ ಸಮೃಚ್ಛತಿ ।**
**ತಥಾ ಮನಃ ಸತ್ತ್ವರಜಸ್ತಮೋಮಲಂ**
**ಧ್ಯಾನೇನ ಸಂತ್ಯಜ್ಯ ಸಮೇತಿ ತತ್ತ್ವಮ್ ॥ ೩೬೦ ॥**

**ಯಥಾ** = ಹೇಗೆ **ಪುಟಪಾಕಶೋಧಿತಂ** = ಪುಟಪಾಕದಿಂದ ಶೋಧಿಸಲ್ಪಟ್ಟ **ಸುವರ್ಣಂ** = ಚಿನ್ನವು **ಮಲಂ** = ಕಶ್ಮಲವನ್ನು **ತ್ಯಕ್ತ್ವಾ** = ಬಿಟ್ಟು **ಸ್ವ-ಆತ್ಮ-ಗುಣಂ** = ತನ್ನ ಗುಣವನ್ನು **ಸಮೃಚ್ಛತಿ** = ಹೊಂದುತ್ತದೆಯೊ **ತಥಾ** = ಹಾಗೆಯೇ **ಮನಃ** = ಮನಸ್ಸು **ಸತ್ತ್ವರಜಸ್ತಮೋಮಲಂ** = ಸತ್ತ್ವರಜಸ್ಸು ತಮಸ್ಸು-ಇವುಗಳ ಕಶ್ಮಲವನ್ನು **ಧ್ಯಾನೇನ** = ಧ್ಯಾನದಿಂದ **ಸಂತ್ಯಜ್ಯ** = ಬಿಟ್ಟು **ತತ್ತ್ವಂ** = ಪರಮಾರ್ಥತತ್ತ್ವವನ್ನು **ಸಮೇತಿ** = ಹೊಂದುತ್ತದೆ.

**೩೬೦.** ಹೇಗೆ ಪುಟಪಾಕದಿಂದ ಶೋಧಿಸಲ್ಪಟ್ಟ ಚಿನ್ನವು ತನ್ನ ಕಶ್ಮಲವನ್ನು ಬಿಟ್ಟು ನಿಜವಾದ ಗುಣವನ್ನು ಹೊಂದುತ್ತದೆಯೊ ಹಾಗೆಯೆ ಮನಸ್ಸು ಸತ್ತ್ವರಜಸ್ತಮೋಗುಣಗಳ ಕಶ್ಮಲವನ್ನು ಧ್ಯಾನದಿಂದ ಬಿಟ್ಟು ಪರಮಾರ್ಥತತ್ತ್ವವನ್ನೇ ಹೊಂದುತ್ತದೆ.

**ನಿರಂತರಾಭ್ಯಾಸವಶಾತ್ ತದಿತ್ಥಂ**
**ಪಕ್ವಂ ಮನೋ ಬ್ರಹ್ಮಣಿ ಲೀಯತೇ ಯದಾ ।**
**ತದಾ ಸಮಾಧಿಃ ಸವಿಕಲ್ಪವರ್ಜಿತಃ**
**ಸ್ವತೋಽದ್ವಯಾನಂದ-ರಸಾನುಭಾವಕಃ ॥ ೩೬೧ ॥**

**ಇತ್ಥಂ** = ಹೀಗೆ **ನಿರಂತರ-ಅಭ್ಯಾಸ-ವಶಾತ್** = ನಿರಂತರ-ಧ್ಯಾನಾಭ್ಯಾಸದ ವಶದಿಂದ **ತತ್ ಮನಃ** = ಆ ಮನಸ್ಸು **ಪಕ್ವಂ** = ಪಕ್ವವಾಗಿ **ಯದಾ** = ಯಾವಾಗ **ಬ್ರಹ್ಮಣಿ** = ಬ್ರಹ್ಮದಲ್ಲಿ **ಲೀಯತೇ** = ಲಯವಾಗುತ್ತದೆಯೊ **ತದಾ** = ಆಗ **ಸ್ವತಃ** = ತಾನೇ **ಅದ್ವಯಾನಂದ-ರಸ-ಅನುಭಾವಕಃ** = ಬ್ರಹ್ಮಾನಂದ-ರಸಾನುಭವಕ್ಕೆ ಕಾರಣವಾದ **ಸವಿಕಲ್ಪವರ್ಜಿತಃ** = ವಿಕಲ್ಪರಹಿತವಾದ **ಸಮಾಧಿಃ** = ಸಮಾಧಿಯಾಗುತ್ತದೆ.

**೩೬೧.** ಹೀಗೆ ನಿರಂತರಧ್ಯಾನಾಭ್ಯಾಸದ ವಶದಿಂದ ಆ ಮನಸ್ಸು ಪಕ್ವವಾಗಿ ಯಾವಾಗ ಬ್ರಹ್ಮದಲ್ಲಿ ಲಯವಾಗುತ್ತದೆಯೊ ಆಗ ತಾನೇ ಬ್ರಹ್ಮಾನಂದ ರಸದ ಅನುಭವಕ್ಕೆ ಕಾರಣವಾದ ನಿರ್ವಿಕಲ್ಪಸಮಾಧಿಯಾಗುತ್ತದೆ.

**ಸಮಾಧಿನಾಽನೇನ ಸಮಸ್ತ-ವಾಸನಾ-**
**ಗ್ರಂಥೇರ್ವಿನಾಶೋಽಖಿಲಕರ್ಮನಾಶಃ ।**
**ಅಂತರ್ಬಹಿಃ ಸರ್ವತ ಏವ ಸರ್ವದಾ**
**ಸ್ವರೂಪ-ವಿಸ್ಫೂರ್ತಿರಯತ್ನತಃ ಸ್ಯಾತ್ ॥ ೩೬೨ ॥**

**ಅನೇನ ಸಮಾಧಿನಾ** = ಈ ಸಮಾಧಿಯಿಂದ **ಸಮಸ್ತ-ವಾಸನಾ-ಗ್ರಂಥೇಃ** = ಸಮಸ್ತ ವಾಸನಾ-ಗ್ರಂಥಿಯ **ವಿನಾಶಃ** = ನಾಶವೂ **ಅಖಿಲ-ಕರ್ಮ-ನಾಶಃ** = ಸಮಸ್ತ ಕರ್ಮಗಳ ನಾಶವೂ [ಆಗಿ] **ಅಂತಃ** = ಒಳಗೂ **ಬಹಿಃ** = ಹೊರಗೂ **ಸರ್ವತಃ ಏವ** = ಎಲ್ಲಾ ಕಡೆಗಳಲ್ಲಿಯೂ **ಸರ್ವದಾ** = ಯಾವಾಗಲೂ **ಅಯತ್ನತಃ** = ಯಾವ ಪ್ರಯತ್ನವೂ ಇಲ್ಲದೆ **ಸ್ವರೂಪ-ವಿಸ್ಫೂರ್ತಿಃ** = ಆತ್ಮಸ್ವರೂಪದ ಪ್ರಕಾಶವು **ಸ್ಯಾತ್** = ಉಂಟಾಗುತ್ತದೆ.

**೩೬೨.** ಈ ನಿರ್ವಿಕಲ್ಪ-ಸಮಾಧಿಯಿಂದ ಸಮಸ್ತ ವಾಸನಾ-ಗ್ರಂಥಿಯ ನಾಶವೂ (ಸಂಚಿತವಾದ) ಸಮಸ್ತಕರ್ಮಗಳ ನಾಶವೂ ಆಗಿ, ಒಳಗೂ ಹೊರಗೂ ಎಲ್ಲಾ ಕಡೆಗಳಲ್ಲಿಯೂ ಯಾವಾಗಲೂ ಯಾವ ಪ್ರಯತ್ನವೂ ಇಲ್ಲದೆ ಆತ್ಮಸ್ವರೂಪದ ಪ್ರಕಾಶವು ಉಂಟಾಗುತ್ತದೆ.

**ಶ್ರುತೇಃ ಶತಗುಣಂ ವಿದ್ಯಾನ್ಮನನಂ ಮನನಾದಪಿ ।**
**ನಿದಿಧ್ಯಾಸಂ ಲಕ್ಷಗುಣಮನಂತಂ ನಿರ್ವಿಕಲ್ಪಕಮ್ ॥ ೩೬೩ ॥**

**ಶ್ರುತೇಃ** = ಶ್ರವಣಕ್ಕಿಂತ **ಮನನಂ** = ಮನನವು **ಶತಗುಣಂ** = ನೂರುಪಾಲು ಅಧಿಕವಾದದ್ದೆಂದು **ವಿದ್ಯಾತ್** = ತಿಳಿಯಬೇಕು; **ಮನನಾತ್ ಅಪಿ** = ಮನನಕ್ಕಿಂತಲೂ **ನಿದಿಧ್ಯಾಸಂ** = ನಿದಿಧ್ಯಾಸವು **ಲಕ್ಷಗುಣಂ** = ಲಕ್ಷದಷ್ಟು ಹೆಚ್ಚೆಂದು [ತಿಳಿಯಬೇಕು]; **ನಿರ್ವಿಕಲ್ಪಕಂ** = ನಿರ್ವಿಕಲ್ಪಸಮಾಧಿಯನ್ನು **ಅನಂತಂ** = [ನಿದಿಧ್ಯಾಸಕ್ಕಿಂತ] ಅನಂತಗುಣಾಧಿಕವಾದದ್ದೆಂದು [ತಿಳಿಯಬೇಕು].

**೩೬೩.** ಶ್ರವಣಕ್ಕಿಂತ ಮನನವು ನೂರುಪಾಲು ಅಧಿಕವೆಂದೂ, ಮನನಕ್ಕಿಂತ ನಿದಿಧ್ಯಾಸವು ಲಕ್ಷದಷ್ಟು ಹೆಚ್ಚೆಂದೂ, (ನಿದಿಧ್ಯಾಸಕ್ಕಿಂತ) ನಿರ್ವಿಕಲ್ಪ ಸಮಾಧಿಯು ಅನಂತಗುಣಾಧಿಕವಾದದ್ದೆಂದೂ ತಿಳಿಯಬೇಕು.

**ನಿರ್ವಿಕಲ್ಪಸಮಾಧಿನಾ ಸ್ಫುಟಂ**
**ಬ್ರಹ್ಮತತ್ತ್ವಮವಗಮ್ಯತೇ ಧ್ರುವಮ್ ।**
**ನಾನ್ಯಥಾ ಚಲತಯಾ ಮನೋಗತೇಃ**
**ಪ್ರತ್ಯಯಾಂತರ-ವಿಮಿಶ್ರಿತಂ ಭವೇತ್ ॥ ೩೬೪ ॥**

**ನಿರ್ವಿಕಲ್ಪ-ಸಮಾಧಿನಾ** = ನಿರ್ವಿಕಲ್ಪಸಮಾಧಿಯಿಂದ **ಬ್ರಹ್ಮ-ತತ್ತ್ವಂ** = ಬ್ರಹ್ಮತತ್ತ್ವವು **ಸ್ಫುಟಂ** = ಸ್ಫುಟವಾಗಿ **ಅವಗಮ್ಯತೇ** = ತಿಳಿಯಲ್ಪಡುತ್ತದೆ, **ಧ್ರುವಂ** = ನಿಶ್ಚಯವು, **ಅನ್ಯಥಾ** = ಬೇರೆ ವಿಧದಿಂದ **ನ** = ಆಗುವುದಿಲ್ಲ; **ಮನೋಗತೇಃ** = ಮನೋಗತಿಯ **ಚಲತಯಾ** = ಚಾಂಚಲ್ಯದಿಂದ **ಪ್ರತ್ಯಯಾಂತರ-ವಿಮಿಶ್ರಿತಂ ಭವೇತ್** = ಬೇರೆ ಪ್ರತ್ಯಯಗಳಿಂದ ವಿಮಿಶ್ರಿತವಾಗುತ್ತದೆ.

**೩೬೪.** ನಿರ್ವಿಕಲ್ಪ-ಸಮಾಧಿಯಿಂದ ಬ್ರಹ್ಮತತ್ತ್ವವು ಸ್ಫುಟವಾಗಿ ಗೊತ್ತಾಗುತ್ತದೆ; ಇದು ನಿಶ್ಚಯ. ಬೇರೆ ವಿಧದಿಂದ ಆಗುವುದಿಲ್ಲ; (ಏಕೆಂದರೆ) ಮನೋಗತಿಯು ಚಂಚಲವಾಗಿರುವುದರಿಂದ ಬೇರೆ ಪ್ರತ್ಯಯಗಳೊಂದಿಗೆ ಮಿಶ್ರಿತವಾಗುತ್ತದೆ.

**ಅತಃ ಸಮಾಧತ್ಸ್ವ ಯತೇಂದ್ರಿಯಃ ಸನ್**
**ನಿರಂತರಂ ಶಾಂತಮನಾಃ ಪ್ರತೀಚಿ ।**
**ವಿಧ್ವಂಸಯ ಧ್ವಾಂತಮನಾದ್ಯವಿದ್ಯಯಾ**
**ಕೃತಂ ಸದೇಕತ್ವ-ವಿಲೋಕನೇನ ॥ ೩೬೫ ॥**

**ಅತಃ** = ಆದುದರಿಂದ **ನಿರಂತರಂ** = ಯಾವಾಗಲೂ **ಯತೇಂದ್ರಿಯಃ ಸನ್** = ನಿಯಮಿಸಲ್ಪಟ್ಟ ಇಂದ್ರಿಯಗಳುಳ್ಳವನಾಗಿ **ಶಾಂತಮನಾಃ** = ಶಾಂತವಾದ ಮನಸ್ಸುಳ್ಳವನಾಗಿ **ಪ್ರತೀಚಿ** = ಪ್ರತ್ಯಗಾತ್ಮನಲ್ಲಿ **ಸಮಾಧತ್ಸ್ವ** = ಮನಸ್ಸನ್ನು ನಿಲ್ಲಿಸು; **ಸತ್-ಏಕತ್ವ-ವಿಲೋಕನೇನ** = ಸದಾತ್ಮನು ಒಬ್ಬನೇ ಎಂಬ ಸಾಕ್ಷಾತ್ಕಾರದಿಂದ **ಅನಾದಿ**

**ಅವಿದ್ಯಯಾ** = ಅನಾದಿಸಿದ್ಧವಾದ ಅವಿದ್ಯೆಯಿಂದ **ಕೃತಂ** = ಮಾಡಲ್ಪಟ್ಟ **ಧ್ವಾಂತಂ**= ಕತ್ತಲೆಯನ್ನು **ವಿಧ್ವಂಸಯ** = ನಾಶಪಡಿಸಿಕೊ.

**೩೬೫.** ಆದುದರಿಂದ ಯಾವಾಗಲೂ ಇಂದ್ರಿಯಗಳನ್ನು ನಿಯಮಿಸಿಕೊಂಡು ಶಾಂತಮನಸ್ಸುಳ್ಳವನಾಗಿ ಪ್ರತ್ಯಗಾತ್ಮನಲ್ಲಿ ಮನಸ್ಸನ್ನು ನಿಲ್ಲಿಸು; ಸದಾತ್ಮನು ಒಬ್ಬನೇ ಎಂಬುದನ್ನು ಸಾಕ್ಷಾತ್ಕರಿಸಿಕೊಂಡು ಅನಾದಿಸಿದ್ಧವಾದ ಅವಿದ್ಯೆಯಿಂದ ಉಂಟಾದ ಮೋಹಾಂಧಕಾರವನ್ನು ನಾಶಪಡಿಸಿಕೊ.

**ಯೋಗಸ್ಯ ಪ್ರಥಮದ್ವಾರಂ ವಾಙ್ನಿರೋಧೋಽಪರಿಗ್ರಹಃ ।**
**ನಿರಾಶಾ ಚ ನಿರೀಹಾ ಚ ನಿತ್ಯಮೇಕಾಂತಶೀಲತಾ ॥ ೩೬೬ ॥**

**ವಾಕ್-ನಿರೋಧಃ** = ವಾಕ್ಸಂಯಮ, **ಅಪರಿಗ್ರಹಃ** = ಪ್ರತಿಗ್ರಹಮಾಡದಿರುವುದು, **ನಿರಾಶಾ ಚ** = ಆಶೆಯಿಲ್ಲದಿರುವುದು, **ನಿರೀಹಾ ಚ** = ಕರ್ಮವನ್ನು ಮಾಡದಿರುವುದು, **ನಿತ್ಯಮ್ ಏಕಾಂತಶೀಲತಾ** = ಯಾವಾಗಲೂ ಏಕಾಂತದಲ್ಲಿರುವುದು– [ಇವು] **ಯೋಗಸ್ಯ** = ಯೋಗದ **ಪ್ರಥಮದ್ವಾರಂ** = ಮೊದಲನೆಯ ಬಾಗಿಲು.

**೩೬೬.** ವಾಕ್ಸಂಯಮ,[೧] ಅಪರಿಗ್ರಹ, ಆಶೆಯಿಲ್ಲದಿರುವುದು, ಕರ್ಮವಿಲ್ಲದಿರುವುದು, ನಿತ್ಯವೂ ಏಕಾಂತದಲ್ಲಿರುವುದು — ಇವು ಯೋಗಕ್ಕೆ ಮೊದಲನೆಯ ಬಾಗಿಲು.

[೧ ಮೌನ ಅಥವಾ ಮಿತಭಾಷಣ.]

**ಏಕಾಂತಸ್ಥಿತಿರಿಂದ್ರಿಯೋಪರಮಣೇ ಹೇತುರ್ದಮಶ್ಚೇತಸಃ**
**ಸಂರೋಧೇ ಕರಣಂ ಶಮೇನ ವಿಲಯಂ ಯಾಯಾದಹಂವಾಸನಾ ।**
**ತೇನಾನಂದರಸಾನುಭೂತಿರಚಲಾ ಬ್ರಾಹ್ಮೀ ಸದಾ ಯೋಗಿನಃ**
**ತಸ್ಮಾಚ್ಚಿತ್ತನಿರೋಧ ಏವ ಸತತಂ ಕಾರ್ಯಃ ಪ್ರಯತ್ನಾನ್ಮುನೇಃ**
**॥ ೩೬೭ ॥**

**ಏಕಾಂತಸ್ಥಿತಿಃ** = ಏಕಾಂತವಾಸವು **ಇಂದ್ರಿಯ-ಉಪರಮಣೇ** = ಇಂದ್ರಿಯನಿಗ್ರಹಕ್ಕೆ **ಹೇತುಃ** = ಕಾರಣವು; **ದಮಃ** = ಇಂದ್ರಿಯನಿಗ್ರಹವು **ಚೇತಸಃ** = ಚಿತ್ತದ **ಸಂರೋಧೇ** = ನಿರೋಧಕ್ಕೆ **ಕರಣಂ** = ಕಾರಣವು; **ಶಮೇನ** = ಚಿತ್ತನಿರೋಧದಿಂದ **ಅಹಂವಾಸನಾ** = ಅಹಂ-ವಾಸನೆಯು **ವಿಲಯಂ ಯಾಯಾತ್** = ಲಯವನ್ನು ಹೊಂದುತ್ತದೆ; **ತೇನ** = ಅದರಿಂದ **ಯೋಗಿನಃ** = ಯೋಗಿಗೆ **ಬ್ರಾಹ್ಮೀ** = ಬ್ರಹ್ಮಸಂಬಂಧವಾಗಿರುವ **ಆನಂದರಸಾನುಭೂತಿಃ** = ಆನಂದರಸಾನುಭವವು **ಸದಾ** = ಯಾವಾಗಲೂ [ಆಗುತ್ತದೆ]; **ತಸ್ಮಾತ್** = ಆದುದರಿಂದ **ಮುನೇಃ** = ಮುನಿಗೆ **ಸತತಂ** = ಯಾವಾ

ಗಲೂ **ಪ್ರಯತ್ನಾತ್** = ಪ್ರಯತ್ನದಿಂದ **ಚಿತ್ತನಿರೋಧಃ ಏವ** = ಚಿತ್ತನಿರೋಧವೇ **ಕಾರ್ಯಃ** = ಕರ್ತವ್ಯವಾಗಿರುವುದು.

**೩೬೭.** ಏಕಾಂತವಾಸವು ಇಂದ್ರಿಯನಿಗ್ರಹಕ್ಕೆ ಕಾರಣವಾಗಿರುವುದು; ಇಂದ್ರಿಯನಿಗ್ರಹವು ಚಿತ್ತದ ನಿರೋಧಕ್ಕೆ ಕಾರಣವಾಗಿರುವುದು; ಚಿತ್ತ ನಿರೋಧದಿಂದ ಅಹಂ-ವಾಸನೆಯು ಲಯವನ್ನು ಹೊಂದುತ್ತದೆ; ಅಹಂ-ವಾಸನೆಯ ಲಯದಿಂದ ಯೋಗಿಗೆ ಬ್ರಹ್ಮಾನಂದರಸದ ಅನುಭವವು ಯಾವಾಗಲೂ ಆಗುತ್ತದೆ. ಆದುದರಿಂದ ಮುನಿಯು ಯಾವಾಗಲೂ ಚಿತ್ತನಿರೋಧವನ್ನೇ ಪ್ರಯತ್ನದಿಂದ ಮಾಡಬೇಕು.

**ವಾಚಂ ನಿಯಚ್ಛಾತ್ಮನಿ ತಂ ನಿಯಚ್ಛ**
**ಬುದ್ಧೌ ಧಿಯಂ ಯಚ್ಛ ಚ ಬುದ್ಧಿಸಾಕ್ಷಿಣಿ ।**
**ತಂ ಚಾಪಿ ಪೂರ್ಣಾತ್ಮನಿ ನಿರ್ವಿಕಲ್ಪೇ**
**ವಿಲಾಪ್ಯ ಶಾಂತಿಂ ಪರಮಾಂ ಭಜಸ್ವ॥ ೩೬೮ ॥**

**ವಾಚಂ** = ವಾಕ್ಕನ್ನು **ಆತ್ಮನಿ** = ಮನಸ್ಸಿನಲ್ಲಿ **ನಿಯಚ್ಛ** = ನಿಯಮಿಸಿಕೊ; **ತಂ** = ಅದನ್ನು **ಬುದ್ಧೌ** = ಬುದ್ಧಿಯಲ್ಲಿ **ನಿಯಚ್ಛ; ಧಿಯಂ ಚ** = ಬುದ್ಧಿಯನ್ನು **ಬುದ್ಧಿಸಾಕ್ಷಿಣಿ**=ಬುದ್ಧಿಯ ಸಾಕ್ಷಿಯಲ್ಲಿ **ಯಚ್ಛ**=ನಿಯಮಿಸಿಕೊ; **ತಂ ಚ ಅಪಿ**= ಅವನನ್ನೂ **ನಿರ್ವಿಕಲ್ಪೇ** = ಕಲ್ಪನಾಶೂನ್ಯನಾದ **ಪೂರ್ಣಾತ್ಮನಿ** = ಪೂರ್ಣಾತ್ಮನಲ್ಲಿ **ವಿಲಾಪ್ಯ** = ಲಯಹೊಂದಿಸಿ **ಪರಮಾಂ ಶಾಂತಿಂ** = ಪರಮಶಾಂತಿಯನ್ನು **ಭಜಸ್ವ**= ಹೊಂದು.

**೩೬೮.** ವಾಕ್ಕನ್ನು[೧] ಮನಸ್ಸಿನಲ್ಲಿ ನಿಯಮಿಸಿಕೊ; ಮನಸ್ಸನ್ನು ಬುದ್ಧಿಯಲ್ಲಿ ನಿಯಮಿಸಿಕೊ; ಬುದ್ಧಿಯನ್ನು ಬುದ್ಧಿಸಾಕ್ಷಿಯಲ್ಲಿ[೨] ನಿಯಮಿಸಿಕೊ; ಬುದ್ಧಿಸಾಕ್ಷಿಯನ್ನು ಕಲ್ಪನಾಶೂನ್ಯನಾದ ಪೂರ್ಣಾತ್ಮನಲ್ಲಿ ಲಯಹೊಂದಿಸಿ ಪರಮಶಾಂತಿಯನ್ನು ಹೊಂದು.

[ಈ ಶ್ಲೋಕದಲ್ಲಿ ಕಠೋಪನಿಷತ್ತಿನ ೧. ೩. ೧೩ರ ಭಾವವಿದೆ: 'ವಿವೇಕಿಯು ವಾಕ್ಕನ್ನು ಮನಸ್ಸಿನಲ್ಲಿ ಲಯಮಾಡಿಕೊಳ್ಳಬೇಕು; ಮನಸ್ಸನ್ನು ಪ್ರಕಾಶರೂಪವಾದ ಬುದ್ಧಿಯಲ್ಲಿ ಲಯಮಾಡಿಕೊಳ್ಳಬೇಕು; ಬುದ್ಧಿಯನ್ನು ಮಹತ್-ಆತ್ಮನಲ್ಲಿ ಲಯಮಾಡಿಕೊಳ್ಳಬೇಕು. ಮಹತ್-ಆತ್ಮನನ್ನು ಶಾಂತನಾದ ಆತ್ಮನಲ್ಲಿ ಲಯಮಾಡಿಕೊಳ್ಳಬೇಕು.'

[೧] ಇದು ಇತರ ಇಂದ್ರಿಯಗಳಿಗೆ ಉಪಲಕ್ಷಣವಾಗಿದೆ.
[೨] ಬುದ್ಧಿಯಿಂದ ಉಪಹಿತನಾದ ಚೈತನ್ಯನಲ್ಲಿ ಎಂದರೆ ಜೀವಾತ್ಮನಲ್ಲಿ.]

**ದೇಹ-ಪ್ರಾಣೇಂದ್ರಿಯ-ಮನೋಬುದ್ಧ್ಯಾದಿಭಿರುಪಾಧಿಭಿಃ ।**
**ಯೈರ್ಯೈರ್ವೃತ್ತೇಃ ಸಮಾಯೋಗಸ್ತತ್ತದ್ಭಾವೋಽಸ್ಯ ಯೋಗಿನಃ**
**॥ ೩೬೯ ॥**

**ಅಸ್ಯ ಯೋಗಿನಃ** = ಈ ಯೋಗಿಗೆ **ದೇಹ-ಪ್ರಾಣ-ಇಂದ್ರಿಯ-ಮನಃ-ಬುದ್ಧಿ-ಆದಿಭಿಃ** = ದೇಹ ಪ್ರಾಣ ಇಂದ್ರಿಯಗಳು ಮನಸ್ಸು ಬುದ್ಧಿ ಮೊದಲಾದ **ಉಪಾಧಿಭಿಃ** = ಉಪಾಧಿಗಳಲ್ಲಿ **ಯೈಃ ಯೈಃ** = ಯಾವಯಾವುದರೊಂದಿಗೆ **ವೃತ್ತೇಃ** = ವೃತ್ತಿಯ **ಸಮಾಯೋಗಃ** = ಸಂಬಂಧವು [ಆಗುತ್ತದೆಯೊ] **ತತ್ತದ್-ಭಾವಃ** = ಆಯಾ ಭಾವವು [ಉಂಟಾಗುತ್ತದೆ].

**೩೬೯.** ಈ ಯೋಗಿಗೆ ದೇಹ ಪ್ರಾಣ ಇಂದ್ರಿಯಗಳು ಮನಸ್ಸು ಬುದ್ಧಿ ಮೊದಲಾದ ಉಪಾಧಿಗಳಲ್ಲಿ ಯಾವಯಾವುದರೊಂದಿಗೆ ಅಂತಃಕರಣವೃತ್ತಿಯ ಸಂಬಂಧವಾಗುತ್ತದೆಯೊ ಆಯಾ ಭಾವವುಂಟಾಗುತ್ತದೆ.[೧]

[೧ ಯೋಗಿಯ ಮನಸ್ಸು ಸ್ಥೂಲಶರೀರದಲ್ಲಿ ನೆಲೆಗೊಂಡಿದ್ದರೆ ಅವನು ದೇಹಾತ್ಮಭಾವವನ್ನು ಹೊಂದುತ್ತಾನೆ. ಹೀಗೆಯೇ ಆತ್ಮನಲ್ಲಿ ನೆಲೆಗೊಂಡರೆ ಆತ್ಮಭಾವವನ್ನು ಹೊಂದುತ್ತಾನೆ ಎಂದು ತಿಳಿದುಕೊಳ್ಳುತ್ತಾನೆ.]

**ತನ್ನಿವೃತ್ತ್ಯಾ ಮುನೇಃ ಸಮ್ಯಕ್ ಸರ್ವೋಪರಮಣಂ ಸುಖಮ್ ।**
**ಸಂದೃಶ್ಯತೇ ಸದಾನಂದ-ರಸಾನುಭವ-ವಿಪ್ಲವಃ ॥ ೩೭೦ ॥**

**ತತ್-ನಿವೃತ್ತ್ಯಾ** = ಅವುಗಳ ಪರಿಹಾರದಿಂದ **ಮುನೇಃ** = ಮುನಿಗೆ **ಸರ್ವ-ಉಪರಮಣಂ** = ಸರ್ವೇಂದ್ರಿಯ-ಉಪರತಿರೂಪದ **ಸುಖಂ** = ಸುಖವು **ಸಮ್ಯಕ್** = ಚೆನ್ನಾಗಿ [ಉಂಟಾಗುತ್ತದೆ], **ಸದಾನಂದ-ರಸಾನುಭವ-ವಿಪ್ಲವಃ** = ಸದಾನಂದ ರಸಾನುಭವದ ಪರಿಪೂರ್ಣತೆಯು **ಸಂದೃಶ್ಯತೇ** = ಕಂಡುಬರುತ್ತದೆ.

**೩೭೦.** ಅವುಗಳ ಪರಿಹಾರದಿಂದ ಮುನಿಗೆ ಸರ್ವೇಂದ್ರಿಯಗಳ ಉಪರತಿ ರೂಪವುಳ್ಳ ಸುಖವು ಚೆನ್ನಾಗಿ ಉಂಟಾಗುತ್ತದೆ, ಸದಾನಂದ-ರಸಾನುಭವದ ಪರಿಪೂರ್ಣತೆಯು ಕಂಡುಬರುತ್ತದೆ.

**ಅಂತಸ್ತ್ಯಾಗೋ ಬಹಿಸ್ತ್ಯಾಗೋ ವಿರಕ್ತಸ್ಯೈವ ಯುಜ್ಯತೇ ।**
**ತ್ಯಜತ್ಯಂತರ್ಬಹಿಃಸಂಗಂ ವಿರಕ್ತಸ್ತು ಮುಮುಕ್ಷಯಾ ॥ ೩೭೧ ॥**

**ಅಂತಸ್ತ್ಯಾಗಃ** = ಒಳಗಿನ ತ್ಯಾಗವೂ **ಬಹಿಸ್ತ್ಯಾಗಃ** = ಹೊರಗಿನ ತ್ಯಾಗವೂ **ವಿರಕ್ತಸ್ಯ ಏವ** = ವಿರಕ್ತನಾದವನಿಗೇ **ಯುಜ್ಯತೇ** = ಯುಕ್ತವಾಗುತ್ತದೆ; **ವಿರಕ್ತಃ ತು** = ವಿರಕ್ತನಾದವನೇ **ಮುಮುಕ್ಷಯಾ** = ಮೋಕ್ಷೇಚ್ಛೆಯಿಂದ **ಅಂತಃ** = ಒಳಗಿನ **ಬಹಿಃ** = ಹೊರಗಿನ **ಸಂಗಂ** = ಆಸಕ್ತಿಯನ್ನು **ತ್ಯಜತಿ** = ಬಿಡುತ್ತಾನೆ.

**೩೭೧.** ಒಳಗಿನ ತ್ಯಾಗ ಮತ್ತು ಹೊರಗಿನ ತ್ಯಾಗ— ಇವೆರಡೂ ವಿರಕ್ತನಾದವನಿಗೇ ಯುಕ್ತವಾಗಿರುತ್ತವೆ. ವಿರಕ್ತನಾದವನೇ ಮೋಕ್ಷೇಚ್ಛೆಯಿಂದ ಒಳಗಿನ ಮತ್ತು ಹೊರಗಿನ ಆಸಕ್ತಿಯನ್ನು ಬಿಡುತ್ತಾನೆ.

**ಬಹಿಸ್ತು ವಿಷಯೈಃ ಸಂಗಂ ತಥಾಽಂತರಹಮಾದಿಭಿಃ ।**
**ವಿರಕ್ತ ಏವ ಶಕ್ನೋತಿ ತ್ಯಕ್ತುಂ ಬ್ರಹ್ಮಣಿ ನಿಷ್ಠಿತಃ　　॥ ೩೭೨ ॥**

**ಬ್ರಹ್ಮಣಿ** = ಬ್ರಹ್ಮದಲ್ಲಿ **ನಿಷ್ಠಿತಃ** = ನೆಲೆಗೊಂಡಿರುವ **ವಿರಕ್ತಃ ಏವ** = ವಿರಕ್ತನಾದವನೇ **ಬಹಿಃ ತು** = ಹೊರಗೆ **ವಿಷಯೈಃ** = ವಿಷಯುಗಳೊಡನೆ **ಸಂಗಂ** = ಸಂಗವನ್ನು **ಅಂತಃ** = ಒಳಗೆ **ಅಹಮ್-ಆದಿಭಿಃ** = ಅಹಂಕಾರಾದಿಗಳೊಡನೆ [ಸಂಗವನ್ನು] **ತ್ಯಕ್ತುಂ** = ಬಿಡಲು **ಶಕ್ನೋತಿ** = ಸಮರ್ಥನಾಗುತ್ತಾನೆ.

**೩೭೨.** ಬ್ರಹ್ಮದಲ್ಲಿ ನೆಲೆಗೊಂಡಿರುವ ವಿರಕ್ತನಾದವನೇ ಹೊರಗೆ ವಿಷಯಗಳ ಸಂಗವನ್ನೂ ಒಳಗೆ ಅಹಂಕಾರಾದಿಗಳ ಸಂಗವನ್ನೂ ಬಿಡಲು ಸಮರ್ಥನಾಗುತ್ತಾನೆ.

**ವೈರಾಗ್ಯ-ಬೋಧೌ ಪುರುಷಸ್ಯ ಪಕ್ಷಿವತ್**
**ಪಕ್ಷೌ ವಿಜಾನೀಹಿ ವಿಚಕ್ಷಣ ತ್ವಮ್ ।**
**ವಿಮುಕ್ತಿ-ಸೌಧಾಗ್ರ-ತಲಾಧಿರೋಹಣಂ**
**ತಾಭ್ಯಾಂ ವಿನಾ ನಾನ್ಯತರೇಣ ಸಿಧ್ಯತಿ　　॥ ೩೭೩ ॥**

**ವಿಚಕ್ಷಣ** = ಎಲೈ ವಿವೇಕಿಯೆ, **ವೈರಾಗ್ಯ-ಬೋಧೌ** = ವೈರಾಗ್ಯ-ಜ್ಞಾನಗಳೆರಡೂ **ಪುರುಷಸ್ಯ** = ಮನುಷ್ಯನ **ಪಕ್ಷೌ** = ರೆಕ್ಕೆಗಳು, **ಪಕ್ಷಿವತ್** = ಪಕ್ಷಿಗೆ ಹೇಗೋ ಹಾಗೆ, [ಎಂದು] **ತ್ವಂ** = ನೀನು **ವಿಜಾನೀಹಿ** = ತಿಳಿದುಕೊ; **ವಿಮುಕ್ತಿ-ಸೌಧಾಗ್ರ-ತಲ-ಅಧಿರೋಹಣಂ** = ಮುಕ್ತಿಯೆಂಬ ಸೌಧದ ಮೇಲಕ್ಕೆ ಹತ್ತುವಿಕೆಯು **ತಾಭ್ಯಾಂ ವಿನಾ** = ಅವೆರಡನ್ನು ಬಿಟ್ಟು **ಅನ್ಯತರೇಣ** = ಒಂದರಿಂದ **ನ ಸಿಧ್ಯತಿ** = ಸಿದ್ಧಿಸುವುದಿಲ್ಲ.

**೩೭೩.** ಎಲೈ ವಿವೇಕಿಯಾದ ಶಿಷ್ಯನೆ, ವೈರಾಗ್ಯವೂ ಜ್ಞಾನವೂ— ಪಕ್ಷಿಗೆ ಹೇಗೋ ಹಾಗೆ— ಮನುಷ್ಯನ ಎರಡು ರೆಕ್ಕೆಗಳೆಂದು ತಿಳಿ. ಇವೆರಡರಲ್ಲಿ ಒಂದಿಲ್ಲದಿದ್ದರೂ ಮುಕ್ತಿಸೌಧದ ಮೇಲಕ್ಕೆ ಹತ್ತುವುದು ಸಾಧ್ಯವಾಗುವುದಿಲ್ಲ.

**ಅತ್ಯಂತ-ವೈರಾಗ್ಯವತಃ ಸಮಾಧಿಃ**
**ಸಮಾಹಿತಸ್ಯೈವ ದೃಢಪ್ರಬೋಧಃ ।**
**ಪ್ರಬುದ್ಧ-ತತ್ತ್ವಸ್ಯ ಹಿ ಬಂಧಮುಕ್ತಿ-**
**ರ್ಮುಕ್ತಾತ್ಮನೋ ನಿತ್ಯಸುಖಾನುಭೂತಿಃ　　॥ ೩೭೪ ॥**

**ಅತ್ಯಂತ-ವೈರಾಗ್ಯವತಃ**=ಅತ್ಯಂತವೈರಾಗ್ಯವುಳ್ಳವನಿಗೆ **ಸಮಾಧಿಃ**=ಸಮಾಧಿಯು [ಉಂಟಾಗುವುದು], **ಸಮಾಹಿತಸ್ಯ ಏವ**=ಸಮಾಧಿಯಾದವನಿಗೇ **ದೃಢಪ್ರಬೋಧಃ**=ದೃಢವಾದ ಜ್ಞಾನ, **ಪ್ರಬುದ್ಧ-ತತ್ತ್ವಸ್ಯ ಹಿ**=ದೃಢವಾದ ಜ್ಞಾನವುಳ್ಳವನಿಗೇ **ಬಂಧ-ಮುಕ್ತಿಃ**=ಬಂಧದಿಂದ ಬಿಡುಗಡೆ, **ಮುಕ್ತಾತ್ಮನಃ**=ಮುಕ್ತನಾದವನಿಗೇ **ನಿತ್ಯ-ಸುಖಾನುಭೂತಿಃ**=ನಿತ್ಯಸುಖಾನುಭವವು.

**೩೭೪.** ಅತ್ಯಂತ ವೈರಾಗ್ಯವುಳ್ಳವನಿಗೇ ಸಮಾಧಿಯುಂಟಾಗುವುದು, ಸಮಾಧಿಯುಂಟಾದವನಿಗೇ ದೃಢವಾದ ಜ್ಞಾನವಾಗುತ್ತದೆ, ದೃಢವಾದ ಜ್ಞಾನವುಳ್ಳವನಿಗೇ ಸಂಸಾರಬಂಧದಿಂದ ಬಿಡುಗಡೆಯಾಗುತ್ತದೆ, ಬಿಡುಗಡೆಯಾದವನಿಗೇ ನಿತ್ಯಾನಂದದ ಅನುಭವವುಂಟಾಗುತ್ತದೆ.

**ವೈರಾಗ್ಯಾನ್ನ ಪರಂ ಸುಖಸ್ಯ ಜನಕಂ ಪಶ್ಯಾಮಿ ವಶ್ಯಾತ್ಮನ-**
**ಸ್ತಚ್ಚೇಚ್ಛುದ್ಧತರಾತ್ಮಬೋಧಸಹಿತಂ ಸ್ವಾರಾಜ್ಯಸಾಮ್ರಾಜ್ಯಧುಕ್ ।**
**ಏತದ್ದ್ವಾರಮಜಸ್ರಮುಕ್ತಿಯುವತೇರ್ಯಸ್ಮಾತ್ ತ್ವಮಸ್ಮಾತ್ ಪರಂ**
**ಸರ್ವತ್ರಾಸ್ಪೃಹಯಾ ಸದಾತ್ಮನಿ ಸದಾ ಪ್ರಜ್ಞಾಂ ಕುರು ಶ್ರೇಯಸೇ**
**॥ ೩೭೫ ॥**

**ವಶ್ಯಾತ್ಮನಃ**=ಚಿತ್ತವನ್ನು ಜಯಿಸಿಕೊಂಡಿರುವವನಿಗೆ **ವೈರಾಗ್ಯಾತ್ ಪರಂ**=ವೈರಾಗ್ಯಕ್ಕಿಂತ ಉತ್ತಮವಾದ **ಸುಖಸ್ಯ ಜನಕಂ**=ಸುಖವನ್ನುಂಟುಮಾಡುವ ವಸ್ತುವನ್ನು **ನ ಪಶ್ಯಾಮಿ**=ನಾನು ಕಾಣೆನು; **ತತ್**=ಅದು **ಶುದ್ಧತರ-ಆತ್ಮಬೋಧ-ಸಹಿತಂ ಚೇತ್**=ಅತ್ಯಂತ ಶುದ್ಧವಾದ ಆತ್ಮಜ್ಞಾನದಿಂದ ಕೂಡಿದ್ದರೆ **ಸ್ವಾರಾಜ್ಯ-ಸಾಮ್ರಾಜ್ಯ-ಧುಕ್**=ಸ್ವಾರಾಜ್ಯ-ಸಾಮ್ರಾಜ್ಯವನ್ನು ಕರೆಯುತಕ್ಕದ್ದಾಗುವುದು; **ಯಸ್ಮಾತ್**=ಯಾವ ಕಾರಣದಿಂದ **ಏತತ್**=ಇದು **ಅಜಸ್ರ-ಮುಕ್ತಿ-ಯುವತೇಃ**=ನಿತ್ಯಮುಕ್ತಿಯೆಂಬ ಯುವತಿಗೆ **ದ್ವಾರಂ**=ಬಾಗಿಲಾಗಿರುವುದೊ **ಅಸ್ಮಾತ್**=ಈ ಕಾರಣದಿಂದಲೇ **ತ್ವಂ**=ನೀನು **ಸರ್ವತ್ರ**=ಎಲ್ಲ ವಿಷಯಗಳಲ್ಲಿಯೂ **ಪರಮ್ ಅಸ್ಪೃಹಯಾ**=ಅತ್ಯಂತ ನಿಃಸ್ಪೃಹೆಯಿಂದ **ಶ್ರೇಯಸೇ**=ಶ್ರೇಯಸ್ಸಿಗಾಗಿ **ಸದಾ**=ಯಾವಾಗಲೂ **ಸದಾತ್ಮನಿ**=ಸದ್ರೂಪನಾದ ಆತ್ಮನಲ್ಲಿ **ಪ್ರಜ್ಞಾಂ ಕುರು**=ಸಮಾಹಿತನಾಗು.

**೩೭೫.** ಚಿತ್ತವನ್ನು ಜಯಿಸಿಕೊಂಡಿರುವವನಿಗೆ ವೈರಾಗ್ಯಕ್ಕಿಂತ ಉತ್ತಮವಾದ, ಸುಖವನ್ನುಂಟುಮಾಡುವ ವಸ್ತುವನ್ನು ನಾನು ಕಾಣೆನು. ಅದು ಅತ್ಯಂತ ಶುದ್ಧವಾದ ಆತ್ಮಜ್ಞಾನದಿಂದ ಕೂಡಿದ್ದರೆ ಸ್ವಾರಾಜ್ಯ-ಸಾಮ್ರಾಜ್ಯವನ್ನು ಕರೆಯುವ ಧೇನುವಾಗುವುದು. ಇದು ನಿತ್ಯಮುಕ್ತಿಯೆಂಬ ಯುವತಿಯ ಪ್ರಾಪ್ತಿಗೆ ದ್ವಾರವಾಗಿರುವುದರಿಂದ ನೀನು ಎಲ್ಲ ವಿಷಯಗಳಲ್ಲಿಯೂ

ನಿಃಸ್ಪೃಹನಾಗಿ ಶ್ರೇಯಸ್ಸಿಗೋಸ್ಕರ ಯಾವಾಗಲೂ ಸದ್ರೂಪನಾದ ಆತ್ಮನಲ್ಲಿ ಸಮಾಹಿತನಾಗು.

**ಆಶಾಂ ಛಿಂಧಿ ವಿಷೋಪಮೇಷು ವಿಷಯೇಷ್ವೇಷೈವ ಮೃತ್ಯೋಃ ಸೃತಿ-**
**ಸ್ತ್ಯಕ್ತ್ವಾ ಜಾತಿ-ಕುಲಾಶ್ರಮೇಷ್ವಭಿಮತಿಂ ಮುಂಚಾತಿದೂರಾತ್**
**ಕ್ರಿಯಾಃ ।**
**ದೇಹಾದಾವಸತಿ ತ್ಯಜಾತ್ಮಧಿಷಣಾಂ ಪ್ರಜ್ಞಾಂ ಕುರುಷ್ವಾತ್ಮನಿ**
**ತ್ವಂ ದ್ರಷ್ಟಾಸ್ಯಮಲೋಽಸಿ ನಿರ್ದ್ವಯಪರಂ ಬ್ರಹ್ಮಾಸಿ ಯದ್ವಸ್ತುತಃ**
**॥ ೩೭೬ ॥**

**ವಿಷೋಪಮೇಷು** = ವಿಷಸದೃಶಗಳಾದ **ವಿಷಯೇಷು** = ವಿಷಯಗಳಲ್ಲಿ **ಆಶಾಂ** = ಆಶೆಯನ್ನು **ಛಿಂಧಿ** = ಕತ್ತರಿಸು; **ಏಷಾ ಏವ** = ಈ ಆಶೆಯೇ **ಮೃತ್ಯೋಃ** = ಮೃತ್ಯುವಿಗೆ **ಸೃತಿಃ** = ದಾರಿಯು; **ಜಾತಿ-ಕುಲ-ಆಶ್ರಮೇಷು** = ಜಾತಿ, ಕುಲ, ಆಶ್ರಮ — ಇವುಗಳಲ್ಲಿ **ಅಭಿಮತಿಂ** = ಅಭಿಮಾನವನ್ನು **ತ್ಯಕ್ತ್ವಾ** = ಬಿಟ್ಟು, **ಕ್ರಿಯಾಃ** = ಕಾಮ್ಯಕರ್ಮಗಳನ್ನು **ಅತಿದೂರಾತ್** = ಅತಿ ದೂರದಿಂದಲೇ **ಮುಂಚ** = ಬಿಟ್ಟುಬಿಡು; **ಅಸತಿ** = ಮಿಥ್ಯಾರೂಪವಾದ **ದೇಹಾದೌ** = ದೇಹಾದಿಗಳಲ್ಲಿ **ಆತ್ಮ-ಧಿಷಣಾಂ** = ಆತ್ಮಬುದ್ಧಿಯನ್ನು **ತ್ಯಜ** = ತೊರೆ, **ಆತ್ಮನಿ** = ಆತ್ಮನಲ್ಲಿಯೇ **ಪ್ರಜ್ಞಾಂ ಕುರುಷ್ವ** = ಸಮಾಹಿತನಾಗು; **ಯತ್** = ಏಕೆಂದರೆ **ವಸ್ತುತಃ** = ನಿಜವಾಗಿ **ತ್ವಂ** = ನೀನು **ದ್ರಷ್ಟಾ ಅಸಿ** = ಸಾಕ್ಷಿಯಾಗಿರುವೆ, **ಅಮಲಃ ಅಸಿ** = ಶುದ್ಧನಾಗಿರುವೆ, **ನಿರ್ದ್ವಯಪರಂ ಬ್ರಹ್ಮ ಅಸಿ** = ನಿರ್ದ್ವಯವೂ ಪರವೂ ಆದ ಬ್ರಹ್ಮವಾಗಿರುವೆ.

**೩೭೬.** ವಿಷಸದೃಶಗಳಾದ ವಿಷಯಗಳಲ್ಲಿ ಆಶೆಯನ್ನು ಕತ್ತರಿಸು; ಈ ಆಶೆಯೇ ಮೃತ್ಯುವಿಗೆ ದಾರಿಯು; ಜಾತಿ ಕುಲ ಆಶ್ರಮ — ಇವುಗಳಲ್ಲಿ ಅಭಿಮಾನವನ್ನು ಬಿಟ್ಟು ಕಾಮ್ಯಕರ್ಮಗಳನ್ನು ಅತಿ ದೂರದಿಂದಲೇ ತ್ಯಜಿಸು; ಮಿಥ್ಯಾರೂಪವಾದ ದೇಹಾದಿಗಳಲ್ಲಿ ಆತ್ಮಬುದ್ಧಿಯನ್ನು ತೊರೆದು, ಆತ್ಮನಲ್ಲಿಯೇ ಸಮಾಹಿತನಾಗು; ಏಕೆಂದರೆ ನೀನು ನಿಜವಾಗಿ ಸಾಕ್ಷಿಯಾಗಿರುವೆ, ಶುದ್ಧನಾಗಿರುವೆ, ಅದ್ವಿತೀಯವಾದ ಪರಬ್ರಹ್ಮವಾಗಿರುವೆ.

**ಲಕ್ಷ್ಯೇ ಬ್ರಹ್ಮಣಿ ಮಾನಸಂ ದೃಢತರಂ ಸಂಸ್ಥಾಪ್ಯ ಬಾಹ್ಯೇಂದ್ರಿಯಂ**
**ಸ್ವಸ್ಥಾನೇ ವಿನಿವೇಶ್ಯ ನಿಶ್ಚಲತನುಶ್ಚೋಪೇಕ್ಷ್ಯ ದೇಹಸ್ಥಿತಿಮ್ ।**
**ಬ್ರಹ್ಮಾತ್ಮೈಕ್ಯಮುಪೇತ್ಯ ತನ್ಮಯತಯಾ ಚಾಖಂಡವೃತ್ತ್ಯಾಽನಿಶಂ**
**ಬ್ರಹ್ಮಾನಂದರಸಂ ಪಿಬಾತ್ಮನಿ ಮುದಾ ಶೂನ್ಯೈಃ ಕಿಮನ್ಯೈರ್ಭ್ರಮೈಃ**
**॥ ೩೭೭ ॥**

**ಲಕ್ಷ್ಯೇ**=ಲಕ್ಷ್ಯವಾಗಿರುವ **ಬ್ರಹ್ಮಣಿ**=ಬ್ರಹ್ಮದಲ್ಲಿ **ಮಾನಸಂ**=ಮನಸ್ಸನ್ನು **ದೃಢತರಂ**=ದೃಢವಾಗಿ **ಸಂಸ್ಥಾಪ್ಯ**=ನೆಲೆಗೊಳಿಸಿ, **ಬಾಹ್ಯೇಂದ್ರಿಯಂ**=ಬಾಹ್ಯೇಂದ್ರಿಯ ಸಮುದಾಯವನ್ನು **ಸ್ವಸ್ಥಾನೇ**=ತಮ್ಮ ತಮ್ಮ ಗೋಲಕದಲ್ಲಿಯೇ **ವಿನಿವೇಶ್ಯ**=ನಿಲ್ಲಿಸಿ, **ನಿಶ್ಚಲತನುಃ**=ನಿಶ್ಚಲಶರೀರನಾಗಿ, **ದೇಹಸ್ಥಿತಿಂ** = ಶರೀರರಕ್ಷಣೆಯನ್ನು **ಉಪೇಕ್ಷ್ಯ**=ಉಪೇಕ್ಷಿಸಿ, **ಬ್ರಹ್ಮಾತ್ಮೈಕ್ಯಂ**=ಬ್ರಹ್ಮಾತ್ಮೈಕ್ಯವನ್ನು **ಉಪೇತ್ಯ**=ಹೊಂದಿ, **ತನ್ಮಯತಯಾ**=ಬ್ರಹ್ಮಸ್ವರೂಪವೇ ಆಗಿರುವ, **ಅಖಂಡವೃತ್ತ್ಯಾ ಚ**=ಅಖಂಡಾಕಾರವೃತ್ತಿಯಿಂದ **ಅನಿಶಂ**=ಯಾವಾಗಲೂ **ಆತ್ಮನಿ**=ನಿನ್ನಲ್ಲಿಯೇ **ಬ್ರಹ್ಮಾನಂದರಸಂ**=ಬ್ರಹ್ಮಾನಂದರಸವನ್ನು **ಮುದಾ**=ಸಂತೋಷದಿಂದ **ಪಿಬ**=ಕುಡಿ; **ಶೂನ್ಯೈಃ**=ಶೂನ್ಯವಾದ **ಅನ್ಯೈಃ ಭ್ರಮೈಃ**=ಇತರ ಭ್ರಮೆಗಳಿಂದ **ಕಿಂ**=ಪ್ರಯೋಜನವೇನು?

**೩೭೭.** ಲಕ್ಷ್ಯವಾಗಿರುವ ಬ್ರಹ್ಮದಲ್ಲಿ ಮನಸ್ಸನ್ನು ದೃಢವಾಗಿ ನೆಲೆಗೊಳಿಸಿ, ಬಾಹ್ಯೇಂದ್ರಿಯಗಳನ್ನು ತಮ್ಮ ತಮ್ಮ ಗೋಲಕಗಳಲ್ಲಿಯೇ ನಿಲ್ಲಿಸಿ, ಶರೀರವನ್ನು ನಿಶ್ಚಲವಾಗಿ ಮಾಡಿಕೊಂಡು, ಶರೀರ-ರಕ್ಷಣೆಯನ್ನು ಉಪೇಕ್ಷಿಸಿ, ಬ್ರಹ್ಮಾತ್ಮೈಕ್ಯವನ್ನು ಹೊಂದಿ, ಬ್ರಹ್ಮಸ್ವರೂಪವೇ ಆಗಿರುವ ಅಖಂಡಾಕಾರ ವೃತ್ತಿಯಿಂದ ಯಾವಾಗಲೂ ನಿನ್ನಲ್ಲಿಯೇ ಬ್ರಹ್ಮಾನಂದರಸವನ್ನು ಸಂತೋಷದಿಂದ ಕುಡಿ. ಶೂನ್ಯವಾದ ಇತರ ಭ್ರಮೆಗಳಿಂದ ಏನು ಪ್ರಯೋಜನ?

**ಅನಾತ್ಮಚಿಂತನಂ ತ್ಯಕ್ತ್ವಾ ಕಶ್ಮಲಂ ದುಃಖಕಾರಣಮ್ ।**
**ಚಿಂತಯಾತ್ಮಾನಮಾನಂದರೂಪಂ ಯನ್ಮುಕ್ತಿಕಾರಣಮ್ ॥ ೩೭೮ ॥**

**ಕಶ್ಮಲಂ**=ಕಶ್ಮಲವಾದ **ದುಃಖಕಾರಣಂ**=ದುಃಖಕ್ಕೆ ಕಾರಣವಾದ **ಅನಾತ್ಮಚಿಂತನಂ** = ಅನಾತ್ಮಚಿಂತನವನ್ನು **ತ್ಯಕ್ತ್ವಾ**=ತೊರೆದು, **ಯತ್** = ಯಾವುದು **ಮುಕ್ತಿಕಾರಣಂ**=ಮುಕ್ತಿಗೆ ಕಾರಣವಾಗಿರುವುದೊ **ಆನಂದರೂಪಂ**=[ಆ] ಆನಂದರೂಪನಾದ **ಆತ್ಮಾನಂ**=ಆತ್ಮನನ್ನು **ಚಿಂತಯ**=ಧ್ಯಾನಿಸು.

**೩೭೮.** ಕಶ್ಮಲವೂ ದುಃಖಕ್ಕೆ ಕಾರಣವೂ ಆಗಿರುವ ಅನಾತ್ಮಚಿಂತನವನ್ನು ತೊರೆದು ಮುಕ್ತಿಗೆ ಕಾರಣನೂ ಆನಂದರೂಪನೂ ಆದ ಆತ್ಮನನ್ನೇ ಧ್ಯಾನಿಸು.

**ಏಷ ಸ್ವಯಂಜ್ಯೋತಿರಶೇಷಸಾಕ್ಷೀ**
**ವಿಜ್ಞಾನಕೋಶೇ ವಿಲಸತ್ಯಜಸ್ರಮ್ ।**
**ಲಕ್ಷ್ಯಂ ವಿಧಾಯೈನಮಸದ್ವಿಲಕ್ಷಣ-**
**ಮಖಂಡವೃತ್ತ್ಯಾಽತ್ಮತಯಾಽನುಭಾವಯ ॥ ೩೭೯ ॥**

**ಸ್ವಯಂಜ್ಯೋತಿಃ** = ಸ್ವಯಂಜ್ಯೋತಿಯಾದ **ಅಶೇಷಸಾಕ್ಷೀ** = ಸರ್ವಸಾಕ್ಷಿಯಾದ **ಏಷಃ** = ಈ ಆತ್ಮನು **ವಿಜ್ಞಾನಕೋಶೇ** = ಬುದ್ಧಿಯಲ್ಲಿ **ಅಜಸ್ರಮ್** = ಯಾವಾಗಲೂ **ವಿಲಸತಿ** = ಪ್ರಕಾಶಿಸುತ್ತಿರುತ್ತಾನೆ; **ಅಸತ್-ವಿಲಕ್ಷಣಂ** = ಅಸದ್ವಸ್ತುಗಳಿಗಿಂತ ಭಿನ್ನನಾಗಿರುವ **ಏನಂ** = ಇವನನ್ನು **ಲಕ್ಷ್ಯಂ ವಿಧಾಯ** = ಲಕ್ಷ್ಯವಾಗಿ ಮಾಡಿಕೊಂಡು **ಅಖಂಡವೃತ್ತ್ಯಾ** = ಅಖಂಡಾಕಾರವೃತ್ತಿಯಿಂದ **ಆತ್ಮತಯಾ** = ಸ್ವಸ್ವರೂಪವೆಂದು **ಅನುಭಾವಯ** = ಭಾವಿಸು.

**೩೭೯.** ಸ್ವಯಂಜ್ಯೋತಿಯೂ ಸರ್ವಸಾಕ್ಷಿಯೂ ಆದ ಈ ಆತ್ಮನು ಬುದ್ಧಿಯಲ್ಲಿ ಯಾವಾಗಲೂ ಪ್ರಕಾಶಿಸುತ್ತಿರುತ್ತಾನೆ. ಅಸದ್ವಸ್ತುಗಳಿಗಿಂತ ಭಿನ್ನನಾಗಿರುವ ಇವನನ್ನು ಲಕ್ಷ್ಯವಾಗಿ ಮಾಡಿಕೊಂಡು ಅಖಂಡಾಕಾರವೃತ್ತಿಯಿಂದ ಸ್ವಸ್ವರೂಪವೆಂದು ಭಾವಿಸು.

**ಏತಮಚ್ಛಿನ್ನಯಾ ವೃತ್ತ್ಯಾ ಪ್ರತ್ಯಯಾಂತರಶೂನ್ಯಯಾ ।**
**ಉಲ್ಲೇಖಯನ್ ವಿಜಾನೀಯಾತ್ ಸ್ವಸ್ವರೂಪತಯಾ ಸ್ಫುಟಮ್**
**॥ ೩೮೦ ॥**

**ಏತಂ** = ಇವನನ್ನು **ಅಚ್ಛಿನ್ನಯಾ** = ವಿಚ್ಛೇದವಿಲ್ಲದ **ಪ್ರತ್ಯಯಾಂತರ-ಶೂನ್ಯಯಾ** = ಪ್ರತ್ಯಯಾಂತರವಿಲ್ಲದ **ವೃತ್ತ್ಯಾ** = ವೃತ್ತಿಯಿಂದ **ಉಲ್ಲೇಖಯನ್** = ವಿಷಯೀಕರಿಸುತ್ತ **ಸ್ವ-ಸ್ವರೂಪತಯಾ** = ಸ್ವಸ್ವರೂಪದಿಂದ **ಸ್ಫುಟಂ** = ಸ್ಫುಟವಾಗಿ **ವಿಜಾನೀಯಾತ್** = ತಿಳಿದುಕೊಳ್ಳಬೇಕು.

**೩೮೦.** ವಿಚ್ಛೇದವಿಲ್ಲದ ಮತ್ತು ಬೇರೆ ಪ್ರತ್ಯಯವಿಲ್ಲದ ವೃತ್ತಿಯಿಂದ ವಿಷಯೀಕರಿಸುತ್ತ ಇವನೇ ಸ್ವಸ್ವರೂಪವೆಂದು ಸ್ಫುಟವಾಗಿ ತಿಳಿದುಕೊಳ್ಳಬೇಕು.

**ಅತ್ರಾತ್ಮತ್ವಂ ದೃಢೀಕುರ್ವನ್ನಹಮಾದಿಷು ಸಂತ್ಯಜನ್ ।**
**ಉದಾಸೀನತಯಾ ತೇಷು ತಿಷ್ಠೇತ್ ಸ್ಫುಟಘಟಾದಿವತ್ ॥ ೩೮೧ ॥**

**ಅತ್ರ** = ಈ ಆತ್ಮನಲ್ಲಿ **ಆತ್ಮತ್ವಂ** = ಸ್ವಸ್ವರೂಪತ್ವವನ್ನು **ದೃಢೀಕುರ್ವನ್** = ದೃಢಪಡಿಸಿಕೊಳ್ಳುತ್ತ **ಅಹಮ್-ಆದಿಷು** = ಅಹಂಕಾರಾದಿಗಳಲ್ಲಿ [ಆತ್ಮತ್ವವನ್ನು] **ಸಂತ್ಯಜನ್** = ಬಿಡುತ್ತ **ಸ್ಫುಟ-ಘಟಾದಿವತ್** = ಒಡೆದುಹೋದ ಗಡಿಗೆಯೇ ಮೊದಲಾದುವುಗಳಂತೆ **ತೇಷು** = ಅವುಗಳಲ್ಲಿ **ಉದಾಸೀನತಯಾ ತಿಷ್ಠೇತ್** = ಉದಾಸೀನನಾಗಿರಬೇಕು.

**೩೮೧.** ಈ ಆತ್ಮನಲ್ಲಿ ಸ್ವಸ್ವರೂಪತ್ವವನ್ನು ದೃಢಪಡಿಸಿಕೊಳ್ಳುತ್ತ, ಅಹಂಕಾರಾದಿಗಳಲ್ಲಿ ಆತ್ಮತ್ವವನ್ನು ಬಿಡುತ್ತ—ಒಡೆದುಹೋದ ಗಡಿಗೆಯೇ ಮೊದಲಾದವುಗಳಲ್ಲಿ ಹೇಗೋ ಹಾಗೆ—ಅವುಗಳಲ್ಲಿ ಉದಾಸೀನನಾಗಿರಬೇಕು.

**ವಿಶುದ್ಧಮಂತಃಕರಣಂ ಸ್ವರೂಪೇ**
**ನಿವೇಶ್ಯ ಸಾಕ್ಷಿಣ್ಯವಬೋಧಮಾತ್ರೇ ।**
**ಶನೈಃ ಶನೈರ್ನಿಶ್ಚಲತಾಮುಪಾನಯನ್**
**ಪೂರ್ಣಂ ಸ್ವಮೇವಾನುವಿಲೋಕಯೇತ್ ತತಃ ॥ ೩೮೨ ॥**

**ಅವಬೋಧಮಾತ್ರೇ** = ಕೇವಲ ಜ್ಞಾನಸ್ವರೂಪನಾದ **ಸಾಕ್ಷಿಣಿ**=ಸಾಕ್ಷಿಯಾದ **ಸ್ವರೂಪೇ** = ಆತ್ಮನಲ್ಲಿ **ವಿಶುದ್ಧಂ** = ವಿಶುದ್ಧವಾದ **ಅಂತಃಕರಣಂ** = ಅಂತಃಕರಣವನ್ನು **ನಿವೇಶ್ಯ**=ನಿಲ್ಲಿಸಿ, **ಶನೈಃ ಶನೈಃ**=ಮೆಲ್ಲಮೆಲ್ಲಗೆ **ನಿಶ್ಚಲತಾಂ**=ನಿಶ್ಚಲತೆಯನ್ನು **ಉಪಾನಯನ್** = ಹೊಂದಿಸುವವನಾಗಿ **ತತಃ** = ಅನಂತರ **ಪೂರ್ಣಂ**=ಪೂರ್ಣನಾದ **ಸ್ವಮ್ ಏವ** = ಆತ್ಮನನ್ನೇ **ಅನುವಿಲೋಕಯೇತ್** = ಸಾಕ್ಷಾತ್ಕರಿಸಬೇಕು.

**೩೮೨.** ಕೇವಲ ಜ್ಞಾನಸ್ವರೂಪನೂ ಸಾಕ್ಷಿಯೂ ಆದ ಆತ್ಮನಲ್ಲಿಯೇ ವಿಶುದ್ಧವಾದ ಅಂತಃಕರಣವನ್ನು ನಿಲ್ಲಿಸಿ, ಮೆಲ್ಲಮೆಲ್ಲಗೆ ಅದಕ್ಕೆ ನಿಶ್ಚಲತೆಯನ್ನು ಹೊಂದಿಸಿ, ಅನಂತರ ಪೂರ್ಣನಾದ ಆತ್ಮನನ್ನೇ ಸಾಕ್ಷಾತ್ಕರಿಸಬೇಕು.

**ದೇಹೇಂದ್ರಿಯ-ಪ್ರಾಣ-ಮನೋಽಹಮಾದಿಭಿಃ**
**ಸ್ವಾಜ್ಞಾನಕ್ಲೃಪ್ತೈರಖಿಲೈರುಪಾಧಿಭಿಃ ।**
**ವಿಮುಕ್ತಮಾತ್ಮಾನಮಖಂಡರೂಪಂ**
**ಪೂರ್ಣಂ ಮಹಾಕಾಶಮಿವಾವಲೋಕಯೇತ್ ॥ ೩೮೩ ॥**

**ಸ್ವ-ಅಜ್ಞಾನ-ಕ್ಲೃಪ್ತೈಃ** = ತನ್ನ ಅಜ್ಞಾನದಿಂದ ಕಲ್ಪಿತವಾಗಿರುವ **ಅಖಿಲೈಃ**= ಸಮಸ್ತವಾದ **ದೇಹ-ಇಂದ್ರಿಯ-ಪ್ರಾಣ-ಮನಃ-ಅಹಮ್-ಆದಿಭಿಃ** = ದೇಹ ಇಂದ್ರಿಯ ಪ್ರಾಣ ಮನಸ್ಸು ಅಹಂಕಾರ ಮೊದಲಾದ **ಉಪಾಧಿಭಿಃ**=ಉಪಾಧಿಗಳಿಂದ **ವಿಮುಕ್ತಂ** = ಬಿಡಲ್ಪಟ್ಟಿರುವ **ಅಖಂಡರೂಪಂ** = ಅಖಂಡರೂಪನಾದ **ಪೂರ್ಣಂ**= ಪೂರ್ಣನಾದ **ಆತ್ಮಾನಂ** = ಆತ್ಮನನ್ನು **ಮಹಾಕಾಶಮ್ ಇವ** = ಮಹಾಕಾಶದಂತೆ **ಅವಲೋಕಯೇತ್** = ಸಾಕ್ಷಾತ್ಕರಿಸಬೇಕು.

**೩೮೩.** ತನ್ನ ಅಜ್ಞಾನದಿಂದ ಕಲ್ಪಿತವಾದ ದೇಹ ಇಂದ್ರಿಯ ಪ್ರಾಣ ಮನಸ್ಸು ಅಹಂಕಾರ ಮೊದಲಾದ ಯಾವ ಉಪಾಧಿಗಳೂ ಇಲ್ಲದ, ಅಖಂಡ ರೂಪನೂ ಪೂರ್ಣನೂ ಆದ ಆತ್ಮನನ್ನು ಮಹಾಕಾಶದಂತೆ ಸಾಕ್ಷಾತ್ಕರಿಸಬೇಕು.

**ಘಟ-ಕಲಶ-ಕುಸೂಲ-ಸೂಚಿ-ಮುಖ್ಯೈ-**
**ರ್ಗಗನಮುಪಾಧಿಶತೈರ್ವಿಮುಕ್ತಮೇಕಮ್ ।**
**ಭವತಿ ನ ವಿವಿಧಂ ತಥೈವ ಶುದ್ಧಂ**
**ಪರಮಹಮಾದಿ-ವಿಮುಕ್ತಮೇಕಮೇವ ॥ ೩೮೪ ॥**

**ಘಟ-ಕಲಶ-ಕುಸೂಲ-ಸೂಚಿ-ಮುಖ್ಯೈಃ** = ಗಡಿಗೆ ಕಲಶ ಕಣಜ ಸೂಜಿ ಮೊದಲಾದ **ಉಪಾಧಿಶತೈಃ** = ನೂರಾರು ಉಪಾಧಿಗಳಿಂದ **ವಿಮುಕ್ತಂ** = ಬಿಡಲ್ಪಟ್ಟ **ಗಗನಂ** = ಗಗನವು **ಏಕಂ ಭವತಿ** = ಒಂದೇ ಆಗಿರುತ್ತದೆ, **ವಿವಿಧಂ ನ** = ಬಗೆಬಗೆಯಾಗಿರುವುದಿಲ್ಲ; **ತಥಾ ಏವ** = ಹಾಗೆಯೇ **ಅಹಮ್-ಆದಿ-ವಿಮುಕ್ತಂ** = ಅಹಂಕಾರಾದಿಗಳಿಂದ ಬಿಡಲ್ಪಟ್ಟ **ಶುದ್ಧಂ** = ಶುದ್ಧವಾದ **ಪರಂ** = ಪರಮಾರ್ಥವು **ಏಕಮ್ ಏವ** = ಒಂದೇ ಆಗಿರುತ್ತದೆ.

**೩೮೪.** ಗಡಿಗೆ ಕಲಶ ಕಣಜ ಸೂಜಿ ಮೊದಲಾದ ಯಾವ ಉಪಾಧಿಗಳೂ ಇಲ್ಲದ ಆಕಾಶವು ಒಂದೇ ಆಗಿರುವುದೇ ಹೊರತು ಬಗೆಬಗೆಯಾಗಿರುವುದಿಲ್ಲ; ಹಾಗೆಯೇ ಅಹಂಕಾರಾದಿಗಳಿಲ್ಲದ ಶುದ್ಧವಾದ ಪರಮಾರ್ಥವು ಒಂದೇ ಆಗಿರುತ್ತದೆ.

**ಬ್ರಹ್ಮಾದಿ-ಸ್ತಂಬಪರ್ಯಂತಾ ಮೃಷಾಮಾತ್ರಾ ಉಪಾಧಯಃ ।**
**ತತಃ ಪೂರ್ಣಂ ಸ್ವಮಾತ್ಮಾನಂ ಪಶ್ಯೇದೇಕಾತ್ಮನಾ ಸ್ಥಿತಮ್ ॥ ೩೮೫ ॥**

**ಬ್ರಹ್ಮಾದಿ-ಸ್ತಂಬಪರ್ಯಂತಾಃ** = ಬ್ರಹ್ಮನಿಂದ ಹಿಡಿದು ಒಂದು ಹುಲ್ಲುಕಡ್ಡಿಯ ವರೆಗಿರುವ **ಉಪಾಧಯಃ** = ಉಪಾಧಿಗಳು **ಮೃಷಾಮಾತ್ರಾಃ** = ಕೇವಲ ಮಿಥ್ಯಾಸ್ವರೂಪವಾದುವುಗಳು; **ತತಃ** = ಆದುದರಿಂದ **ಏಕಾತ್ಮನಾ ಸ್ಥಿತಂ** = ಒಂದೇ ರೂಪದಲ್ಲಿರುವ **ಪೂರ್ಣಂ** = ಪೂರ್ಣನಾದ **ಸ್ವಮ್ ಆತ್ಮಾನಂ** = ತನ್ನ ಆತ್ಮನನ್ನು **ಪಶ್ಯೇತ್** = ಸಾಕ್ಷಾತ್ಕರಿಸಬೇಕು.

**೩೮೫.** ಬ್ರಹ್ಮನಿಂದ ಹಿಡಿದು ಹುಲ್ಲುಕಡ್ಡಿಯ ವರೆಗಿರುವ ಉಪಾಧಿಗಳೆಲ್ಲವೂ ಕೇವಲ ಮಿಥ್ಯೆಯೇ ಆಗಿರುತ್ತವೆ. ಆದುದರಿಂದ ಒಂದೇ ರೂಪದಲ್ಲಿರುವ ಪೂರ್ಣನಾದ ತನ್ನ ಆತ್ಮನನ್ನು ಸಾಕ್ಷಾತ್ಕರಿಸಬೇಕು.

**ಯತ್ರ ಭ್ರಾಂತ್ಯಾ ಕಲ್ಪಿತಂ ತದ್ವಿವೇಕೇ**
**ತತ್ತನ್ಮಾತ್ರಂ ನೈವ ತಸ್ಮಾದ್ವಿಭಿನ್ನಮ್ ।**
**ಭ್ರಾಂತೇರ್ನಾಶೇ ಭಾತಿ ದೃಷ್ಟಾಹಿತತ್ತ್ವಂ**
**ರಜ್ಜುಸ್ತದ್ವದ್ವಿಶ್ವಮಾತ್ಮಸ್ವರೂಪಮ್ ॥ ೩೮೬ ॥**

[ಯಾವುದು] **ಯತ್ರ** = ಯಾವುದರಲ್ಲಿ **ಭ್ರಾಂತ್ಯಾ** = ಭ್ರಾಂತಿಯಿಂದ **ಕಲ್ಪಿತಂ** = ಕಲ್ಪಿತವಾಗಿರುವುದೊ **ತದ್ವಿವೇಕೇ** = ಅದನ್ನು ವಿವೇಚಿಸಿದಾಗ **ತತ್** = ಅದು **ತನ್ಮಾತ್ರಂ** = ಕಲ್ಪನೆಗೆ ಆಶ್ರಯವಾದ ವಸ್ತುವೇ [ಆಗುತ್ತದೆ], **ತಸ್ಮಾತ್** = ಅದಕ್ಕಿಂತಲೂ **ವಿಭಿನ್ನಂ** = ಬೇರೆಯಾದದ್ದು **ನ ಏವ** = ಆಗುವುದಿಲ್ಲ; **ಭ್ರಾಂತೇಃ ನಾಶೇ** = ಭ್ರಾಂತಿಯು

ನಾಶವಾದಾಗ ದೃಷ್ಟ-ಅಹಿತತ್ತ್ವಂ = ನೋಡಲ್ಪಟ್ಟ ಸರ್ಪದ ಯಥಾರ್ಥಸ್ಥಿತಿಯು ರಜ್ಜುಃ ಭಾತಿ = ಹಗ್ಗವೇ ಆಗಿರುತ್ತದೆ; ತದ್ವತ್ = ಹಾಗೆಯೇ ವಿಶ್ವಂ = ವಿಶ್ವವು ಆತ್ಮಸ್ವರೂಪಂ = ಆತ್ಮಸ್ವರೂಪವಾಗಿರುವುದು.

೩೮೬. ಯಾವುದು ಯಾವ ವಸ್ತುವಿನಲ್ಲಿ ಭ್ರಾಂತಿಯಿಂದ ಕಲ್ಪಿತವಾಗಿರುವುದೊ ಅದು ಅವೆರಡನ್ನೂ ವಿವೇಚಿಸಿದಾಗ ಅಧಿಷ್ಠಾನವಾಗಿರುವುದೇ ಹೊರತು ಅದಕ್ಕಿಂತ ಭಿನ್ನವಾಗಿರುವುದಿಲ್ಲ. ಭ್ರಾಂತಿಯು ನಾಶವಾದಾಗ ನೋಡಲ್ಪಟ್ಟ ಸರ್ಪದ ಯಥಾರ್ಥಸ್ಥಿತಿಯು ಹಗ್ಗವೇ ಆಗಿರುತ್ತದೆ; ಹಾಗೆಯೇ (ಭ್ರಾಂತಿಯಿಂದ ಕಲ್ಪಿತವಾದ) ವಿಶ್ವವು ಆತ್ಮಸ್ವರೂಪವೇ ಆಗಿರುತ್ತದೆ.

**ಸ್ವಯಂ ಬ್ರಹ್ಮಾ ಸ್ವಯಂ ವಿಷ್ಣುಃ ಸ್ವಯಮಿಂದ್ರಃ ಸ್ವಯಂ ಶಿವಃ ।**
**ಸ್ವಯಂ ವಿಶ್ವಮಿದಂ ಸರ್ವಂ ಸ್ವಸ್ಮಾದನ್ಯನ್ನ ಕಿಂಚನ ॥ ೩೮೭ ॥**

ಸ್ವಯಂ = ತಾನೇ ಬ್ರಹ್ಮಾ = ಬ್ರಹ್ಮನು, ಸ್ವಯಂ ವಿಷ್ಣುಃ = ವಿಷ್ಣು, ಸ್ವಯಮ್ ಇಂದ್ರಃ = ಇಂದ್ರ, ಸ್ವಯಂ ಶಿವಃ = ಶಿವ, ಸ್ವಯಂ = ತಾನೇ ಇದಂ ಸರ್ವಂ ವಿಶ್ವಂ = ಈ ವಿಶ್ವವೆಲ್ಲ [ಆಗಿರುತ್ತಾನೆ]; ಸ್ವಸ್ಮಾತ್ = ತನಗಿಂತಲೂ ಅನ್ಯತ್ ಕಿಂಚನ = ಬೇರೆ ಯಾವುದೊಂದೂ ನ = ಇರುವುದಿಲ್ಲ.

೩೮೭. ತಾನೇ ಬ್ರಹ್ಮನು, ತಾನೇ ವಿಷ್ಣು, ತಾನೇ ಇಂದ್ರ, ತಾನೇ ಶಿವ, ತಾನೇ ವಿಶ್ವವೆಲ್ಲವೂ (ಆಗಿರುತ್ತಾನೆ). ತನಗಿಂತ ಬೇರೆ ಯಾವುದೊಂದೂ ಇರುವುದಿಲ್ಲ.

['ಋಷಿ ವಾಮದೇವನು ಇದನ್ನು ಬ್ರಹ್ಮವೆಂದು ಸಾಕ್ಷಾತ್ಕರಿಸಿದಾಗ "ನಾನು ಮನು ಮತ್ತು ಸೂರ್ಯ" ಎಂದು ಅರಿತುಕೊಂಡನು' **ತದ್ಧೈತತ್ ಪಶ್ಯನ್ ಋಷಿರ್ವಾಮದೇವಃ ಪ್ರತಿಪೇದೇಽಹಂ ಮನುರಭವಂ ಸೂರ್ಯಶ್ಚೇತಿ** (ಬೃಹದಾರಣ್ಯಕ ಉ. ೧. ೪. ೧೦).]

**ಅಂತಃ ಸ್ವಯಂ ಚಾಪಿ ಬಹಿಃ ಸ್ವಯಂ ಚ**
**ಸ್ವಯಂ ಪುರಸ್ತಾತ್ ಸ್ವಯಮೇವ ಪಶ್ಚಾತ್ ।**
**ಸ್ವಯಂ ಹ್ಯವಾಚ್ಯಾಂ ಸ್ವಯಮುದೀಚ್ಯಾಂ**
**ತಥೋಪರಿಷ್ಟಾತ್ ಸ್ವಯಮಪ್ಯಧಸ್ತಾತ್ ॥ ೩೮೮ ॥**

ಅಂತಃ ಚ = ಒಳಗೆ ಸ್ವಯಂ = ತಾನೇ, ಅಪಿ = ಮತ್ತು ಬಹಿಃ ಚ = ಹೊರಗೆ ಸ್ವಯಂ, ಪುರಸ್ತಾತ್ = ಮುಂದುಗಡೆ ಸ್ವಯಂ, ಪಶ್ಚಾತ್ = ಹಿಂದುಗಡೆ ಸ್ವಯಮ್ ಏವ, ಅವಾಚ್ಯಾಂ = ದಕ್ಷಿಣದಲ್ಲಿಯೂ ಸ್ವಯಂ ಹಿ, ಉದೀಚ್ಯಾಮ್ ಅಪಿ =

ಉತ್ತರದಲ್ಲಿಯೂ **ಸ್ವಯಂ, ತಥಾ** = ಹಾಗೆಯೇ **ಉಪರಿಷ್ಟಾತ್** = ಮೇಲೆಯೂ **ಸ್ವಯಂ, ಅಧಸ್ತಾತ್ ಅಪಿ** = ಕೆಳಗೂ [**ಸ್ವಯಮ್**].

**೩೮೮.** ಒಳಗೂ ತಾನೇ, ಹೊರಗೂ ತಾನೇ; ಮುಂದೆಯೂ ತಾನೇ ಹಿಂದೆಯೂ ತಾನೇ; ದಕ್ಷಿಣಕ್ಕೂ ತಾನೇ, ಉತ್ತರಕ್ಕೂ ತಾನೇ; ಹೀಗೆಯೇ ಮೇಲೆಯೂ ತಾನೇ, ಕೆಳಗೂ ತಾನೇ.

['ಮುಂದಿರುವ ಇದು ಅಮೃತವಾದ ಬ್ರಹ್ಮವೇ; ಹಿಂದೆಯೂ ದಕ್ಷಿಣಕ್ಕೂ ಉತ್ತರಕ್ಕೂ ಇರುವುದು ಬ್ರಹ್ಮವೇ; ಕೆಳಗೂ ಮೇಲೂ ಪ್ರಸರಿಸಿರುವುದು ಬ್ರಹ್ಮವೇ. ಈ ಜಗತ್ತೆಲ್ಲವೂ ಶ್ರೇಷ್ಠತಮವಾದ ಬ್ರಹ್ಮವೇ' **ಬ್ರಹ್ಮೈವೇದಮಮೃತಂ ಪುರಸ್ತಾದ್ಬ್ರಹ್ಮ ಪಶ್ಚಾದ್ಬ್ರಹ್ಮ ದಕ್ಷಿಣತಶ್ಚೋತ್ತರೇಣ । ಅಧಶ್ಚೋರ್ಧ್ವಂ ಚ ಪ್ರಸೃತಂ ಬ್ರಹ್ಮೈವೇದಂ ವಿಶ್ವಮಿದಂ ವರಿಷ್ಠಮ್** ॥ (ಮುಂಡಕ ಉ. ೨. ೨. ೧೨) ಎಂಬ ಮಂತ್ರದ ಛಾಯೆಯನ್ನು ಇಲ್ಲಿ ನೋಡಬಹುದು.]

**ತರಂಗ-ಫೇನ-ಭ್ರಮ-ಬುದ್ಬುದಾದಿ**
**ಸರ್ವಂ ಸ್ವರೂಪೇಣ ಜಲಂ ಯಥಾ ತಥಾ ।**
**ಚಿದೇವ ದೇಹಾದ್ಯಹಮಂತಮೇತತ್**
**ಸರ್ವಂ ಚಿದೇವೈಕರಸಂ ವಿಶುದ್ಧಮ್ ॥ ೩೮೯ ॥**

**ತರಂಗ-ಫೇನ ಭ್ರಮ-ಬುದ್ಬುದಾದಿ ಸರ್ವಂ** = ಅಲೆ ನೊರೆ ಸುಳಿ ಗುಳ್ಳೆ ಮೊದಲಾದುದೆಲ್ಲವೂ **ಯಥಾ** = ಹೇಗೆ **ಸ್ವರೂಪೇಣ** = ನಿಜವಾದ ಸ್ಥಿತಿಯಿಂದ **ಜಲಂ** = ನೀರೇ ಆಗಿರುವುದೊ **ತಥಾ** = ಹಾಗೆಯೇ **ದೇಹಾದಿ-ಅಹಮಂತಮ್ ಏತತ್ ಸರ್ವಂ** = ದೇಹವೇ ಮೊದಲಾಗಿ ಅಹಂಕಾರದ ವರೆಗಿನ ಇದೆಲ್ಲವೂ **ಚಿತ್ ಏವ** = ಚಿತ್‌ಸ್ವರೂಪವೇ **ಏಕರಸಂ** = ಏಕರಸವಾದ **ವಿಶುದ್ಧಂ** = ವಿಶುದ್ಧವಾದ **ಚಿತ್ ಏವ** = ಚಿತ್‌ಸ್ವರೂಪವೇ.

**೩೮೯.** ಹೇಗೆ ಅಲೆ ನೊರೆ ಸುಳಿ ಗುಳ್ಳೆ ಮೊದಲಾದುವೆಲ್ಲವೂ ನಿಜವಾದ ಸ್ಥಿತಿಯಿಂದ ನೀರೇ ಆಗಿರುವುದೊ ಹಾಗೆಯೇ ದೇಹವೇ ಮೊದಲಾಗಿ ಅಹಂಕಾರದ ವರೆಗಿನ ಇದೆಲ್ಲವೂ ಚಿತ್‌ಸ್ವರೂಪವೇ, ಏಕರಸವಾದ ವಿಶುದ್ಧ ಚಿನ್ಮಾತ್ರವೇ.

**ಸದೇವೇದಂ ಸರ್ವಂ ಜಗದವಗತಂ ವಾಙ್ಮನಸಯೋಃ**
**ಸತೋಽನ್ಯನ್ನಾಸ್ತ್ಯೇವ ಪ್ರಕೃತಿ-ಪರಸೀಮ್ನಿ ಸ್ಥಿತವತಃ ।**
**ಪೃಥಕ್ ಕಿಂ ಮೃತ್ಸ್ನಾಯಾಃ ಕಲಶ-ಘಟ-ಕುಂಭಾದ್ಯವಗತಂ**
**ವದತ್ಯೇಷ ಭ್ರಾಂತಸ್ತ್ವಮಹಮಿತಿ ಮಾಯಾ-ಮದಿರಯಾ ॥ ೩೯೦ ॥**

**ಪ್ರಕೃತಿ-ಪರಸೀಮ್ನಿ** = ಪ್ರಕೃತಿಯ ಪಾರದಲ್ಲಿ **ಸ್ಥಿತವತಃ** = ಇರುವವನಿಗೆ **ವಾಕ್-ಮನಸಯೋಃ**=ವಾಕ್ಕು ಮನಸ್ಸು ಇವುಗಳಲ್ಲಿ **ಅವಗತಂ**=ತೋರುತ್ತಿರುವ **ಇದಂ ಸರ್ವಂ ಜಗತ್** = **ಈ** ಜಗತ್ತೆಲ್ಲವೂ **ಸತ್ ಏವ** = ಸದ್ವಸ್ತುವೇ; **ಸತಃ** = ಸದ್ವಸ್ತುವಿಗಿಂತ **ಅನ್ಯತ್**=ಬೇರೆಯಾದುದು **ನ ಅಸ್ತಿ ಏವ**=ಇಲ್ಲವೇ ಇಲ್ಲವು; **ಕಲಶ-ಘಟ-ಕುಂಭ-ಆದಿ**= ಕಲಶ ಗಡಿಗೆ ಮಡಕೆ ಮೊದಲಾದುದು **ಮೃತ್ಸ್ನಾಯಾಃ** = ಮಣ್ಣಿಗಿಂತ **ಪೃಥಕ್** = ಬೇರೆಯಾಗಿ **ಅವಗತಂ ಕಿಂ**=ಅರಿಯಲ್ಪಟ್ಟಿದೆಯೇನು? **ಮಾಯಾ-ಮದಿರಯಾ**=ಮಾಯೆಯೆಂಬ ಮದ್ಯದಿಂದ **ಭ್ರಾಂತಃ**=ಭ್ರಾಂತನಾದ **ಏಷಃ**=ಇವನು **ತ್ವಮ್** = ನೀನು **ಅಹಮ್** = ನಾನು **ಇತಿ** = ಎಂದು **ವದತಿ** = ಹೇಳುತ್ತಾನೆ.

**೩೯೦.** ಪ್ರಕೃತಿಯ ಎಲ್ಲೆಯನ್ನು ಮೀರಿ ನಿಂತಿರುವವನಿಗೆ ವಾಙ್ಮನಸ್ಸುಗಳಲ್ಲಿ ತೋರುತ್ತಿರುವ ಈ ಜಗತ್ತೆಲ್ಲವೂ ಸದ್ವಸ್ತುವೇ; ಸದ್ವಸ್ತುವಿಗಿಂತ ಬೇರೆಯಾದದ್ದು ಇಲ್ಲವೇ ಇಲ್ಲ. ಕಲಶ ಗಡಿಗೆ ಮಡಕೆ ಮೊದಲಾದುವು ಮಣ್ಣಿಗಿಂತ ಬೇರೆಯಾಗಿ ತಿಳಿಯಲ್ಪಟ್ಟಿದೆಯೇನು? ಮಾಯೆಯೆಂಬ ಮದ್ಯದಿಂದ ಭ್ರಾಂತನಾದ ಮನುಷ್ಯನೇ 'ನೀನು' 'ನಾನು' ಎನ್ನುತ್ತಾನೆ.

**ಕ್ರಿಯಾ-ಸಮಭಿಹಾರೇಣ ಯತ್ರ ನಾನ್ಯದಿತಿ ಶ್ರುತಿಃ ।**
**ಬ್ರವೀತಿ ದ್ವೈತರಾಹಿತ್ಯಂ ಮಿಥ್ಯಾಧ್ಯಾಸನಿವೃತ್ತಯೇ ॥ ೩೯೧ ॥**

**ಯತ್ರ** = ಎಲ್ಲಿ **ಅನ್ಯತ್ ನ [ಪಶ್ಯತಿ]** = ಬೇರೊಂದನ್ನು ನೋಡುವುದಿಲ್ಲವೊ **ಇತಿ** = ಎಂಬ **ಶ್ರುತಿಃ** = ಶ್ರುತಿಯು **ಮಿಥ್ಯಾ-ಅಧ್ಯಾಸ-ನಿವೃತ್ತಯೇ**=ಮಿಥ್ಯಾಭೂತವಾದ ಅಧ್ಯಾಸವನ್ನು ಹೋಗಲಾಡಿಸುವುದಕ್ಕಾಗಿ **ಕ್ರಿಯಾ-ಸಮಭಿಹಾರೇಣ**=ಕ್ರಿಯಾಪದಗಳನ್ನು ಒಟ್ಟುಗೂಡಿಸಿ [ಪುನಃ ಪುನಃ] **ದ್ವೈತರಾಹಿತ್ಯಂ** = ಅದ್ವೈತ-ತತ್ತ್ವವನ್ನೇ **ಬ್ರವೀತಿ** = ಹೇಳುತ್ತದೆ.

**೩೯೧.** 'ಎಲ್ಲಿ ಬೇರೊಂದನ್ನು ನೋಡುವುದಿಲ್ಲವೊ'[೧] ಎಂಬ ಶ್ರುತಿಯು ಮಿಥ್ಯಾಭೂತವಾದ ಅಧ್ಯಾಸವನ್ನು ಹೋಗಲಾಡಿಸುವುದಕ್ಕಾಗಿ ಕ್ರಿಯಾಪದಗಳನ್ನು ಒಟ್ಟುಗೂಡಿಸಿ (ಪುನಃ ಪುನಃ) ಅದ್ವೈತ-ತತ್ತ್ವವನ್ನು ಹೇಳುತ್ತದೆ.

[[೧] 'ಎಲ್ಲಿ ಬೇರೊಂದನ್ನು ನೋಡುವುದಿಲ್ಲವೊ ಬೇರೊಂದನ್ನು ಕೇಳುವುದಿಲ್ಲವೊ ಬೇರೊಂದನ್ನು ಅರಿಯುವುದಿಲ್ಲವೊ ಅದು ಭೂಮವು' **ಯತ್ರ ನಾನ್ಯತ್ಪಶ್ಯತಿ ನಾನ್ಯಚ್ಛೃಣೋತಿ ನಾನ್ಯದ್ವಿಜಾನಾತಿ ಸ ಭೂಮಾ** (ಛಾಂದೋಗ್ಯ ಉ. ೭. ೨೪. ೧).]

**ಆಕಾಶವನ್ನಿರ್ಮಲ-ನಿರ್ವಿಕಲ್ಪ-**
**ನಿಃಸೀಮ-ನಿಃಸ್ಪಂದನ-ನಿರ್ವಿಕಾರಮ್ ।**
**ಅಂತರ್ಬಹಿಃಶೂನ್ಯಮನನ್ಯಮದ್ವಯಂ**
**ಸ್ವಯಂ ಪರಂ ಬ್ರಹ್ಮ ಕಿಮಸ್ತಿ ಬೋಧ್ಯಮ್ ॥ ೩೯೨ ॥**

**ಆಕಾಶವತ್** = ಆಕಾಶದಂತೆ **ನಿರ್ಮಲ-ನಿರ್ವಿಕಲ್ಪ-ನಿಃಸೀಮ-ನಿಃಸ್ಪಂದನ-ನಿರ್ವಿಕಾರಮ್** = ನಿರ್ಮಲವಾದ ನಿರ್ವಿಕಲ್ಪವಾದ ಪಾರವಿಲ್ಲದ ಸ್ಪಂದನವಿಲ್ಲದ ವಿಕಾರವಿಲ್ಲದ **ಅಂತರ್ಬಹಿಃಶೂನ್ಯಂ** = ಸ್ವಗತಭೇದರಹಿತವಾದ **ಅನನ್ಯಂ** = ತನಗಿಂತ ಬೇರೆಯಲ್ಲದ **ಅದ್ವಯಂ** = ಅದ್ವಯವಾದ **ಪರಂ ಬ್ರಹ್ಮ** = ಪರಬ್ರಹ್ಮವೇ **ಸ್ವಯಂ** = ತಾನು; **ಬೋಧ್ಯಂ ಕಿಮ್ ಅಸ್ತಿ** = ತಿಳಿಯತಕ್ಕದ್ದು [ಬೇರೆ] ಯಾವುದುಂಟು?

**೩೯೨.** ಆಕಾಶದಂತೆ ನಿರ್ಮಲವೂ ನಿರ್ವಿಕಲ್ಪವೂ ಪಾರವಿಲ್ಲದುದೂ ಸ್ಪಂದನವಿಲ್ಲದುದೂ ನಿರ್ವಿಕಾರವೂ ಸ್ವಗತಭೇದರಹಿತವೂ ತನಗಿಂತ ಬೇರೆಯಿಲ್ಲದುದೂ ಅದ್ವಯವೂ ಆದ ಪರಬ್ರಹ್ಮವು ತಾನೇ (ಆಗಿರುತ್ತಾನೆ). ಇದಕ್ಕಿಂತ ಬೇರೆ ತಿಳಿಯತಕ್ಕದ್ದು ಯಾವುದುಂಟು?[೧]

[[೧] ಸರ್ವಾತ್ಮಕನಾದ ಪರಮಾತ್ಮನನ್ನು ಅರಿತುಕೊಂಡಮೇಲೆ ತಿಳಿಯತಕ್ಕದ್ದು ಏನೂ ಇರುವುದಿಲ್ಲ ಎಂಬುದು ಭಾವ.]

**ವಕ್ತವ್ಯಂ ಕಿಮು ವಿದ್ಯತೇಽತ್ರ ಬಹುಧಾ ಬ್ರಹ್ಮೈವ ಜೀವಃ ಸ್ವಯಂ**
**ಬ್ರಹ್ಮೈತಜ್ಜಗದಾತತಂ ನು ಸಕಲಂ ಬ್ರಹ್ಮಾದ್ವಿತೀಯಂ ಶ್ರುತಿಃ ।**
**ಬ್ರಹ್ಮೈವಾಹಮಿತಿ ಪ್ರಬುದ್ಧ-ಮತಯಃ ಸಂತ್ಯಕ್ತಬಾಹ್ಯಾಃ ಸ್ಫುಟಂ**
**ಬ್ರಹ್ಮೀಭೂಯ ವಸಂತಿ ಸಂತತ-ಚಿದಾನಂದಾತ್ಮನೈತದ್ ಧ್ರುವಮ್**
**॥ ೩೯೩ ॥**

**ಅತ್ರ** = ಇಲ್ಲಿ **ಬಹುಧಾ** = ಬಹುವಿಧವಾಗಿ **ವಕ್ತವ್ಯಂ** = ಹೇಳತಕ್ಕದ್ದು **ಕಿಮ್ ಉ ವಿದ್ಯತೇ** = ಏನಿರುವುದು? **ಜೀವಃ** = ಜೀವನು **ಸ್ವಯಂ** = ತಾನೇ **ಬ್ರಹ್ಮ ಏವ** = ಬ್ರಹ್ಮವೇ, **ಆತತಂ** = ವ್ಯಾಪಿಸಿರುವ **ಏತತ್ ಸಕಲಂ ಜಗತ್** = ಈ ಜಗತ್ತೆಲ್ಲವೂ **ಬ್ರಹ್ಮ ನು** = ಬ್ರಹ್ಮವೇ, **ಬ್ರಹ್ಮ** = ಬ್ರಹ್ಮವು **ಅದ್ವಿತೀಯಂ** = ಅದ್ವಿತೀಯವು— [**ಇತಿ** = ಎಂದು] **ಶ್ರುತಿಃ** = ಶ್ರುತಿಯು [ಹೇಳುತ್ತದೆ]; **ಅಹಂ** = ನಾನು **ಬ್ರಹ್ಮ ಏವ** = ಬ್ರಹ್ಮವೇ **ಇತಿ** = ಎಂದು **ಪ್ರಬುದ್ಧಮತಯಃ** = ಪ್ರಬುದ್ಧವಾದ ಬುದ್ಧಿಯುಳ್ಳವರು **ಸಂತ್ಯಕ್ತಬಾಹ್ಯಾಃ** = ಬಾಹ್ಯವಸ್ತುಗಳನ್ನು ಬಿಟ್ಟವರಾಗಿ **ಸ್ಫುಟಂ** = ಸ್ಫುಟವಾಗಿ **ಬ್ರಹ್ಮೀಭೂಯ** = ಬ್ರಹ್ಮಸ್ವರೂಪರಾಗಿ **ಸಂತತ-ಚಿದಾನಂದ-ಆತ್ಮನಾ** = ಸಂತತ-ಚಿದಾನಂದ ಸ್ವರೂಪದಿಂದಲೇ **ವಸಂತಿ** = ಇರುತ್ತಾರೆ. **ಏತತ್** = ಇದು **ಧ್ರುವಂ** = ನಿಶ್ಚಯವು.

**೩೯೩.** ಈ ವಿಷಯದಲ್ಲಿ ಬಹುವಿಧವಾಗಿ ಹೇಳತಕ್ಕದ್ದೇನಿದೆ? ಜೀವನು ತಾನೇ ಬ್ರಹ್ಮವು, ವ್ಯಾಪಿಸಿರುವ ಈ ಜಗತ್ತೆಲ್ಲವೂ ಬ್ರಹ್ಮವೇ, ಬ್ರಹ್ಮವು ಅದ್ವಿತೀಯವು— ಎಂದು ಶ್ರುತಿಯು ಹೇಳುತ್ತದೆ. 'ನಾನು ಬ್ರಹ್ಮವೇ' ಎಂದು ತಿಳಿದುಕೊಂಡಿರುವ ಬುದ್ಧಿಯುಳ್ಳವರು ಬಾಹ್ಯ ವಸ್ತುಗಳನ್ನು ಬಿಟ್ಟು, ಸ್ಫುಟವಾಗಿ ಬ್ರಹ್ಮಸ್ವರೂಪರಾಗಿ, ಸತತವೂ ಚಿದಾನಂದಸ್ವರೂಪದಿಂದಲೇ ಇರುತ್ತಾರೆ. ಇದು ನಿಶ್ಚಯವು.

**ಜಹಿ ಮಲಮಯಕೋಶೇಽಹಂಧಿಯೋತ್ಥಾಪಿತಾಶಾಂ**
**ಪ್ರಸಭಮನಿಲಕಲ್ಪೇ ಲಿಂಗದೇಹೇಽಪಿ ಪಶ್ಚಾತ್ ।**
**ನಿಗಮ-ಗದಿತ-ಕೀರ್ತಿಂ ನಿತ್ಯಮಾನಂದಮೂರ್ತಿಂ**
**ಸ್ವಯಮಿತಿ ಪರಿಚೀಯ ಬ್ರಹ್ಮರೂಪೇಣ ತಿಷ್ಠ ॥ ೩೯೪ ॥**

**ಮಲಮಯ-ಕೋಶೇ**=ಮಲಮಯವಾದ ಈ ದೇಹದಲ್ಲಿ **ಅಹಂಧಿಯಾ**=‘ನಾನು’ ಎಂಬ ಬುದ್ಧಿಯಿಂದ **ಉತ್ಥಾಪಿತ-ಆಶಾಂ**=ಉತ್ಪನ್ನವಾದ ಆಶೆಯನ್ನು **ಜಹಿ**=ತೊರೆ; **ಪಶ್ಚಾತ್**=ಅನಂತರ **ಅನಿಲ-ಕಲ್ಪೇ ಲಿಂಗದೇಹೇ ಅಪಿ**=ವಾಯುವಿನಂತಿರುವ ಲಿಂಗಶರೀರದಲ್ಲಿಯೂ ಕೂಡ [ಆಶೆಯನ್ನು] **ಪ್ರಸಭಂ**=ಬಲಾತ್ಕಾರದಿಂದ [ತೊರೆ]; **ನಿಗಮ-ಗದಿತ-ಕೀರ್ತಿಂ**=ಶಾಸ್ತ್ರಗಳಿಂದ ಹೊಗಳಲ್ಪಟ್ಟ ಕೀರ್ತಿಯುಳ್ಳವನೂ **ನಿತ್ಯಮ್**=ನಿತ್ಯನೂ **ಆನಂದಮೂರ್ತಿಂ**=ಆನಂದಸ್ವರೂಪನೂ ಆದ [ಪರಮಾತ್ಮನೇ] **ಸ್ವಯಂ**=ನಾನು **ಇತಿ**=ಎಂದು **ಪರಿಚೀಯ**=ನಿಶ್ಚಯಿಸಿಕೊಂಡು **ಬ್ರಹ್ಮರೂಪೇಣ**=ಬ್ರಹ್ಮರೂಪದಿಂದ **ತಿಷ್ಠ**=ನಿಲ್ಲು.

**೩೯೪.** ಮಲಮಯವಾದ ಈ ಸ್ಥೂಲದೇಹದಲ್ಲಿ ‘ನಾನು’ ಎಂಬ ಬುದ್ಧಿಯಿಂದ ಉತ್ಪನ್ನವಾದ ಆಶೆಯನ್ನು ತೊರೆ; ಅನಂತರ ವಾಯುವಿನಂತಿರುವ ಲಿಂಗಶರೀರದಲ್ಲಿಯೂ ಕೂಡ (ಆಶೆಯನ್ನು) ಬಲಾತ್ಕಾರದಿಂದ (ತೊರೆ). ಶಾಸ್ತ್ರಗಳಿಂದ ಹೊಗಳಲ್ಪಟ್ಟ ಕೀರ್ತಿಯುಳ್ಳವನೂ ನಿತ್ಯನೂ ಆನಂದ ಸ್ವರೂಪನೂ ಆದ (ಪರಮಾತ್ಮನೇ) ನಾನು ಎಂದು ನಿಶ್ಚಯಿಸಿಕೊಂಡು ಬ್ರಹ್ಮರೂಪದಿಂದ ನಿಲ್ಲು.

**ಶವಾಕಾರಂ ಯಾವದ್ ಭಜತಿ ಮನುಜಸ್ತಾವದಶುಚಿಃ**
**ಪರೇಭ್ಯಃ ಸ್ಯಾತ್ ಕ್ಲೇಶೋ ಜನನ-ಮರಣ-ವ್ಯಾಧಿ-ನಿಲಯಃ ।**
**ಯದಾತ್ಮಾನಂ ಶುದ್ಧಂ ಕಲಯತಿ ಶಿವಾಕಾರಮಚಲಮ್**
**ತದಾ ತೇಭ್ಯೋ ಮುಕ್ತೋ ಭವತಿ ಹಿ ತದಾಹ ಶ್ರುತಿರಪಿ ॥ ೩೯೫ ॥**

**ಮನುಜಃ**=ಮನುಷ್ಯನು **ಯಾವತ್**=ಎಲ್ಲಿಯ ವರೆಗೆ **ಶವಾಕಾರಂ**=ಹೆಣದ ರೂಪವನ್ನು **ಭಜತಿ**=ಸೇವಿಸುತ್ತಾನೆಯೊ **ತಾವತ್**=ಅಲ್ಲಿಯ ವರೆಗೆ **ಅಶುಚಿಃ**=ಅಶುಚಿಯಾಗಿರುತ್ತಾನೆ; [ಮತ್ತು] **ಪರೇಭ್ಯಃ**=ಶತ್ರುಗಳಿಂದ **ಕ್ಲೇಶಃ ಸ್ಯಾತ್**=ಕ್ಲೇಶವುಂಟಾಗುತ್ತದೆ; **ಜನನ-ಮರಣ-ವ್ಯಾಧಿ-ನಿಲಯಃ**=ಜನ್ಮ-ಮರಣ-ವ್ಯಾಧಿಗಳಿಗೆ ಆಶ್ರಯನಾಗುತ್ತಾನೆ; **ಯದಾ**=ಯಾವಾಗ **ಆತ್ಮಾನಂ**=ತನ್ನನ್ನು **ಶುದ್ಧಂ**=ಶುದ್ಧನೆಂದೂ **ಶಿವಾಕಾರಂ**=ಮಂಗಳಸ್ವರೂಪನೆಂದೂ **ಅಚಲಂ**=ಅಚಲನೆಂದೂ **ಕಲಯತಿ**=ತಿಳಿಯುತ್ತಾನೆಯೊ **ತದಾ**=ಆಗ **ತೇಭ್ಯಃ**=ಆ ಕ್ಲೇಶಗಳಿಂದ **ಮುಕ್ತಃ ಭವತಿ**=ಮುಕ್ತನಾಗುತ್ತಾನೆ; **ಶ್ರುತಿಃ ಅಪಿ**=ಉಪನಿಷತ್ತು **ತತ್ ಹಿ**=ಅದನ್ನೇ **ಆಹ**=ಹೇಳುತ್ತದೆ.

**೩೯೫.** ಮನುಷ್ಯನು ಎಲ್ಲಿಯ ವರೆಗೆ ಶವಾಕಾರವಾದ ಶರೀರವನ್ನು ಸೇವಿಸುತ್ತಾನೆಯೊ ಅಲ್ಲಿಯ ವರೆಗೆ ಅಶುಚಿಯಾಗಿರುತ್ತಾನೆ, ಶತ್ರುಗಳಿಂದ ಕ್ಲೇಶವನ್ನು ಪಡೆಯುತ್ತಾನೆ ಮತ್ತು ಜನ್ಮ-ಮರಣ-ವ್ಯಾಧಿಗಳಿಗೆ ಆಶ್ರಯನಾಗಿರುತ್ತಾನೆ. ಯಾವಾಗ ತನ್ನನ್ನು ಶುದ್ಧನೆಂದೂ ಅಚಲನೆಂದೂ ಶಿವಾಕಾರನೆಂದೂ ತಿಳಿಯುತ್ತಾನೆಯೊ ಆಗ ಆ ಕ್ಲೇಶಗಳಿಂದ ಮುಕ್ತನಾಗುತ್ತಾನೆ. ಉಪನಿಷತ್ತೂ ಅದನ್ನೇ ಹೇಳುತ್ತದೆ.[೧]

[[೧]'ಶರೀರವಿಲ್ಲದವನನ್ನು ಪ್ರಿಯಾಪ್ರಿಯಗಳು ಸೋಂಕುವುದೇ ಇಲ್ಲ' **ಅಶರೀರಂ ವಾವ ಸಂತಂ ನ ಪ್ರಿಯಾಪ್ರಿಯೇ ಸ್ಪೃಶತಃ** (ಛಾಂದೋಗ್ಯ ಉ. ೮. ೧೨. ೧); 'ಆಗ ಈ (ಆತ್ಮನು) ಅಶರೀರನೂ ಅಮೃತನೂ ಪರಮಾತ್ಮನೂ ಬ್ರಹ್ಮವೂ ತೇಜಸ್ಸೂ (ಆಗುತ್ತಾನೆ)' **ಅಥಾಯಮಶರೀರೋಽಮೃತಃ ಪ್ರಾಣೋ ಬ್ರಹ್ಮೈವ ತೇಜ ಏವ** (ಬೃಹದಾರಣ್ಯಕ ಉ. ೪. ೪. ೭). ]

**ಸ್ವಾತ್ಮನ್ಯಾರೋಪಿತಾಶೇಷಾಭಾಸವಸ್ತು-ನಿರಾಸತಃ ।**
**ಸ್ವಯಮೇವ ಪರಂ ಬ್ರಹ್ಮ ಪೂರ್ಣಮದ್ವಯಮಕ್ರಿಯಮ್ ॥ ೩೯೬ ॥**

**ಸ್ವಾತ್ಮನಿ** = ತನ್ನಲ್ಲಿ **ಆರೋಪಿತ-ಅಶೇಷ-ಆಭಾಸವಸ್ತು-ನಿರಾಸತಃ** = ಆರೋಪಿಸಲ್ಪಟ್ಟ ಸಮಸ್ತ ಕಲ್ಪಿತವಸ್ತುಗಳ ನಿರಾಕರಣದಿಂದ **ಸ್ವಯಮ್ ಏವ** = ನಾನೇ **ಪೂರ್ಣಂ** = ಪೂರ್ಣವೂ **ಅದ್ವಯಂ** = ಅದ್ವಿತೀಯವೂ **ಅಕ್ರಿಯಂ** = ನಿಷ್ಕ್ರಿಯವೂ [ಆದ] **ಪರಂ ಬ್ರಹ್ಮ** = ಪರಬ್ರಹ್ಮವು [ಆಗುತ್ತಾನೆ].

**೩೯೬.** ತನ್ನಲ್ಲಿ ಆರೋಪಿಸಲ್ಪಟ್ಟ ಕಲ್ಪಿತವಸ್ತುಗಳೆಲ್ಲವನ್ನೂ ನಿರಾಕರಿಸುವುದರಿಂದ ತಾನೇ ಪೂರ್ಣವೂ ಅದ್ವಿತೀಯವೂ ನಿಷ್ಕ್ರಿಯವೂ ಆದ ಪರಬ್ರಹ್ಮವಾಗುತ್ತಾನೆ.

**ಸಮಾಹಿತಾಯಾಂ ಸತಿ ಚಿತ್ತವೃತ್ತೌ**
**ಪರಾತ್ಮನಿ ಬ್ರಹ್ಮಣಿ ನಿರ್ವಿಕಲ್ಪೇ ।**
**ನ ದೃಶ್ಯತೇ ಕಶ್ಚಿದಯಂ ವಿಕಲ್ಪಃ**
**ಪ್ರಜಲ್ಪಮಾತ್ರಃ ಪರಿಶಿಷ್ಯತೇ ತತಃ ॥ ೩೯೭ ॥**

**ನಿರ್ವಿಕಲ್ಪೇ** = ನಿರ್ವಿಕಲ್ಪನಾದ **ಬ್ರಹ್ಮಣಿ** = ಬ್ರಹ್ಮವಾದ **ಪರಾತ್ಮನಿ** = ಪರಮಾತ್ಮನಲ್ಲಿ **ಚಿತ್ತವೃತ್ತೌ** = ಚಿತ್ತವೃತ್ತಿಯು **ಸಮಾಹಿತಾಯಾಂ ಸತಿ** [**ಸತ್ಯಾಂ**] = ಸಮಾಹಿತವಾದಾಗ **ಅಯಂ ಕಶ್ಚಿತ್ ವಿಕಲ್ಪಃ** = ಈ ಯಾವ ಭೇದವೂ **ನ ದೃಶ್ಯತೇ** = ಕಂಡುಬರುವುದಿಲ್ಲ; **ತತಃ** = ಅನಂತರ **ಪ್ರಜಲ್ಪಮಾತ್ರಃ** = ಬರಿಯ ಶಬ್ದವೇ **ಪರಿಶಿಷ್ಯತೇ** = ಉಳಿದುಕೊಳ್ಳುತ್ತದೆ.

೩೯೭. ನಿರ್ವಿಕಲ್ಪವೂ ಬ್ರಹ್ಮವೂ ಆದ ಪರಮಾತ್ಮನಲ್ಲಿ ಚಿತ್ತವೃತ್ತಿಯು ಏಕಾಗ್ರತೆಯನ್ನು ಹೊಂದಿದಾಗ ಈ ಯಾವುದೊಂದು ಭೇದವೂ ಕಂಡುಬರುವುದಿಲ್ಲ. ಅನಂತರ (ಅರ್ಥವಿಲ್ಲದ) ಬರಿಯ ಶಬ್ದವೇ ಉಳಿದುಕೊಳ್ಳುತ್ತದೆ.[೧]

[[೧] 'ಹೊರಗಡೆ ವಸ್ತುವಿಲ್ಲದಿರುವಾಗ ಅರ್ಥವನ್ನು ಅವಲಂಬಿಸಿರುವ ಶಬ್ದವು ವಿಕಲ್ಪವೆನಿಸುವುದು' **ಶಬ್ದಜ್ಞಾನಾನುಪಾತೀ ವಸ್ತುಶೂನ್ಯೋ ವಿಕಲ್ಪಃ** (ಪಾತಂಜಲ ಯೋಗಸೂತ್ರ ೧. ೯).]

**ಅಸತ್ಕಲ್ಪೋ ವಿಕಲ್ಪೋಽಯಂ ವಿಶ್ವಮಿತ್ಯೇಕವಸ್ತುನಿ ।**
**ನಿರ್ವಿಕಾರೇ ನಿರಾಕಾರೇ ನಿರ್ವಿಶೇಷೇ ಭಿದಾ ಕುತಃ ॥ ೩೯೮ ॥**

**ಏಕವಸ್ತುನಿ**=ಒಂದು ವಸ್ತುವಿನಲ್ಲಿ **ವಿಶ್ವಮ್ ಇತಿ**=ಪ್ರಪಂಚವೆಂಬ **ಅಯಂ ವಿಕಲ್ಪಃ**=ಈ ಭೇದವು **ಅಸತ್ಕಲ್ಪಃ**=ಅಸತ್ತಿಗೆ ಸಮಾನವಾದುದು; **ನಿರ್ವಿಕಾರೇ**=ನಿರ್ವಿಕಾರವಾದ **ನಿರಾಕಾರೇ**=ನಿರಾಕಾರವಾದ **ನಿರ್ವಿಶೇಷೇ**=ನಿರ್ವಿಶೇಷವಾದ [ವಸ್ತುವಿನಲ್ಲಿ] **ಭಿದಾ**=ಭೇದವು **ಕುತಃ**=ಎಲ್ಲಿಯದು?

೩೯೮. ಆ ಏಕವಸ್ತುವಿನಲ್ಲಿಯೇ ಈ ಪ್ರಪಂಚವೆಂಬ ಭೇದವು ಅಸದ್ವಸ್ತುವಿನಂತೆ ಇರುವುದು. ನಿರ್ವಿಕಾರವೂ ನಿರಾಕಾರವೂ ನಿರ್ವಿಶೇಷವೂ ಆದ ವಸ್ತುವಿನಲ್ಲಿ ಈ ಭೇದವೆಲ್ಲಿಯದು?

**ದ್ರಷ್ಟೃ-ದರ್ಶನ-ದೃಶ್ಯಾದಿ-ಭಾವ-ಶೂನ್ಯೈಕ-ವಸ್ತುನಿ ।**
**ನಿರ್ವಿಕಾರೇ ನಿರಾಕಾರೇ ನಿರ್ವಿಶೇಷೇ ಭಿದಾ ಕುತಃ ॥ ೩೯೯ ॥**

**ನಿರ್ವಿಕಾರೇ ನಿರಾಕಾರೇ ನಿರ್ವಿಶೇಷೇ, ದ್ರಷ್ಟೃ-ದರ್ಶನ-ದೃಶ್ಯಾದಿ-ಭಾವ-ಶೂನ್ಯ-ಏಕ-ವಸ್ತುನಿ**=ನೋಡುವವನು, ನೋಟ, ನೋಡತಕ್ಕದ್ದು ಮೊದಲಾದ ಭಾವಗಳಿಂದ ಶೂನ್ಯವಾದ ಏಕವಸ್ತುವಿನಲ್ಲಿ **ಭಿದಾ ಕುತಃ?**

೩೯೯. ನಿರ್ವಿಕಾರವೂ ನಿರಾಕಾರವೂ ನಿರ್ವಿಶೇಷವೂ ಆದ ಮತ್ತು ದ್ರಷ್ಟೃ ದರ್ಶನ ದೃಶ್ಯ ಮೊದಲಾದ ಭಾವಗಳಿಲ್ಲದ ಏಕವಸ್ತುವಿನಲ್ಲಿ ಭೇದವು ಎಲ್ಲಿಯದು?

**ಕಲ್ಪಾರ್ಣವ ಇವಾತ್ಯಂತಪರಿಪೂರ್ಣೈಕವಸ್ತುನಿ ।**
**ನಿರ್ವಿಕಾರೇ ನಿರಾಕಾರೇ ನಿರ್ವಿಶೇಷೇ ಭಿದಾ ಕುತಃ ॥ ೪೦೦ ॥**

**ನಿರ್ವಿಕಾರೇ ನಿರಾಕಾರೇ ನಿರ್ವಿಶೇಷೇ, ಕಲ್ಪ-ಅರ್ಣವಃ ಇವ**=ಪ್ರಳಯಕಾಲದ ಸಮುದ್ರದಂತೆ **ಅತ್ಯಂತ-ಪರಿಪೂರ್ಣ-ಏಕವಸ್ತುನಿ**=ಅತ್ಯಂತ ಪರಿಪೂರ್ಣವಾದ ಏಕವಸ್ತುವಿನಲ್ಲಿ **ಭಿದಾ ಕುತಃ?**

**೪೦೦.** ನಿರ್ವಿಕಾರವೂ ನಿರಾಕಾರವೂ ನಿರ್ವಿಶೇಷವೂ ಆದ ಮತ್ತು ಪ್ರಳಯಕಾಲದ ಸಮುದ್ರದಂತೆ ಅತ್ಯಂತ ಪರಿಪೂರ್ಣವಾಗಿರುವ ಏಕವಸ್ತುವಿನಲ್ಲಿ ಭೇದವು ಎಲ್ಲಿಯದು?

**ತೇಜಸೀವ ತಮೋ ಯತ್ರ ಪ್ರಲೀನಂ ಭ್ರಾಂತಿಕಾರಣಮ್ ।**
**ಅದ್ವಿತೀಯೇ ಪರೇ ತತ್ತ್ವೇ ನಿರ್ವಿಶೇಷೇ ಭಿದಾ ಕುತಃ ॥ ೪೦೧ ॥**

**ತೇಜಸಿ** = ಬೆಳಕಿನಲ್ಲಿ **ತಮಃ ಇವ** = ಕತ್ತಲೆಯು ಹೇಗೋ ಹಾಗೆ **ಯತ್ರ** = ಯಾವುದರಲ್ಲಿ **ಭ್ರಾಂತಿಕಾರಣಂ** = ಭ್ರಾಂತಿಕಾರಣವು **ಪ್ರಲೀನಂ** = ಲಯವಾಗುವುದೊ [**ತಸ್ಮಿನ್** = ಅಂಥ] **ಅದ್ವಿತೀಯೇ** = ಅದ್ವಿತೀಯವಾದ **ನಿರ್ವಿಶೇಷೇ** = ನಿರ್ವಿಶೇಷವಾದ **ಪರೇ ತತ್ತ್ವೇ** = ಪರತತ್ತ್ವದಲ್ಲಿ **ಭಿದಾ ಕುತಃ?**

**೪೦೧.** ಬೆಳಕಿನಲ್ಲಿ ಕತ್ತಲೆಯು ಅಡಗಿಹೋಗುವಂತೆ ಭ್ರಾಂತಿಕಾರಣವು ಯಾವ ಪರಮಾತ್ಮನಲ್ಲಿ ಲಯವಾಗುವುದೊ ಆ ಅದ್ವಿತೀಯವಾದ ನಿರ್ವಿಶೇಷವಾದ ಪರತತ್ತ್ವದಲ್ಲಿ ಭೇದವು ಎಲ್ಲಿಯದು?

**ಏಕಾತ್ಮಕೇ ಪರೇ ತತ್ತ್ವೇ ಭೇದವಾರ್ತಾ ಕಥಂ ಭವೇತ್ ।**
**ಸುಷುಪ್ತೌ ಸುಖಮಾತ್ರಾಯಾಂ ಭೇದಃ ಕೇನಾವಲೋಕಿತಃ ॥೪೦೨॥**

**ಏಕಾತ್ಮಕೇ** = ಅದ್ವಿತೀಯಸ್ವರೂಪವಾದ **ಪರೇ ತತ್ತ್ವೇ** = ಪರತತ್ತ್ವದಲ್ಲಿ **ಭೇದವಾರ್ತಾ** = ಭೇದದ ಸುದ್ದಿಯು **ಕಥಂ** = ಹೇಗೆ **ಭವೇತ್** = ಉಂಟಾದೀತು? **ಸುಖಮಾತ್ರಾಯಾಂ** = ಕೇವಲ ಆನಂದಸ್ವರೂಪವಾದ **ಸುಷುಪ್ತೌ** = ಸುಷುಪ್ತಿಯಲ್ಲಿ **ಭೇದಃ** = ಭೇದವು **ಕೇನ** = ಯಾವನಿಂದ **ಅವಲೋಕಿತಃ** = ನೋಡಲ್ಪಟ್ಟಿದೆ?

**೪೦೨.** ಅದ್ವಿತೀಯಸ್ವರೂಪವಾದ ಪರತತ್ತ್ವದಲ್ಲಿ ಭೇದದ ಸುದ್ದಿಯು ಹೇಗೆ ಉಂಟಾದೀತು? ಕೇವಲ ಆನಂದಸ್ವರೂಪವಾಗಿರುವ ಸುಷುಪ್ತಿಯಲ್ಲಿ ಭೇದವನ್ನು ಯಾರು ನೋಡಿರುವರು?

**ನ ಹ್ಯಸ್ತಿ ವಿಶ್ವಂ ಪರತತ್ತ್ವಬೋಧಾತ್**
**ಸದಾತ್ಮನಿ ಬ್ರಹ್ಮಣಿ ನಿರ್ವಿಕಲ್ಪೇ ।**
**ಕಾಲತ್ರಯೇ ನಾಪ್ಯಹಿರೀಕ್ಷಿತೋ ಗುಣೇ**
**ನ ಹ್ಯಂಬುಬಿಂದುರ್ಮೃಗತೃಷ್ಣಿಕಾಯಾಮ್ ॥ ೪೦೩ ॥**

**ಪರತತ್ತ್ವ-ಬೋಧಾತ್** [**ಪ್ರಾಕ್ ಅಪಿ**] = ಪರತತ್ತ್ವವನ್ನು ಅರಿತುಕೊಳ್ಳುವುದಕ್ಕೆ ಮೊದಲೇ **ಸದಾತ್ಮನಿ** = ಸತ್ಸ್ವರೂಪವಾದ **ನಿರ್ವಿಕಲ್ಪೇ** = ನಿರ್ವಿಕಲ್ಪವಾದ

**ಬ್ರಹ್ಮಣಿ** = ಬ್ರಹ್ಮದಲ್ಲಿ **ವಿಶ್ವಂ** = ಪ್ರಪಂಚವು **ನ ಹಿ ಅಸ್ತಿ** = ಇರಲೇ ಇರಲಿಲ್ಲ; **ಗುಣೇ** = ಹಗ್ಗದಲ್ಲಿ **ಅಹಿಃ** = ಹಾವೂ **ಮೃಗತೃಷ್ಣಿಕಾಯಾಂ** = ಬಿಸಿಲುಕುದುರೆಯಲ್ಲಿ **ಅಂಬುಬಿಂದುಃ ಹಿ** = ನೀರಿನ ಹನಿಯೂ **ಕಾಲತ್ರಯೇ** = ಮೂರು ಕಾಲಗಳಲ್ಲಿಯೂ **ನ ಅಪಿ ಈಕ್ಷಿತಃ** = ನೋಡಲ್ಪಟ್ಟಿಲ್ಲ.

**೪೦೩.** ಪರತತ್ತ್ವವನ್ನು ಅರಿತುಕೊಳ್ಳುವುದಕ್ಕೆ ಮೊದಲೇ ಸತ್-ಸ್ವರೂಪವೂ ನಿರ್ವಿಕಲ್ಪವೂ ಆದ ಬ್ರಹ್ಮದಲ್ಲಿ ಪ್ರಪಂಚವು ಇರಲೇ ಇರಲಿಲ್ಲ. ಹಗ್ಗದಲ್ಲಿ ಹಾವೂ ಬಿಸಿಲುಕುದುರೆಯಲ್ಲಿ ನೀರಿನ ಹನಿಯೂ ಮೂರು ಕಾಲಗಳಲ್ಲಿಯೂ ಕಂಡುಬರುವುದಿಲ್ಲ.

**ಮಾಯಾಮಾತ್ರಮಿದಂ ದ್ವೈತಮದ್ವೈತಂ ಪರಮಾರ್ಥತಃ ।**
**ಇತಿ ಬ್ರೂತೇ ಶ್ರುತಿಃ ಸಾಕ್ಷಾತ್ ಸುಷುಪ್ತಾವನುಭೂಯತೇ**
**॥ ೪೦೪ ॥**

**ಇದಂ ದ್ವೈತಂ** = ಈ ದ್ವೈತವು **ಮಾಯಾಮಾತ್ರಂ** = ಮಾಯಾಮಾತ್ರವೇ, **ಪರಮಾರ್ಥತಃ** = ಪರಮಾರ್ಥವಾಗಿ **ಅದ್ವೈತಂ** = ಅದ್ವೈತವು—**ಇತಿ** = ಎಂದು **ಶ್ರುತಿಃ** = ಶ್ರುತಿಯು **ಬ್ರೂತೇ** = ಹೇಳುತ್ತದೆ; **ಸುಷುಪ್ತೌ** = ಸುಷುಪ್ತಿಯಲ್ಲಿ **ಸಾಕ್ಷಾತ್** = ಪ್ರತ್ಯಕ್ಷವಾಗಿ **ಅನುಭೂಯತೇ** = ಅನುಭವಿಸಲ್ಪಡುತ್ತದೆ.

**೪೦೪.** 'ಈ ದ್ವೈತವು ಮಾಯಾಮಾತ್ರವೇ, ಪರಮಾರ್ಥವಾಗಿ ಅದ್ವೈತವೇ' ಎಂದು ಶ್ರುತಿಯು[೧] ಹೇಳುತ್ತದೆ. ಸುಷುಪ್ತಿಯಲ್ಲಿ ಇದು ನೇರವಾಗಿಯೇ ಅನುಭವಕ್ಕೆ ಬರುತ್ತದೆ.

[ಪ್ರಪಂಚ-ನಿವೃತ್ತಿಯಿಂದ ಜ್ಞಾನವುಂಟಾಗುವುದಾದರೆ ಪ್ರಪಂಚವಿರುವಾಗ ಅದ್ವೈತವು ಹೇಗಿರುವುದು?—ಎಂಬುದಕ್ಕೆ ಇಲ್ಲಿ ಪರಿಹಾರವನ್ನು ಹೇಳಿದೆ. ಭ್ರಾಂತಿಯಿಂದ ಹಗ್ಗದಲ್ಲಿ ಕಲ್ಪಿತವಾದ ಹಾವು ಸತ್ಯವಾಗಿದ್ದುಕೊಂಡು ಅನಂತರ ಹೋಗುವುದಿಲ್ಲ. ಹಾಗೆಯೇ ಈ ಪ್ರಪಂಚವೆಂಬ ದ್ವೈತವು ಮಾಯಾಮಾತ್ರವು. ಹಗ್ಗದ ಹಾಗೆ ಪರಮಾರ್ಥವಾಗಿ ಅದ್ವೈತವೇ ಇರುವುದು. ಯಾವ ಪ್ರಪಂಚವೂ ಬರುವುದೂ ಇಲ್ಲ, ಹೋಗುವುದೂ ಇಲ್ಲ.

[೧] ಇದು ಯಾವ ಶ್ರುತಿಯೆಂಬುದು ತಿಳಿದಿಲ್ಲ. ಮಾಂಡೂಕ್ಯಕಾರಿಕೆಯ ೧. ೧೭ರ ಉತ್ತರಭಾಗದಲ್ಲಿ ಇದು ಬಂದಿದೆ.]

**ಅನನ್ಯತ್ವಮಧಿಷ್ಠಾನಾದಾರೋಪ್ಯಸ್ಯ ನಿರೀಕ್ಷಿತಮ್ ।**
**ಪಂಡಿತೈ ರಜ್ಜು-ಸರ್ಪಾದೌ ವಿಕಲ್ಪೋ ಭ್ರಾಂತಿಜೀವನಃ ॥ ೪೦೫ ॥**

**ಆರೋಪ್ಯಸ್ಯ** = ಆರೋಪಿತವಾದುದರ **ಅಧಿಷ್ಠಾನಾತ್** = ಆಶ್ರಯಕ್ಕಿಂತ **ಅನನ್ಯತ್ವಂ** = ಅನನ್ಯತ್ವವು **ರಜ್ಜು-ಸರ್ಪಾದೌ** = ಹಗ್ಗದಲ್ಲಿ ತೋರುವ ಹಾವೇ ಮೊದಲಾದುದರಲ್ಲಿ **ಪಂಡಿತೈಃ** = ಪ್ರಾಜ್ಞರಿಂದ **ನಿರೀಕ್ಷಿತಂ** = ನೋಡಲ್ಪಟ್ಟಿದೆ; **ವಿಕಲ್ಪಃ** = ಭೇದವು **ಭ್ರಾಂತಿಜೀವನಃ** = ಭ್ರಾಂತಿಯೇ ಜೀವನವಾಗಿ ಉಳ್ಳದ್ದು.

**೪೦೫.** ಆರೋಪಿತವಾದ ವಸ್ತುವು ತನ್ನ ಆಶ್ರಯಕ್ಕಿಂತ ಬೇರೆಯಲ್ಲ ಎಂಬುದನ್ನು ಪ್ರಾಜ್ಞರು ಹಗ್ಗದಲ್ಲಿ ಕಂಡುಬರುವ ಹಾವೇ ಮೊದಲಾದ ಕಡೆಯಲ್ಲಿ ನೋಡಿರುತ್ತಾರೆ. ಈ ಭೇದಕ್ಕೆ ಭ್ರಾಂತಿಯೇ ಕಾರಣವು.

**ಚಿತ್ತಮೂಲೋ ವಿಕಲ್ಪೋಽಯಂ ಚಿತ್ತಾಭಾವೇ ನ ಕಶ್ಚನ ।**
**ಅತಶ್ಚಿತ್ತಂ ಸಮಾಧೇಹಿ ಪ್ರತ್ಯಗ್ರೂಪೇ ಪರಾತ್ಮನಿ ॥ ೪೦೬ ॥**

**ಅಯಂ ವಿಕಲ್ಪಃ** = ಈ ಭೇದವು **ಚಿತ್ತಮೂಲಃ** = ಚಿತ್ತವನ್ನೇ ಕಾರಣವಾಗಿ ಉಳ್ಳದ್ದು, **ಚಿತ್ತ-ಅಭಾವೇ** = ಚಿತ್ತವಿಲ್ಲದಿದ್ದರೆ **ಕಶ್ಚನ ನ** = ಯಾವ [ಭೇದವೂ] ಇರುವುದಿಲ್ಲ; **ಅತಃ** = ಆದುದರಿಂದ **ಚಿತ್ತಂ** = ಚಿತ್ತವನ್ನು **ಪ್ರತ್ಯಕ್-ರೂಪೇ** = ಸ್ವರೂಪಭೂತನಾದ **ಪರಾತ್ಮನಿ** = ಪರಮಾತ್ಮನಲ್ಲಿ **ಸಮಾಧೇಹಿ** = ನೆಲೆಗೊಳಿಸು.

**೪೦೬.** ಈ ಭೇದಕ್ಕೆ ಚಿತ್ತವೇ ಮೂಲಕಾರಣವಾಗಿದೆ, ಚಿತ್ತವಿಲ್ಲದಿದ್ದರೆ ಯಾವ (ಭೇದವೂ) ಇರುವುದಿಲ್ಲ. ಆದುದರಿಂದ ನಿನ್ನ ಸ್ವರೂಪಭೂತನಾದ ಪರಮಾತ್ಮನಲ್ಲಿ ಚಿತ್ತವನ್ನು ನೆಲೆಗೊಳಿಸು.

[ಭ್ರಾಂತಿಯನ್ನು ತೊಲಗಿಸಿಕೊಳ್ಳುವುದಕ್ಕೆ ಇಲ್ಲಿ ಉಪಾಯವನ್ನು ಹೇಳಿದೆ.]

**ಕಿಮಪಿ ಸತತಬೋಧಂ ಕೇವಲಾನಂದರೂಪಂ**
**ನಿರುಪಮಮತಿವೇಲಂ ನಿತ್ಯಮುಕ್ತಂ ನಿರೀಹಮ್ ।**
**ನಿರವಧಿ-ಗಗನಾಭಂ ನಿಷ್ಕಲಂ ನಿರ್ವಿಕಲ್ಪಂ**
**ಹೃದಿ ಕಲಯತಿ ವಿದ್ವಾನ್ ಬ್ರಹ್ಮ ಪೂರ್ಣಂ ಸಮಾಧೌ ॥ ೪೦೭ ॥**

**ವಿದ್ವಾನ್** = ಜ್ಞಾನಿಯು **ಕಿಮ್ ಅಪಿ** = ಅನಿರ್ವಾಚ್ಯವಾದ **ಸತತ-ಬೋಧಂ** = ನಿತ್ಯವೂ ಜ್ಞಾನಸ್ವರೂಪವಾದ **ಕೇವಲಾನಂದರೂಪಂ** = ಕೇವಲಾನಂದಸ್ವರೂಪವಾದ **ನಿರುಪಮಂ** = ಹೋಲಿಕೆಯಿಲ್ಲದ **ಅತಿವೇಲಂ** = ತೀರವಿಲ್ಲದ, ವಿಶ್ವಾತೀತವಾದ **ನಿತ್ಯ-ಮುಕ್ತಂ** = ನಿತ್ಯಮುಕ್ತವಾದ **ನಿರೀಹಂ** = ನಿಷ್ಕ್ರಿಯವಾದ **ನಿರವಧಿ-ಗಗನ-ಆಭಂ** = ಅವಧಿಯಿಲ್ಲದ ಆಕಾಶದಂತಿರುವ **ನಿಷ್ಕಲಂ** = ಅವಯವವಿಲ್ಲದ **ನಿರ್ವಿಕಲ್ಪಂ** = ನಿರ್ವಿಕಲ್ಪವಾದ **ಪೂರ್ಣಂ ಬ್ರಹ್ಮ** = ಪೂರ್ಣಬ್ರಹ್ಮವನ್ನು **ಸಮಾಧೌ** = ಸಮಾಧಿಯಲ್ಲಿ **ಹೃದಿ** = ಹೃದಯದಲ್ಲಿ **ಕಲಯತಿ** = ಸಾಕ್ಷಾತ್ಕರಿಸುತ್ತಾನೆ.

**೪೦೭.** ನಿತ್ಯಜ್ಞಾನಸ್ವರೂಪವೂ ಕೇವಲಾನಂದಸ್ವರೂಪವೂ ನಿರುಪಮವೂ ವಿಶ್ವಾತೀತವೂ ನಿತ್ಯಮುಕ್ತವೂ ನಿಷ್ಕ್ರಿಯವೂ ಅವಧಿಯಿಲ್ಲದ ಆಕಾಶದಂತಿರುವುದೂ ನಿಷ್ಕಲವೂ ನಿರ್ವಿಕಲ್ಪವೂ ಅನಿರ್ವಾಚ್ಯವೂ ಆದ ಪೂರ್ಣ ಬ್ರಹ್ಮವನ್ನು ಜ್ಞಾನಿಯು ಸಮಾಧಿಯ ಮೂಲಕ ಹೃದಯಾಕಾಶದಲ್ಲಿ ಸಾಕ್ಷಾತ್ಕರಿಸುತ್ತಾನೆ.

**ಪ್ರಕೃತಿ-ವಿಕೃತಿ-ಶೂನ್ಯಂ ಭಾವನಾತೀತ-ಭಾವಂ**
**ಸಮರಸಮಸಮಾನಂ ಮಾನ-ಸಂಬಂಧ-ದೂರಮ್ ।**
**ನಿಗಮ-ವಚನ-ಸಿದ್ಧಂ ನಿತ್ಯಮಸ್ಮತ್ಪ್ರಸಿದ್ಧಂ**
**ಹೃದಿ ಕಲಯತಿ ವಿದ್ವಾನ್ ಬ್ರಹ್ಮ ಪೂರ್ಣಂ ಸಮಾಧೌ ॥ ೪೦೮ ॥**

**ವಿದ್ವಾನ್, ಪ್ರಕೃತಿ-ವಿಕೃತಿ-ಶೂನ್ಯಂ**=ಕಾರ್ಯ-ಕಾರಣ-ಭಾವಗಳಿಲ್ಲದ **ಭಾವನಾತೀತಭಾವಂ**=ಕಲ್ಪನಾತೀತ-ಸ್ವಭಾವವುಳ್ಳ **ಸಮರಸಂ**=ಏಕರಸವಾದ **ಅಸಮಾನಂ**=ಅನುಪಮವಾದ **ಮಾನ-ಸಂಬಂಧ-ದೂರಂ** = ಪ್ರಮಾಣಕ್ಕೆ ಗೋಚರವಲ್ಲದ **ನಿಗಮ-ವಚನ-ಸಿದ್ಧಂ**=ವೇದವಾಕ್ಯಗಳಿಂದ ಸಿದ್ಧವಾದ **ನಿತ್ಯಂ**=ಯಾವಾಗಲೂ **ಅಸ್ಮತ್-ಪ್ರಸಿದ್ಧಂ**='ನಾನು' ಎಂಬ ಪ್ರತ್ಯಯದಿಂದ ಪ್ರಸಿದ್ಧವಾದ **ಪೂರ್ಣಂ ಬ್ರಹ್ಮ ಸಮಾಧೌ ಹೃದಿ ಕಲಯತಿ.**

**೪೦೮.** ಕಾರ್ಯಕಾರಣ-ಭಾವಗಳಿಲ್ಲದ, ಕಲ್ಪನಾತೀತ-ಸ್ವಭಾವವುಳ್ಳ, ಏಕರಸವಾದ, ಅನುಪಮವಾದ, ಪ್ರಮಾಣಕ್ಕೆ ಗೋಚರವಲ್ಲದ, ವೇದವಾಕ್ಯಗಳಿಂದ ಸಿದ್ಧವಾದ, ಯಾವಾಗಲೂ 'ನಾನು' ಎಂಬ ಪ್ರತ್ಯಯದಿಂದ ಪ್ರಸಿದ್ಧವಾದ ಪೂರ್ಣಬ್ರಹ್ಮವನ್ನು ಜ್ಞಾನಿಯು ಸಮಾಧಿಯ ಮೂಲಕ ಹೃದಯಾಕಾಶದಲ್ಲಿ ಸಾಕ್ಷಾತ್ಕರಿಸುತ್ತಾನೆ.

**ಅಜರಮಮರಮಸ್ತಾಭಾಸ-ವಸ್ತುಸ್ವರೂಪಂ**
**ಸ್ತಿಮಿತ-ಸಲಿಲರಾಶಿ-ಪ್ರಖ್ಯಮಾಖ್ಯಾ-ವಿಹೀನಮ್ ।**
**ಶಮಿತ-ಗುಣ-ವಿಕಾರಂ ಶಾಶ್ವತಂ ಶಾಂತಮೇಕಂ**
**ಹೃದಿ ಕಲಯತಿ ವಿದ್ವಾನ್ ಬ್ರಹ್ಮ ಪೂರ್ಣಂ ಸಮಾಧೌ ॥ ೪೦೯ ॥**

**ವಿದ್ವಾನ್, ಅಜರಂ**=ಮುಪ್ಪಿಲ್ಲದ **ಅಮರಂ**=ಮರಣವಿಲ್ಲದ **ಅಸ್ತ-ಆಭಾಸ-ವಸ್ತು-ಸ್ವರೂಪಂ**=ಆಭಾಸಗಳು ಅಡಗಿಹೋಗಿರುವ ವಸ್ತುವಿನ ಸ್ವರೂಪವಾಗಿರುವ **ಸ್ತಿಮಿತ-ಸಲಿಲರಾಶಿ-ಪ್ರಖ್ಯಂ**=ಶಾಂತವಾದ ಸಮುದ್ರದಂತಿರುವ **ಆಖ್ಯಾವಿಹೀನಂ**=ನಾಮವಿಲ್ಲದ **ಶಮಿತ-ಗುಣ-ವಿಕಾರಂ**=ಶಾಂತವಾದ ಗುಣಗಳೂ ವಿಕಾರಗಳೂ

ಉಳ್ಳ **ಶಾಶ್ವತಂ**=ಶಾಶ್ವತವಾದ **ಶಾಂತಂ**=ಶಾಂತವಾದ **ಏಕಂ**=ಅದ್ವಿತೀಯವಾದ **ಪೂರ್ಣಂ ಬ್ರಹ್ಮ ಸಮಾಧೌ ಹೃದಿ ಕಲಯತಿ.**

**೪೦೯.** ಮುಪ್ಪಿಲ್ಲದ, ಮರಣವಿಲ್ಲದ, ತೋರ್ಕೆಗಳು ಅಡಗಿಹೋಗಿರುವ ವಸ್ತುವಿನ ಸ್ವರೂಪವಾಗಿರುವ, ಶಾಂತವಾದ ಸಮುದ್ರದಂತಿರುವ, ನಾಮ ರಹಿತವಾದ, ನಿರ್ಗುಣವಾದ, ನಿರ್ವಿಕಾರವಾದ, ಶಾಶ್ವತವಾದ, ಶಾಂತವಾದ, ಅದ್ವಿತೀಯವಾದ ಪೂರ್ಣಬ್ರಹ್ಮವನ್ನು ಜ್ಞಾನಿಯು ಸಮಾಧಿಯ ಮೂಲಕ ಹೃದಯಾಕಾಶದಲ್ಲಿ ಸಾಕ್ಷಾತ್ಕರಿಸುತ್ತಾನೆ.

**ಸಮಾಹಿತಾಂತಃಕರಣಃ ಸ್ವರೂಪೇ**
**ವಿಲೋಕಯಾತ್ಮಾನಮಖಂಡವೈಭವಮ್ ।**
**ವಿಚ್ಛಿಂಧಿ ಬಂಧಂ ಭವಗಂಧ-ಗಂಧಿತಂ**
**ಯತ್ನೇನ ಪುಂಸ್ತ್ವಂ ಸಫಲೀಕುರುಷ್ವ ॥ ೪೧೦ ॥**

**ಸ್ವರೂಪೇ**=ಸ್ವರೂಪದಲ್ಲಿ, ಪರಮಾತ್ಮನಲ್ಲಿ **ಸಮಾಹಿತ-ಅಂತಃಕರಣಃ**= ಸಮಾಹಿತವಾದ ಅಂತಃಕರಣವುಳ್ಳವನಾಗಿ **ಅಖಂಡ-ವೈಭವಂ**=ಅಖಂಡವೈಭವವುಳ್ಳ **ಆತ್ಮಾನಂ**=ಆತ್ಮನನ್ನು **ವಿಲೋಕಯ**=ಸಾಕ್ಷಾತ್ಕರಿಸು; **ಭವಗಂಧ-ಗಂಧಿತಂ**= ಸಂಸಾರವಾಸನೆಯಿಂದ ವಾಸಿತವಾದ **ಬಂಧಂ**=ಬಂಧವನ್ನು **ವಿಚ್ಛಿಂಧಿ**=ಕತ್ತರಿಸು; **ಯತ್ನೇನ**=ಪ್ರಯತ್ನದಿಂದ **ಪುಂಸ್ತ್ವಂ**=ಪುರುಷತ್ವವನ್ನು **ಸಫಲೀಕುರುಷ್ವ**= ಸಾರ್ಥಕಪಡಿಸಿಕೊ.

**೪೧೦.** ಸ್ವರೂಪದಲ್ಲಿ ಅಂತಃಕರಣವನ್ನು ನೆಲೆಗೊಳಿಸಿ, ಅಖಂಡವಾದ ವೈಭವವುಳ್ಳ ಆತ್ಮನನ್ನು ಸಾಕ್ಷಾತ್ಕರಿಸು; ಸಂಸಾರವಾಸನೆಯಿಂದ ವಾಸಿತ ವಾಗಿರುವ ಬಂಧವನ್ನು ಕತ್ತರಿಸು. ಪ್ರಯತ್ನದಿಂದ ಪುರುಷತ್ವವನ್ನು ಸಾರ್ಥಕ ಪಡಿಸಿಕೊ.

**ಸರ್ವೋಪಾಧಿ-ವಿನಿರ್ಮುಕ್ತಂ ಸಚ್ಚಿದಾನಂದಮದ್ವಯಮ್ ।**
**ಭಾವಯಾತ್ಮಾನಮಾತ್ಮಸ್ಥಂ ನ ಭೂಯಃ ಕಲ್ಪಸೇಽಧ್ವನೇ ॥ ೪೧೧ ॥**

**ಸರ್ವ-ಉಪಾಧಿ-ವಿನಿರ್ಮುಕ್ತಂ**=ಸಮಸ್ತ ಉಪಾಧಿಗಳಿಂದಲೂ ಮುಕ್ತ ನಾದ **ಸಚ್ಚಿದಾನಂದಂ**=ಸಚ್ಚಿದಾನಂದಸ್ವರೂಪನಾದ **ಅದ್ವಯಂ**=ಅದ್ವಿತೀಯನಾದ **ಆತ್ಮಸ್ಥಂ**=ನಿನ್ನಲ್ಲಿರುವ **ಆತ್ಮಾನಂ**=ಆತ್ಮನನ್ನು **ಭಾವಯ**=ಭಾವಿಸು; **ಭೂಯಃ**= ಪುನಃ **ಅಧ್ವನೇ**=ಸಂಸಾರಮಾರ್ಗಕ್ಕೆ **ನ ಕಲ್ಪಸೇ**=ಯೋಗ್ಯನಾಗುವುದಿಲ್ಲ.

**೪೧೧.** ಸಮಸ್ತ ಉಪಾಧಿಗಳಿಂದಲೂ ಮುಕ್ತನಾದ, ಸಚ್ಚಿದಾನಂದ-ಸ್ವರೂಪನೂ ಅದ್ವಿತೀಯನೂ ಆಗಿರುವ, ನಿನ್ನಲ್ಲಿರುವ ಆತ್ಮನನ್ನು ಭಾವಿಸು,

(ಹಾಗಾದರೆ) ಪುನಃ ಸಂಸಾರಮಾರ್ಗದಲ್ಲಿ ಪ್ರಯಾಣಮಾಡಲು ನೀನು ಬರುವುದಿಲ್ಲ.

[ 'ಅವನು ಹಿಂತಿರುಗುವುದಿಲ್ಲ' **ನ ಚ ಪುನರಾವರ್ತತೇ** (ಛಾಂದೋಗ್ಯ ಉ. ೮. ೧೫. ೧); 'ಆದರೆ, ಎಲೈ ಅರ್ಜುನ, ನನ್ನನ್ನು ಹೊಂದಿದರೆ ಪುನರ್ಜನ್ಮವಿಲ್ಲ' **ಮಾಮುಪೇತ್ಯ ತು ಕೌಂತೇಯ ಪುನರ್ಜನ್ಮ ನ ವಿದ್ಯತೇ ।** (ಗೀತಾ ೮. ೧೬) ಎಂದು ಶ್ರುತಿಸ್ಮೃತಿಗಳು ಹೇಳುತ್ತವೆ.]

**ಛಾಯೇವ ಪುಂಸಃ ಪರಿದೃಶ್ಯಮಾನ-**
**ಮಾಭಾಸರೂಪೇಣ ಫಲಾನುಭೂತ್ಯಾ ।**
**ಶರೀರಮಾರಾಚ್ಛವವನ್ನಿರಸ್ತಂ**
**ಪುನರ್ನ ಸಂಧತ್ತ ಇದಂ ಮಹಾತ್ಮಾ ॥ ೪೧೨ ॥**

**ಫಲಾನುಭೂತ್ಯಾ** = ಪ್ರಾರಬ್ಧಕರ್ಮದ . ಫಲವನ್ನು ಅನುಭವಿಸುತ್ತಿರುವುದರಿಂದ **ಪುಂಸಃ** = ಮನುಷ್ಯನ **ಛಾಯಾ ಇವ** = ನೆರಳಿನಂತೆ **ಆಭಾಸರೂಪೇಣ** = ಆಭಾಸರೂಪದಿಂದ **ಪರಿದೃಶ್ಯಮಾನಂ** = ಕಂಡುಬರುತ್ತಿರುವ **ಶವವತ್** = ಶವದಂತೆ **ಆರಾತ್ ನಿರಸ್ತಂ** = ದೂರದಿಂದಲೇ ತ್ಯಜಿಸಲ್ಪಟ್ಟ **ಇದಂ ಶರೀರಂ** = ಈ ಶರೀರವನ್ನು **ಮಹಾತ್ಮಾ** = ಮಹಾತ್ಮನಾದವನು **ಪುನಃ** = ಮತ್ತೆ **ನ ಸಂಧತ್ತೇ** = ಸ್ವೀಕರಿಸುವುದಿಲ್ಲ.

**೪೧೨.** ಪ್ರಾರಬ್ಧಕರ್ಮಫಲವನ್ನು ಅನುಭವಿಸುತ್ತಿರುವುದರಿಂದ ಮನುಷ್ಯನ ನೆರಳಿನಂತೆ ಆಭಾಸರೂಪದಿಂದ ಕಂಡುಬರುತ್ತಿರುವ ಶರೀರವನ್ನು ಶವದಂತೆ ದೂರ ತ್ಯಜಿಸಿದ ಮೇಲೆ, ಮಹಾತ್ಮನಾದವನು ಪುನಃ ಅದನ್ನು ಸ್ವೀಕರಿಸುವುದಿಲ್ಲ.

**ಸತತ-ವಿಮಲಬೋಧಾನಂದ-ರೂಪಂ ಸಮೇತ್ಯ**
**ತ್ಯಜ ಜಡ-ಮಲರೂಪೋಪಾಧಿಮೇತಂ ಸುದೂರೇ**
**ಅಥ ಪುನರಪಿ ನೈಷ ಸ್ಮರ್ಯತಾಂ ವಾಂತ-ವಸ್ತು**
**ಸ್ಮರಣ-ವಿಷಯ-ಭೂತಂ ಕಲ್ಪತೇ ಕುತ್ಸನಾಯ ॥ ೪೧೩ ॥**

**ಸತತ-ವಿಮಲ-ಬೋಧ-ಆನಂದ-ರೂಪಂ** = ನಿತ್ಯ-ನಿರ್ಮಲ-ಜ್ಞಾನಾನಂದ-ಸ್ವರೂಪವಾದ [ಬ್ರಹ್ಮವನ್ನು] **ಸಮೇತ್ಯ** = ಹೊಂದಿ **ಏತಂ** = ಈ **ಜಡ-ಮಲ-ರೂಪ-ಉಪಾಧಿಂ** = ಜಡ-ಮಲಿನ-ರೂಪವಾದ ದೇಹವನ್ನು **ಸುದೂರೇ** = ಬಹುದೂರದಲ್ಲಿಯೇ **ತ್ಯಜ** = ತೊರೆ; **ಅಥ** = ಅನಂತರ **ಪುನಃ ಅಪಿ** = ಮತ್ತೆ **ಏಷಃ** = ಇದು **ನ ಸ್ಮರ್ಯತಾಂ** = ಸ್ಮರಿಸಲ್ಪಡದಿರಲಿ; [ಏಕೆಂದರೆ] **ವಾಂತ-ವಸ್ತು** = ವಾಂತಿಮಾಡಿದ ವಸ್ತುವು **ಸ್ಮರಣ-ವಿಷಯ-ಭೂತಂ** = ಸ್ಮೃತಿಗೆ ವಿಷಯವಾದಾಗ **ಕುತ್ಸನಾಯ ಕಲ್ಪತೇ** = ಅಸಹ್ಯವನ್ನುಂಟುಮಾಡುತ್ತದೆ.

**೪೧೩.** ನಿತ್ಯ-ನಿರ್ಮಲ-ಜ್ಞಾನಾನಂದ-ರೂಪವಾದ ಬ್ರಹ್ಮವನ್ನು ಹೊಂದಿ ಜಡ-ಮಲಿನ-ರೂಪವಾದ ಈ ಸ್ಥೂಲದೇಹವನ್ನು ಬಹು ದೂರದಲ್ಲೇ ತೊರೆ. ಅನಂತರ, ಪುನಃ ಇದನ್ನು ಸ್ಮರಿಸಬೇಡ; ಏಕೆಂದರೆ ವಾಂತಿಮಾಡಿದ ವಸ್ತುವನ್ನು ಸ್ಮರಿಸಿದಾಗ ಅಸಹ್ಯವನ್ನುಂಟುಮಾಡುತ್ತದೆ.

**ಸಮೂಲಮೇತತ್ ಪರಿದಹ್ಯ ವಹ್ನೌ**
**ಸದಾತ್ಮನಿ ಬ್ರಹ್ಮಣಿ ನಿರ್ವಿಕಲ್ಪೇ ।**
**ತತಃ ಸ್ವಯಂ ನಿತ್ಯ-ವಿಶುದ್ಧ-ಬೋಧಾ-**
**ನಂದಾತ್ಮನಾ ತಿಷ್ಠತಿ ವಿದ್ವರಿಷ್ಠಃ ॥ ೪೧೪ ॥**

**ವಿದ್ವರಿಷ್ಠಃ** = ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠನಾದವನು **ಏತತ್** = ಈ ಶರೀರವನ್ನು **ಸಮೂಲಂ** = ಕಾರಣಸಹಿತವಾಗಿ **ಸದಾತ್ಮನಿ** = ಸತ್‌ಸ್ವರೂಪವಾದ **ನಿರ್ವಿಕಲ್ಪೇ ಬ್ರಹ್ಮಣಿ** = ನಿರ್ವಿಕಲ್ಪಬ್ರಹ್ಮವೆಂಬ **ವಹ್ನೌ** = ಅಗ್ನಿಯಲ್ಲಿ **ಪರಿದಹ್ಯ** = ದಹಿಸಿ **ತತಃ** = ಅನಂತರ **ಸ್ವಯಂ** = ತಾನು **ನಿತ್ಯ-ವಿಶುದ್ಧ-ಬೋಧಾನಂದ-ಆತ್ಮನಾ** = ನಿತ್ಯಶುದ್ಧ ಜ್ಞಾನಾನಂದ-ಸ್ವರೂಪದಿಂದ **ತಿಷ್ಠತಿ** = ಇರುತ್ತಾನೆ.

**೪೧೪.** ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠನಾದವನು ಈ ಶರೀರವನ್ನು ಕಾರಣ ಸಹಿತವಾಗಿ[1] ಸತ್ಸ್ವರೂಪವಾದ ನಿರ್ವಿಕಲ್ಪ-ಬ್ರಹ್ಮವೆಂಬ ಅಗ್ನಿಯಲ್ಲಿ ದಹಿಸಿ, ಅನಂತರ ತಾನು ನಿತ್ಯಶುದ್ಧ-ಜ್ಞಾನಾನಂದ-ಸ್ವರೂಪದಿಂದ ಇರುತ್ತಾನೆ.

[[1] ಅಜ್ಞಾನದೊಂದಿಗೆ.]

**ಪ್ರಾರಬ್ಧ-ಸೂತ್ರ-ಗ್ರಥಿತಂ ಶರೀರಂ**
**ಪ್ರಯಾತು ವಾ ತಿಷ್ಠತು ಗೋರಿವ ಸ್ರಕ್ ।**
**ನ ತತ್ ಪುನಃ ಪಶ್ಯತಿ ತತ್ತ್ವವೇತ್ತಾ-**
**ಽಽನಂದಾತ್ಮನಿ ಬ್ರಹ್ಮಣಿ ಲೀನವೃತ್ತಿಃ ॥ ೪೧೫ ॥**

**ಆನಂದಾತ್ಮನಿ** = ಆನಂದಸ್ವರೂಪವಾದ **ಬ್ರಹ್ಮಣಿ** = ಬ್ರಹ್ಮದಲ್ಲಿ **ಲೀನವೃತ್ತಿಃ** = ಲಯವಾದ ವೃತ್ತಿಯುಳ್ಳ **ತತ್ತ್ವವೇತ್ತಾ** = ತತ್ತ್ವಜ್ಞಾನಿಯು—**ಗೋಃ** = ಗೋವಿನ **ಸ್ರಕ್ ಇವ** = ಮಾಲೆಯು ಹೇಗೋ ಹಾಗೆ—**ಪ್ರಾರಬ್ಧ-ಸೂತ್ರ-ಗ್ರಥಿತಂ** = ಪ್ರಾರಬ್ಧವೆಂಬ ದಾರದಿಂದ ಪೋಣಿಸಲ್ಪಟ್ಟ **ಶರೀರಂ** = ಶರೀರವು **ಪ್ರಯಾತು** = ಹೋಗಲಿ **ವಾ** = ಅಥವಾ **ತಿಷ್ಠತು** = ಇರಲಿ, **ತತ್** = ಅದನ್ನು **ಪುನಃ** = ಮತ್ತೆ **ನ ಪಶ್ಯತಿ** = ನೋಡುವುದಿಲ್ಲ.

**೪೧೫.** ಗೋವಿನ ಕೊರಳಲ್ಲಿರುವ ಮಾಲೆಯಂತೆ[1] ಪ್ರಾರಬ್ಧವೆಂಬ ದಾರದಿಂದ ಪೋಣಿಸಲ್ಪಟ್ಟ ಈ ಶರೀರವು ಹೋಗಲಿ ಅಥವಾ ಇರಲಿ, ಆನಂದ-

ಸ್ವರೂಪವಾದ ಬ್ರಹ್ಮದಲ್ಲಿ ವೃತ್ತಿಯನ್ನು ಲಯಮಾಡಿಕೊಂಡಿರುವ ತತ್ತ್ವಜ್ಞಾನಿಯು ಮತ್ತೆ ಅದನ್ನು ನೋಡುವುದಿಲ್ಲ.

[೧ ಗೋವಿನ ಕೊರಳಿಗೆ ಯಾರಾದರೂ ಮಾಲೆಯನ್ನು ಹಾಕಿದರೆ ಅದು ತೀರ ಉದಾಸೀನವಾಗಿರುವಂತೆ ಬ್ರಹ್ಮಜ್ಞಾನಿಯು ತನ್ನ ಶರೀರದ ವಿಷಯದಲ್ಲಿ ಉದಾಸೀನನಾಗಿರುತ್ತಾನೆ.]

**ಅಖಂಡಾನಂದಮಾತ್ಮಾನಂ ವಿಜ್ಞಾಯ ಸ್ವಸ್ವರೂಪತಃ ।**
**ಕಿಮಿಚ್ಛನ್ ಕಸ್ಯ ವಾ ಹೇತೋರ್ದೇಹಂ ಪುಷ್ಣಾತಿ ತತ್ತ್ವವಿತ್**
**॥ ೪೧೬ ॥**

**ತತ್ತ್ವವಿತ್** = ತತ್ತ್ವಜ್ಞಾನಿಯು **ಅಖಂಡಾನಂದಂ** = ಅಖಂಡಾನಂದ ಸ್ವರೂಪನಾದ **ಆತ್ಮಾನಂ** = ಆತ್ಮನನ್ನು **ಸ್ವ-ಸ್ವರೂಪತಃ** = ತನ್ನ ಸ್ವರೂಪವೆಂದು **ವಿಜ್ಞಾಯ** = ಅರಿತುಕೊಂಡು **ಕಿಮ್ ಇಚ್ಛನ್** = ಯಾವುದನ್ನು ಬಯಸುವವನಾಗಿ **ಕಸ್ಯ ಹೇತೋಃ ವಾ** = ಅಥವಾ ಯಾರ ಪ್ರಯೋಜನಕ್ಕಾಗಿ **ದೇಹಂ** = ಶರೀರವನ್ನು **ಪುಷ್ಣಾತಿ** = ಪೋಷಿಸಿಯಾನು?

**೪೧೬.** ತತ್ತ್ವಜ್ಞಾನಿಯು ಅಖಂಡಾನಂದ-ಸ್ವರೂಪನಾದ ಆತ್ಮನನ್ನು ತನ್ನ ಸ್ವರೂಪವೆಂದೇ ಅರಿತುಕೊಂಡಮೇಲೆ ಯಾವುದನ್ನು ಬಯಸುವವನಾಗಿ, ಯಾರ ಪ್ರಯೋಜನಕ್ಕಾಗಿ ಈ ದೇಹವನ್ನು ಪೋಷಿಸಿಯಾನು? ೧

[೧ 'ಯಾವ ಪ್ರಯೋಜನಕ್ಕಾಗಿ ಶರೀರದ ರೋಗವನ್ನು ಅನುಸರಿಸಿ ದುಃಖಪಡುವನು?' **ಕಿಮಿಚ್ಛನ್ ಕಸ್ಯ ಕಾಮಾಯ ಶರೀರಮನುಸಂಜ್ವರೇತ್** (ಬೃಹದಾರಣ್ಯಕ ಉ. ೪. ೪. ೧೨).]

**ಸಂಸಿದ್ಧಸ್ಯ ಫಲಂ ತ್ವೇತಜ್ಜೀವನ್ಮುಕ್ತಸ್ಯ ಯೋಗಿನಃ ।**
**ಬಹಿರಂತಃ ಸದಾನಂದ-ರಸಾಸ್ವಾದನಮಾತ್ಮನಿ ॥ ೪೧೭ ॥**

**ಸಂಸಿದ್ಧಸ್ಯ** = ಆತ್ಮಜ್ಞಾನನಿಷ್ಠನಾದ **ಜೀವನ್ಮುಕ್ತಸ್ಯ** = ಜೀವನ್ಮುಕ್ತನಾದ **ಯೋಗಿನಃ** = ಯೋಗಿಗೆ **ಏತತ್ ಫಲಂ** = ಇದು ಫಲವು: **ಬಹಿಃ** = ಹೊರಗೂ **ಅಂತಃ** = ಒಳಗೂ **ಸದಾ** = ಯಾವಾಗಲೂ **ಆತ್ಮನಿ** = ಮನಸ್ಸಿನಲ್ಲಿ **ಆನಂದರಸ-ಆಸ್ವಾದನಂ** = ಆನಂದರಸದ ಆಸ್ವಾದನ.

**೪೧೭.** ಆತ್ಮಜ್ಞಾನನಿಷ್ಠನಾದ ಜೀವನ್ಮುಕ್ತನಾದ ಯೋಗಿಗೆ ಇದು ಫಲವು: ಹೊರಗೂ ಒಳಗೂ ಯಾವಾಗಲೂ ಮನಸ್ಸಿನಲ್ಲಿ ಆನಂದರಸವನ್ನು ಆಸ್ವಾದಿಸುತ್ತಾನೆ.

**ವೈರಾಗ್ಯಸ್ಯ ಫಲಂ ಬೋಧೋ ಬೋಧಸ್ಯೋಪರತಿಃ ಫಲಮ್ ।**
**ಸ್ವಾನಂದಾನುಭವಾಚ್ಛಾಂತಿರೇಷೈವೋಪರತೇಃ ಫಲಮ್ ॥ ೪೧೮ ॥**

**ವೈರಾಗ್ಯಸ್ಯ**=ವೈರಾಗ್ಯಕ್ಕೆ **ಬೋಧಃ**=ಜ್ಞಾನವೇ **ಫಲಂ**-ಫಲವು, **ಬೋಧಸ್ಯ**=ಜ್ಞಾನಕ್ಕೆ **ಉಪರತಿಃ** = ಉಪರತಿಯು **ಫಲಮ್**, **ಸ್ವಾನಂದಾನುಭವಾತ್** = ಆತ್ಮಾನಂದದ ಅನುಭವದಿಂದ **ಶಾಂತಿಃ** - ಶಾಂತಿಯು, **ಏಷಾ ಏವ** = ಈ ಶಾಂತಿಯೇ **ಉಪರತೇಃ** = ಉಪರತಿಗೆ **ಫಲಂ** = ಫಲವು.

**೪೧೮.** ವೈರಾಗ್ಯಕ್ಕೆ ಜ್ಞಾನವೇ ಫಲವು, ಜ್ಞಾನಕ್ಕೆ ಉಪರತಿಯೇ[1] ಫಲವು. ಆತ್ಮಾನಂದದ ಅನುಭವದಿಂದ ಶಾಂತಿಯು (ಉಂಟಾಗುತ್ತದೆ). ಈ ಶಾಂತಿಯೇ ಉಪರತಿಗೆ ಫಲವು.

[[1] ಬಾಹ್ಯವಿಷಯುಗಳಿಂದ ಚಿತ್ತವೃತ್ತಿಗಳನ್ನು ಹಿಂತಿರುಗಿಸಿಕೊಳ್ಳುವಿಕೆ.]

**ಯದ್ಯುತ್ತರೋತ್ತರಾಭಾವಃ ಪೂರ್ವಪೂರ್ವಂ ತು ನಿಷ್ಫಲಮ್ ।**
**ನಿವೃತ್ತಿಃ ಪರಮಾ ತೃಪ್ತಿರಾನಂದೋಽನುಪಮಃ ಸ್ವತಃ ॥ ೪೧೯ ॥**

**ಉತ್ತರೋತ್ತರ-ಅಭಾವಃ** = ಮುಂದುಮುಂದಿನದರ ಅಭಾವವು **ಯದಿ** [**ಸ್ಯಾತ್**] - ಉಂಟಾದರೆ **ಪೂರ್ವಪೂರ್ವಂ ತು** = ಹಿಂದುಹಿಂದಿನದು **ನಿಷ್ಫಲಂ** = ನಿಷ್ಫಲವು; **ನಿವೃತ್ತಿಃ** - ನಿವೃತ್ತಿಯು **ಪರಮಾ ತೃಪ್ತಿಃ**=ಪರಮತೃಪ್ತಿ **ಅನುಪಮಃ**=ಅಸದೃಶವಾದ **ಆನಂದಃ** - ಆನಂದವು **ಸ್ವತಃ** = ಸ್ವಾಭಾವಿಕವಾಗಿಯೇ [ಉಂಟಾಗುತ್ತವೆ].

**೪೧೯.** ಇವುಗಳಲ್ಲಿ ಮುಂದುಮುಂದಿನದು ಸಿದ್ಧಿಸದೆ ಹೋದರೆ ಹಿಂದು ಹಿಂದಿನದು ನಿಷ್ಫಲವಾಗುವುದು.[1] ಸಮಸ್ತಕಾರ್ಯಗಳಿಂದ ಹಿಂತಿರುಗುವುದು, ಪರಮತೃಪ್ತಿ, ಅಸದೃಶವಾದ ಆನಂದ— ಇವು ಸ್ವಾಭಾವಿಕವಾಗಿಯೇ ಉಂಟಾಗುತ್ತವೆ.

[[1] ಜ್ಞಾನವು ಸಿದ್ಧಿಸದಿದ್ದರೆ ವೈರಾಗ್ಯವಿದ್ದರೂ ನಿಷ್ಫಲವಾಗುವುದು. ಉಪರತಿಯು ಸಿದ್ಧಿಸದಿದ್ದರೆ ಜ್ಞಾನವಿದ್ದರೂ ನಿಷ್ಫಲವಾಗುವುದು. ಶಾಂತಿಯು ಸಿದ್ಧಿಸದಿದ್ದರೆ ಉಪರತಿಯಿದ್ದರೂ ನಿಷ್ಫಲವಾಗುವುದು.]

**ದೃಷ್ಟದುಃಖೇಷ್ವನುದ್ವೇಗೋ ವಿದ್ಯಾಯಾಃ ಪ್ರಸ್ತುತಂ ಫಲಮ್ ।**
**ಯತ್ಕೃತಂ ಭ್ರಾಂತಿವೇಲಾಯಾಂ ನಾನಾ ಕರ್ಮ ಜುಗುಪ್ಸಿತಮ್ ।**
**ಪಶ್ಚಾನ್ನರೋ ವಿವೇಕೇನ ತತ್ ಕಥಂ ಕರ್ತುಮರ್ಹತಿ ॥ ೪೨೦ ॥**

**ದೃಷ್ಟ-ದುಃಖೇಷು**=ಪ್ರಾಪ್ತವಾದ ದುಃಖಗಳಲ್ಲಿ **ಅನುದ್ವೇಗಃ**=ಉದ್ವೇಗವಿಲ್ಲದಿರುವುದು **ವಿದ್ಯಾಯಾಃ**=ಜ್ಞಾನದ **ಪ್ರಸ್ತುತಂ**=ಮುಖ್ಯವಾದ **ಫಲಂ**=ಫಲವು; **ಭ್ರಾಂತಿವೇಲಾಯಾಂ**=ಭ್ರಾಂತಿಯ ಕಾಲದಲ್ಲಿ **ಜುಗುಪ್ಸಿತಂ**=ಅಸಹ್ಯಕರವಾದ **ಯತ್**=ಯಾವ **ನಾನಾ ಕರ್ಮ**=ಅನೇಕವಿಧವಾದ ಕರ್ಮವು **ಕೃತಂ**=ಮಾಡಲ್ಪಟ್ಟಿತೊ **ತತ್**=ಅದನ್ನು **ಪಶ್ಚಾತ್**=ಅನಂತರ **ವಿವೇಕೇನ**=ವಿವೇಕದಿಂದ **ನರಃ**=ಮನುಷ್ಯನು **ಕರ್ತುಂ**=ಮಾಡಲು **ಕಥಮ್ ಅರ್ಹತಿ**=ಹೇಗೆ ಯೋಗ್ಯನಾಗುತ್ತಾನೆ?

**೪೨೦.** ದುಃಖಗಳು ಪ್ರಾಪ್ತವಾದಾಗ ಉದ್ವೇಗಪಡದಿರುವುದೇ ಜ್ಞಾನದ ಮುಖ್ಯವಾದ ಫಲವು. ಮನುಷ್ಯನು ಭ್ರಾಂತಿಯ ಕಾಲದಲ್ಲಿ ಯಾವ ಅಸಹ್ಯಕರವಾದ ನಾನಾ ಕರ್ಮವನ್ನು ಮಾಡಿದ್ದನೊ ಅದನ್ನು ಅನಂತರ ವಿವೇಕವಿರುವಾಗಲೂ ಹೇಗೆ ತಾನೇ ಮಾಡಿಯಾನು?

**ವಿದ್ಯಾಫಲಂ ಸ್ಯಾದಸತೋ ನಿವೃತ್ತಿಃ**
**ಪ್ರವೃತ್ತಿರಜ್ಞಾನಫಲಂ ತದೀಕ್ಷಿತಮ್ ।**
**ತಜ್ಞಾಜ್ಞಯೋರ್ಯನ್ಮೃಗತೃಷ್ಣಿಕಾದೌ**
**ನೋಚೇದ್ವಿದಾಂ ದೃಷ್ಟಫಲಂ ಕಿಮಸ್ಮಾತ್ ॥ ೪೨೧ ॥**

**ಅಸತಃ**=ಅಸದ್ವಸ್ತುವಿನಿಂದ **ನಿವೃತ್ತಿಃ**=ಹಿಂತಿರುಗುವುದೇ **ವಿದ್ಯಾಫಲಂ ಸ್ಯಾತ್**=ಜ್ಞಾನದ ಫಲವಾಗುತ್ತದೆ; **ಪ್ರವೃತ್ತಿಃ**=[ಅಸದ್ವಸ್ತುವಿನಲ್ಲಿ] ಪ್ರವೃತ್ತನಾಗುವುದೇ **ಅಜ್ಞಾನಫಲಂ**=ಅಜ್ಞಾನದ ಫಲವು; **ಮೃಗತೃಷ್ಣಿಕಾದೌ**=ಬಿಸಿಲ್ಗುದುರೆ ಮೊದಲಾದುವುಗಳಲ್ಲಿ **ತಜ್ಞ-ಅಜ್ಞಯೋಃ**=ಅದನ್ನು ಅರಿತವನು ಮತ್ತು ಅರಿಯದವನು—ಇವರ ವಿಷಯದಲ್ಲಿ **ತತ್**=ಅದು **ಈಕ್ಷಿತಂ**=ಕಂಡುಬರುತ್ತದೆ; **ನ ಉ ಚೇತ್**=ಹಾಗಿಲ್ಲದೆ ಹೋದರೆ **ವಿದಾಂ**=ಜ್ಞಾನಿಗಳಿಗೆ **ಅಸ್ಮಾತ್**=ಇದಕ್ಕಿಂತಲೂ **ದೃಷ್ಟಫಲಂ ಕಿಮ್**=ದೃಷ್ಟಫಲವು ಯಾವುದಿದ್ದೀತು?

**೪೨೧.** ಅಸದ್ವಸ್ತುವಿನಿಂದ ಹಿಂತಿರುಗುವುದೇ ಜ್ಞಾನದ ಫಲವು. ಅಸದ್ವಸ್ತುವಿನ ಕಡೆಗೆ ನುಗ್ಗುವುದೇ ಅಜ್ಞಾನದ ಫಲವು. ಬಿಸಿಲ್ಗುದುರೆ ಮೊದಲಾದುವುಗಳನ್ನು ಅರಿತವನಲ್ಲಿ ಅಥವಾ ಅರಿಯದವನಲ್ಲಿ[೧] ಇದು ಕಂಡುಬರುತ್ತದೆ. ಹಾಗಿಲ್ಲದಿದ್ದರೆ ಜ್ಞಾನಿಗಳಿಗೆ ಇದಕ್ಕಿಂತಲೂ ದೃಷ್ಟಫಲವು ಮತ್ತಾವುದಿರುವುದು?

[[೧] ಬಿಸಿಲ್ಗುದುರೆಯನ್ನು ಅರಿತವನಿಗೆ ಯಾವ ಭ್ರಮೆಯೂ ಉಂಟಾಗುವುದಿಲ್ಲ; ಅದನ್ನು ಅರಿಯದವನು ಮಾತ್ರ ನೀರಿದೆಯೆಂದು ಭಾವಿಸಿಕೊಂಡು ನುಗ್ಗುತ್ತಾನೆ. ಹಾಗೆಯೇ ಜಗತ್ತು ಜ್ಞಾನಿಗೆ ಕಾಣಿಸಿಕೊಂಡರೂ ಅವನು ಅದರ ವಿಲಾಸಗಳಿಂದ ಮೋಹಿತನಾಗುವುದಿಲ್ಲ. ಆದರೆ ಲೌಕಿಕನಿಗೆ ಹಾಗಾಗುವುದಿಲ್ಲ.]

**ಅಜ್ಞಾನ-ಹೃದಯಗ್ರಂಥೇರ್ವಿನಾಶೋ ಯದ್ಯಶೇಷತಃ**
**ಅನಿಚ್ಛೋರ್ವಿಷಯಃ ಕಿಂ ನು ಪ್ರವೃತ್ತೇಃ ಕಾರಣಂ ಸ್ವತಃ**
**॥ ೪೨೨ ॥**

**ಅಜ್ಞಾನ-ಹೃದಯ-ಗ್ರಂಥೇಃ** = ಅಜ್ಞಾನವೆಂಬ ಹೃದಯದ ಗ್ರಂಥಿಯ **ವಿನಾಶಃ** = ವಿನಾಶವು **ಅಶೇಷತಃ ಯದಿ** = ಸಂಪೂರ್ಣವಾಗಿ ಉಂಟಾದರೆ [ಆಗ] **ಅನಿಚ್ಛೋಃ** = ಇಚ್ಛಿಸದವನಿಗೆ **ವಿಷಯಃ** = ವಿಷಯವು **ಸ್ವತಃ** = ತಾನೇ **ಪ್ರವೃತ್ತೇಃ** = ಪ್ರವೃತ್ತಿಗೆ **ಕಾರಣಂ ಕಿಂ ನು** = ಕಾರಣವಾಗುತ್ತದೆಯೇ?

**೪೨೨.** ಅಜ್ಞಾನವೆಂಬ ಹೃದಯಗ್ರಂಥಿಯು ಸಂಪೂರ್ಣವಾಗಿ ನಾಶವಾಗಿದ್ದರೆ ಯಾವುದನ್ನೂ ಇಚ್ಛಿಸದವನಿಗೆ ವಿಷಯವು ತಾನಾಗಿಯೇ ಪ್ರವೃತ್ತಿಗೆ ಕಾರಣವಾಗುತ್ತದೆಯೇ?

**ವಾಸನಾಽನುದಯೋ ಭೋಗ್ಯೇ ವೈರಾಗ್ಯಸ್ಯ ತದಾವಧಿಃ ।**
**ಅಹಂಭಾವೋದಯಾಭಾವೋ ಬೋಧಸ್ಯ ಪರಮಾವಧಿಃ ।**
**ಲೀನವೃತ್ತೇರನುತ್ಪತ್ತಿರ್ಮರ್ಯಾದೋಪರತೇಸ್ತು ಸಾ ॥ ೪೨೩ ॥**

[**ಯದಾ** = ಯಾವಾಗ] **ಭೋಗ್ಯೇ** = ವಿಷಯಭೋಗದಲ್ಲಿ **ವಾಸನಾ-ಅನುದಯಃ** = ವಾಸನೆಯು ಉಂಟಾಗುವುದಿಲ್ಲವೊ **ತದಾ** = ಆಗ **ವೈರಾಗ್ಯಸ್ಯ** = ವೈರಾಗ್ಯದ **ಅವಧಿಃ** = ಎಲ್ಲೆಯು; **ಅಹಂಭಾವ-ಉದಯ-ಅಭಾವಃ** = ಅಹಂಕಾರೋದಯದ ಶೂನ್ಯತೆಯೇ **ಬೋಧಸ್ಯ** = ಜ್ಞಾನದ **ಪರಮಾವಧಿಃ** = ಕೊನೆಯ ಎಲ್ಲೆಯು; **ಲೀನ-ವೃತ್ತೇಃ** = ಲಯವಾದ ಅಂತಃಕರಣವೃತ್ತಿಯ **ಸಾ ಅನುತ್ಪತ್ತಿಃ** = ಆ ಅನುತ್ಪತ್ತಿಯೇ **ಉಪರತೇಃ** = ಉಪರತಿಯ **ಮರ್ಯಾದಾ** = ಎಲ್ಲೆಯು.

**೪೨೩.** ಯಾವಾಗ ವಿಷಯಭೋಗದಲ್ಲಿ ವಾಸನೆಯು ಉಂಟಾಗುವುದಿಲ್ಲವೊ ಆಗ ವೈರಾಗ್ಯದ ಎಲ್ಲೆಯನ್ನು ಸೇರಿದಂತಾಗುವುದು; ಅಹಂಭಾವವು ಉಂಟಾಗದಿರುವುದೇ ಜ್ಞಾನದ ಕೊನೆಯ ಎಲ್ಲೆ; ಮತ್ತು ಲಯವಾದ ಅಂತಃಕರಣವೃತ್ತಿಯು ಪುನಃ ಉತ್ಪನ್ನವಾಗದಿರುವುದೇ ಉಪರತಿಯ ಎಲ್ಲೆಯು.

['ಬ್ರಹ್ಮಲೋಕವನ್ನು ತೃಣವೆಂದು ಭಾವಿಸುವುದು ವೈರಾಗ್ಯದ ಎಲ್ಲೆಯು; ದೇಹಾತ್ಮದ ಐಕ್ಯದಂತೆ ಜೀವ-ಪರಮಾತ್ಮರ ಐಕ್ಯವಾದಾಗ ಜ್ಞಾನವು ಸಮಾಪ್ತಿಯನ್ನು ಹೊಂದುತ್ತದೆ; ಸುಷುಪ್ತಿಯಲ್ಲಿರುವ ಹಾಗೆ ದ್ವೈತಪ್ರಪಂಚವು ಲಯವಾಗುವುದು ಉಪರತಿಯ ಎಲ್ಲೆಯು' **ಬ್ರಹ್ಮಲೋಕ-ತೃಣೀಕಾರೋ ವೈರಾಗ್ಯಸ್ಯಾವಧಿರ್ಮತಃ। ದೇಹಾತ್ಮವತ್ ಪರಾತ್ಮತ್ವ-ದಾರ್ಢ್ಯೇ ಬೋಧಃ ಸಮಾಪ್ಯತೇ ॥ ಸುಪ್ತಿವದ್ ವಿಸ್ಮೃತಿಃ ಸೀಮಾ ಭವೇದುಪರಮಸ್ಯ ಹಿ।** (ಪಂಚದಶಿಯ ಚಿತ್ರದೀಪಪ್ರಕರಣ–೨೮೫–೨೮೬). ]

**ಬ್ರಹ್ಮಾಕಾರತಯಾ ಸದಾ ಸ್ಥಿತತಯಾ ನಿರ್ಮುಕ್ತ-ಬಾಹ್ಯಾರ್ಥಧೀ-**
**ರನ್ಯಾವೇದಿತ-ಭೋಗ್ಯಭೋಗ-ಕಲನೋ ನಿದ್ರಾಲುವದ್ಬಾಲವತ್ ।**
**ಸ್ವಪ್ನಾಲೋಕಿತ-ಲೋಕವಜ್ಜಗದಿದಂ ಪಶ್ಯನ್ ಕ್ವಚಿಲ್ಲಬ್ಧಧೀ-**
**ರಾಸ್ತೇ ಕಶ್ಚಿದನಂತ-ಪುಣ್ಯಫಲಭುಗ್ ಧನ್ಯಃ ಸ ಮಾನ್ಯೋ ಭುವಿ**
**॥ ೪೨೪ ॥**

**ಬ್ರಹ್ಮಾಕಾರತಯಾ** = ಬ್ರಹ್ಮರೂಪದಿಂದಲೇ **ಸದಾ** = ಯಾವಾಗಲೂ **ಸ್ಥಿತ-ತಯಾ** = ಇರುವುದರಿಂದ **ನಿರ್ಮುಕ್ತ-ಬಾಹ್ಯ-ಅರ್ಥ-ಧೀಃ** = ಬಾಹ್ಯವಿಷಯಗಳ ಜ್ಞಾನವೇ ಇಲ್ಲದವನಾಗಿ, **ನಿದ್ರಾಲುವತ್** = ನಿದ್ರೆಯುಳ್ಳವನಂತೆ **ಬಾಲವತ್** = ಮಗುವಿನಂತೆ **ಅನ್ಯ-ಆವೇದಿತ-ಭೋಗ್ಯ-ಭೋಗ-ಕಲನಃ** = ಇತರರಿಂದ ತಿಳಿಸಲ್ಪಟ್ಟ ಭೋಗ್ಯವಸ್ತುಗಳ ಅನುಭವವುಳ್ಳವನಾಗಿ, **ಇದಂ ಜಗತ್** = ಈ ಜಗತ್ತನ್ನು **ಸ್ವಪ್ನ-ಆಲೋಕಿತ-ಲೋಕವತ್** = ಕನಸಿನಲ್ಲಿ ನೋಡಲ್ಪಟ್ಟ ಲೋಕದಂತೆ **ಪಶ್ಯನ್** = ನೋಡುವವನಾಗಿ, **ಕ್ವಚಿತ್** = ಯಾವಾಗಲೋ **ಲಬ್ಧ-ಧೀಃ** = ಎಚ್ಚರಗೊಂಡವನಾಗಿ, **ಅನಂತ-ಪುಣ್ಯಫಲ-ಭುಕ್** = ಅನಂತಪುಣ್ಯಫಲವನ್ನು ಅನುಭವಿಸುವ **ಕಶ್ಚಿತ್** = ಯಾವನೊ ಒಬ್ಬನು **ಆಸ್ತೇ** = ಇರುತ್ತಾನೆ; **ಸಃ** = ಅವನು **ಭುವಿ** = ಭೂಲೋಕದಲ್ಲಿ **ಧನ್ಯಃ** = ಧನ್ಯನು **ಮಾನ್ಯಃ** = ಮಾನ್ಯನು.

**೪೨೪.** ಬ್ರಹ್ಮರೂಪದಿಂದಲೇ ಯಾವಾಗಲೂ ಇರುವುದರಿಂದ ಬಾಹ್ಯ ವಿಷಯಗಳ ಜ್ಞಾನವೇ ಇಲ್ಲದವನಾಗಿ, ನಿದ್ರಿಸುತ್ತಿರುವವನಂತೆ, ಮಗುವಿನಂತೆ ಇತರರಿಂದ ಕೊಡಲ್ಪಟ್ಟ ಭೋಗ್ಯವಸ್ತುಗಳನ್ನು ಅನುಭವಿಸುತ್ತ, ಈ ಜಗತ್ತನ್ನು ಕನಸಿನಲ್ಲಿ ಕಾಣುವ ಲೋಕದಂತೆ ನೋಡುತ್ತ, ಯಾವಾಗಲೋ ಒಮ್ಮೆ ಬಹಿರ್ಮುಖವಾದ ಜ್ಞಾನವುಳ್ಳವನಾಗಿ ಅನಂತ-ಪುಣ್ಯಫಲವನ್ನು ಅನುಭವಿಸುವ ಯಾವನೊ ಒಬ್ಬನು ಇರುತ್ತಾನೆ; ಭೂಲೋಕದಲ್ಲಿ ಅವನೇ ಧನ್ಯನು ಮತ್ತು ಮಾನ್ಯನು.

**ಸ್ಥಿತಪ್ರಜ್ಞೋ ಯತಿರಯಂ ಯಃ ಸದಾನಂದಮಶ್ನುತೇ ।**
**ಬ್ರಹ್ಮಣ್ಯೇವ ವಿಲೀನಾತ್ಮಾ ನಿರ್ವಿಕಾರೋ ವಿನಿಷ್ಕ್ರಿಯಃ ॥ ೪೨೫ ॥**

**ಯಃ** = ಯಾವನು **ಬ್ರಹ್ಮಣಿ ಏವ** = ಬ್ರಹ್ಮದಲ್ಲಿಯೇ **ವಿಲೀನಾತ್ಮಾ** = ಲಯವಾದ ಅಂತಃಕರಣವುಳ್ಳವನೊ **ನಿರ್ವಿಕಾರಃ** = ನಿರ್ವಿಕಾರನೊ **ವಿನಿಷ್ಕ್ರಿಯಃ** = ನಿಷ್ಕ್ರಿಯನೊ **ಸದಾ** = ಯಾವಾಗಲೂ **ಆನಂದಮ್ ಅಶ್ನುತೇ** = ಆನಂದವನ್ನು ಹೊಂದಿರುವನೊ **ಅಯಂ** = ಈ **ಯತಿಃ** = ಯತಿಯು **ಸ್ಥಿತಪ್ರಜ್ಞಃ** = ಸ್ಥಿತಪ್ರಜ್ಞನು.

**೪೨೫.** ಯಾವನು ಬ್ರಹ್ಮದಲ್ಲಿಯೇ ಅಂತಃಕರಣವನ್ನು ಲಯವಾಡಿ ಕೊಂಡು ಸರ್ವವಿಕಾರ-ರಹಿತನಾಗಿ ಸರ್ವಕರ್ಮರಹಿತನಾಗಿ ಯಾವಾಗಲೂ ಆನಂದವನ್ನು ಹೊಂದಿರುವನೊ ಆ ಯತಿಯು ಸ್ಥಿತಪ್ರಜ್ಞನು.

**ಬ್ರಹ್ಮಾತ್ಮನೋಃ ಶೋಧಿತಯೋರೇಕಭಾವಾವಗಾಹಿನೀ ।**
**ನಿರ್ವಿಕಲ್ಪಾ ಚ ಚಿನ್ಮಾತ್ರಾ ವೃತ್ತಿಃ ಪ್ರಜ್ಞೇತಿ ಕಥ್ಯತೇ ।**
**ಸುಸ್ಥಿತಾಽಸೌ ಭವೇದ್ಯಸ್ಯ ಸ್ಥಿತಪ್ರಜ್ಞಃ ಸ ಉಚ್ಯತೇ ॥ ೪೨೬ ॥**

**ಶೋಧಿತಯೋಃ** = ಶೋಧಿಸಲ್ಪಟ್ಟ **ಬ್ರಹ್ಮಾತ್ಮನೋಃ** = ಪರಮಾತ್ಮ-ಜೀವಾತ್ಮರ **ಏಕಭಾವ-ಅವಗಾಹಿನೀ** = ಐಕ್ಯಭಾವವನ್ನು ಗ್ರಹಿಸುವ **ನಿರ್ವಿಕಲ್ಪಾ** = ನಿರ್ವಿಕಲ್ಪ ವಾದ **ಚಿನ್ಮಾತ್ರಾ ಚ** = ಚಿನ್ಮಾತ್ರವಾದ **ವೃತ್ತಿಃ** = ವೃತ್ತಿಯು **ಪ್ರಜ್ಞಾ ಇತಿ** = ಪ್ರಜ್ಞೆ ಯೆಂದು **ಕಥ್ಯತೇ** = ಹೇಳಲ್ಪಡುತ್ತದೆ; **ಯಸ್ಯ** = ಯಾವನಿಗೆ **ಅಸೌ** = ಈ ಪ್ರಜ್ಞೆಯು **ಸುಸ್ಥಿತಾ ಭವೇತ್** = ಸ್ಥಿರವಾಗಿರುವುದೊ **ಸಃ** = ಅವನು **ಸ್ಥಿತಪ್ರಜ್ಞಃ** = ಸ್ಥಿತಪ್ರಜ್ಞ ನೆಂದು **ಉಚ್ಯತೇ** = ಹೇಳಲ್ಪಡುತ್ತಾನೆ.

**೪೨೬.** (ತತ್, ತ್ವಮ್ ಎಂಬ ಪದಗಳಿಗೆ ವಾಚ್ಯರಾಗಿರುವ) ಪರ ಮಾತ್ಮ, ಜೀವಾತ್ಮ—ಇವರನ್ನು ಶೋಧಿಸಿ ಐಕ್ಯಭಾವವನ್ನು ಗ್ರಹಿಸುವ, ನಿರ್ವಿಕಲ್ಪವೂ ಚಿನ್ಮಾತ್ರವೂ ಆದ ವೃತ್ತಿಯು ಪ್ರಜ್ಞೆ ಎಂದು ಹೇಳಲ್ಪಡು ತ್ತದೆ. ಯಾವನಿಗೆ ಈ ಪ್ರಜ್ಞೆಯು ಸ್ಥಿರವಾಗಿರುವುದೊ ಅವನು ಸ್ಥಿತಪ್ರಜ್ಞನು ಎನಿಸುತ್ತಾನೆ.

[೧೨೪೧ನೆಯ ಶ್ಲೋಕವನ್ನು ನೋಡಿ.]

**ಯಸ್ಯ ಸ್ಥಿತಾ ಭವೇತ್ ಪ್ರಜ್ಞಾ ಯಸ್ಯಾನಂದೋ ನಿರಂತರಃ ।**
**ಪ್ರಪಂಚೋ ವಿಸ್ಮೃತಪ್ರಾಯಃ ಸ ಜೀವನ್ಮುಕ್ತ ಇಷ್ಯತೇ ॥ ೪೨೭ ॥**

**ಯಸ್ಯ** = ಯಾವನ **ಪ್ರಜ್ಞಾ** = ಪ್ರಜ್ಞೆಯು **ಸ್ಥಿತಾ ಭವೇತ್** = ಸ್ಥಿತವಾಗಿರು ವುದೊ, **ಯಸ್ಯ** = ಯಾವನ **ಆನಂದಃ** = ಆನಂದವು **ನಿರಂತರಃ** = ನಿರಂತರವಾಗಿರು ವುದೊ, [ಯಾವನಿಗೆ] **ಪ್ರಪಂಚಃ** = ಪ್ರಪಂಚವು **ವಿಸ್ಮೃತಪ್ರಾಯಃ** = ಮರೆತು ಹೋದಂತೆ ಆಗಿರುವುದೊ **ಸಃ** = ಅವನು **ಜೀವನ್ಮುಕ್ತಃ** = ಜೀವನ್ಮುಕ್ತನೆಂದು **ಇಷ್ಯತೇ** = ಹೇಳಲ್ಪಡುತ್ತಾನೆ.

**೪೨೭.** ಯಾವನ ಪ್ರಜ್ಞೆಯು ಸ್ಥಿತವಾಗಿರುವುದೊ ಯಾವನ ಆನಂದವು ನಿರಂತರವಾಗಿರುವುದೊ ಯಾವನಿಗೆ ಪ್ರಪಂಚವು ಮರೆತುಹೋದಂತೆ ಆಗಿರು ವುದೊ ಅವನು ಜೀವನ್ಮುಕ್ತನು ಎನಿಸುತ್ತಾನೆ.

**ಲೀನಧೀರಪಿ ಜಾಗರ್ತಿ ಯೋ ಜಾಗ್ರದ್ಧರ್ಮವರ್ಜಿತಃ ।**
**ಬೋಧೋ ನಿರ್ವಾಸನೋ ಯಸ್ಯ ಸ ಜೀವನ್ಮುಕ್ತ ಇಷ್ಯತೇ ॥ ೪೨೮ ॥**

**ಯಃ** = ಯಾವನು **ಲೀನಧೀಃ ಅಪಿ** = [ಪರಮಾತ್ಮನಲ್ಲಿ] ಲಯವಾಗಿರುವ ಬುದ್ಧಿಯುಳ್ಳವನಾದರೂ **ಜಾಗ್ರದ್-ಧರ್ಮವರ್ಜಿತಃ** = ಜಾಗ್ರದವಸ್ಥೆಯ ಧರ್ಮಗಳಿಂದ ಬಿಡಲ್ಪಟ್ಟವನಾಗಿ **ಜಾಗರ್ತಿ** = ಎಚ್ಚತ್ತಿರುವನೊ, **ಯಸ್ಯ** = ಯಾವನ **ಬೋಧಃ** = ಜ್ಞಾನವು **ನಿರ್ವಾಸನಃ** = ವಾಸನಾರಹಿತವಾಗಿರುವುದೊ **ಸಃ ಜೀವನ್ಮುಕ್ತಃ ಇಷ್ಯತೇ.**

**೪೨೮.** ಯಾವನು ತನ್ನ ಬುದ್ಧಿವೃತ್ತಿಯನ್ನು (ಪರಮಾತ್ಮನಲ್ಲಿ) ಲಯಗೊಳಿಸಿಕೊಂಡಿದ್ದರೂ ಜಾಗ್ರದವಸ್ಥೆಯ ಧರ್ಮಗಳಿಂದ ಬಿಡಲ್ಪಟ್ಟು[೧] ಎಚ್ಚತ್ತಿರುವನೊ, ಯಾವನ ಜ್ಞಾನವು ವಿಷಯ-ವಾಸನಾರಹಿತವಾಗಿರುವುದೊ ಅವನು ಜೀವನ್ಮುಕ್ತನು ಎನಿಸುತ್ತಾನೆ.

[೧ 'ಇಂದ್ರಿಯಗಳ ಮೂಲಕ ವಿಷಯಗಳನ್ನು ಗ್ರಹಿಸುವುದು ಜಾಗ್ರದವಸ್ಥೆಯ ಲಕ್ಷಣವು' **ಇಂದ್ರಿಯೈರರ್ಥೋಪಲಬ್ಧಿರ್ಜಾಗರಿತಮಿತಿ ಲಕ್ಷಣಮ್.**]

**ಶಾಂತಸಂಸಾರಕಲನಃ ಕಲಾವಾನಪಿ ನಿಷ್ಕಲಃ ।**
**ಯಃ ಸಚಿತ್ತೋಽಪಿ ನಿಶ್ಚಿತ್ತಃ ಸ ಜೀವನ್ಮುಕ್ತ ಇಷ್ಯತೇ ॥ ೪೨೯ ॥**

**ಯಃ** = ಯಾವನು **ಶಾಂತ-ಸಂಸಾರ-ಕಲನಃ** = ಶಾಂತವಾದ ಸಂಸಾರಚಿಂತೆಯುಳ್ಳವನಾಗಿ **ಕಲಾವಾನ್ ಅಪಿ** = ಅವಯವಗಳುಳ್ಳವನಾಗಿದ್ದರೂ **ನಿಷ್ಕಲಃ** = ನಿರವಯವನಾಗಿರುವನೊ **ಸಚಿತ್ತಃ ಅಪಿ** = ಚಿತ್ತವುಳ್ಳವನಾಗಿದ್ದರೂ **ನಿಶ್ಚಿತ್ತಃ** = ಚಿತ್ತವಿಲ್ಲದವನಂತಿರುವನೊ **ಸಃ ಜೀವನ್ಮುಕ್ತಃ ಇಷ್ಯತೇ.**

**೪೨೯.** ಯಾವನು ಸಂಸಾರದ ಚಿಂತೆಯನ್ನೆಲ್ಲ ಕಳೆದುಕೊಂಡು, ಅವಯವಗಳುಳ್ಳವನಾಗಿದ್ದರೂ ಅವಯವರಹಿತನಂತಿರುವನೊ, ಚಿತ್ತವುಳ್ಳವನಾಗಿದ್ದರೂ ಚಿತ್ತವಿಲ್ಲದವನಂತಿರುವನೊ[೧] ಅವನು ಜೀವನ್ಮುಕ್ತನು ಎನಿಸುವನು.

[೧ ಹೊರಗಿನ ವೃತ್ತಿಗಳೆಲ್ಲವೂ ಲಯವಾಗಿರುವುದರಿಂದ ಮುಗ್ಧನಂತೆ ಕಂಡುಬರುವನು ಅಥವಾ ರಾಗಾದಿಶೂನ್ಯನಾಗಿರುವನು.]

**ವರ್ತಮಾನೇಽಪಿ ದೇಹೇಽಸ್ಮಿಂಛಾಯಾವದನುವರ್ತಿನಿ ।**
**ಅಹಂತಾ-ಮಮತಾಽಭಾವೋ ಜೀವನ್ಮುಕ್ತಸ್ಯ ಲಕ್ಷಣಮ್ ॥ ೪೩೦ ॥**

**ಛಾಯಾವತ್** = ನೆರಳಿನಂತೆ **ಅನುವರ್ತಿನಿ ಅಸ್ಮಿನ್ ದೇಹೇ ವರ್ತಮಾನೇ ಅಪಿ** = ಅನುಸರಿಸಿಕೊಂಡಿರುವ ಈ ದೇಹವು ಇರುತ್ತಿದ್ದರೂ **ಅಹಂತಾ-ಮಮತಾ-**

**ಅಭಾವಃ**= ಅಹಂಕಾರ-ಮಮಕಾರಗಳ ಶೂನ್ಯತೆಯೇ **ಜೀವನ್ಮುಕ್ತಸ್ಯ**=ಜೀವನ್ಮುಕ್ತನ **ಲಕ್ಷಣಂ**= ಲಕ್ಷಣವು.

**೪೩೦.** ನೆರಳಿನಂತೆ ಈ ದೇಹವು ತನ್ನನ್ನು ಅನುಸರಿಸಿಕೊಂಡೇ ಇದ್ದರೂ 'ನಾನು, ನನ್ನದು' ಎಂಬ ಭಾವವಿಲ್ಲದಿರುವುದೇ ಜೀವನ್ಮುಕ್ತನ ಲಕ್ಷಣವು.

[ರಾಗ-ದ್ವೇಷಗಳು ಜರಾಮರಣಾದಿಗಳು ಇವೇ ಮೊದಲಾದ ವಿಕಾರಗಳು ಸ್ಥೂಲದೇಹದ ಅಭಿಮಾನದಿಂದ ಉಂಟಾಗಿರುವುದರಿಂದ ಅಂಥ ಅಭಿಮಾನವಿಲ್ಲದಿದ್ದರೆ ನಿರ್ವಿಕಾರತ್ವವು ಸಿದ್ಧಿಸುವುದೆಂಬುದು ಸ್ಪಷ್ಟವಾಗಿದೆ.]

**ಅತೀತಾನನುಸಂಧಾನಂ ಭವಿಷ್ಯದವಿಚಾರಣಮ್ ।**
**ಔದಾಸೀನ್ಯಮಪಿ ಪ್ರಾಪ್ತೇ ಜೀವನ್ಮುಕ್ತಸ್ಯ ಲಕ್ಷಣಮ್ ॥ ೪೩೧ ॥**

**ಅತೀತ-ಅನನುಸಂಧಾನಂ**= ಕಳೆದುಹೋದದ್ದನ್ನು ಸ್ಮರಿಸಿಕೊಳ್ಳದಿರುವುದು, **ಭವಿಷ್ಯತ್-ಅವಿಚಾರಣಂ**=ಮುಂದೆ ಒದಗುವುದನ್ನು ಯೋಚಿಸದಿರುವುದು, **ಪ್ರಾಪ್ತೇ ಅಪಿ**= ಈಗ ಒದಗಿರುವುದರಲ್ಲಿಯೂ **ಔದಾಸೀನ್ಯಂ**= ಉದಾಸೀನತೆ—[ಇವುಗಳೇ] **ಜೀವನ್ಮುಕ್ತಸ್ಯ ಲಕ್ಷಣಮ್.**

**೪೩೧.** ಕಳೆದುಹೋದದ್ದನ್ನು ಸ್ಮರಿಸಿಕೊಳ್ಳದಿರುವುದು, ಮುಂದೆ ಒದಗುವುದನ್ನು ಯೋಚಿಸದಿರುವುದು, ಈಗ ಒದಗಿರುವುದರಲ್ಲಿಯೂ ಉದಾಸೀನನಾಗಿರುವುದು—(ಇವುಗಳೇ) ಜೀವನ್ಮುಕ್ತನ ಲಕ್ಷಣ.

**ಗುಣ-ದೋಷ-ವಿಶಿಷ್ಟೇಽಸ್ಮಿನ್ ಸ್ವಭಾವೇನ ವಿಲಕ್ಷಣೇ ।**
**ಸರ್ವತ್ರ ಸಮದರ್ಶಿತ್ವಂ ಜೀವನ್ಮುಕ್ತಸ್ಯ ಲಕ್ಷಣಮ್ ॥ ೪೩೨ ॥**

**ಗುಣ-ದೋಷ-ವಿಶಿಷ್ಟೇ**= ಗುಣದೋಷಗಳಿಂದ ಕೂಡಿರುವ **ಸ್ವಭಾವೇನ**= ಸ್ವಭಾವದಿಂದಲೇ **ವಿಲಕ್ಷಣೇ**= ವಿಚಿತ್ರವಾಗಿರುವ **ಅಸ್ಮಿನ್** [ಜಗತಿ]= ಈ ಜಗತ್ತಿನಲ್ಲಿ **ಸರ್ವತ್ರ**= ಎಲ್ಲೆಲ್ಲಿಯೂ **ಸಮದರ್ಶಿತ್ವಂ**= ಸಮದರ್ಶಿಯಾಗಿರುವುದು **ಜೀವನ್ಮುಕ್ತಸ್ಯ ಲಕ್ಷಣಮ್.**

**೪೩೨.** ಗುಣದೋಷಗಳಿಂದ ಕೂಡಿ ಸ್ವಭಾವದಿಂದಲೇ ವಿಚಿತ್ರವಾಗಿರುವ ಈ ಜಗತ್ತಿನಲ್ಲಿ ಎಲ್ಲೆಲ್ಲಿಯೂ ಸಮಾನದೃಷ್ಟಿಯಿಂದ[೧] ನೋಡುವುದು ಜೀವನ್ಮುಕ್ತನ ಲಕ್ಷಣವು.

[ಎಲ್ಲವೂ ಅವಿದ್ಯಾತ್ಮಕವಾಗಿರುವುದರಿಂದ ಜೀವನ್ಮುಕ್ತನು ಯಾವುದನ್ನೂ ದೋಷದೃಷ್ಟಿಯಿಂದ ಖಂಡಿಸುವುದಿಲ್ಲ, ಗುಣದೃಷ್ಟಿಯಿಂದ ಸ್ವೀಕರಿಸುವುದಿಲ್ಲ.
[೧] 'ಜ್ಞಾನಿಗಳು ಸಮದರ್ಶಿಗಳಾಗಿರುವರು' **ಪಂಡಿತಾಃ ಸಮದರ್ಶಿನಃ** (ಗೀತಾ ೫. ೧೮).]

**ಇಷ್ಟಾನಿಷ್ಟಾರ್ಥ-ಸಂಪ್ರಾಪ್ತೌ ಸಮದರ್ಶಿತಯಾಽಽತ್ಮನಿ ।**
**ಉಭಯತ್ರಾವಿಕಾರಿತ್ವಂ ಜೀವನ್ಮುಕ್ತಸ್ಯ ಲಕ್ಷಣಮ್ ॥ ೪೩೩ ॥**

**ಇಷ್ಟ-ಅನಿಷ್ಟ-ಅರ್ಥ-ಸಂಪ್ರಾಪ್ತೌ** = ಇಷ್ಟವಾದ ಅಥವಾ ಅನಿಷ್ಟವಾದ ವಿಷಯವು ಪ್ರಾಪ್ತವಾದರೆ **ಸಮದರ್ಶಿತಯಾ** = ಸಮದೃಷ್ಟಿಯಿಂದ **ಉಭಯತ್ರ** = ಎರಡರ ವಿಷಯದಲ್ಲಿಯೂ **ಆತ್ಮನಿ** = ತನ್ನಲ್ಲಿ **ಅವಿಕಾರಿತ್ವಂ** = ವಿಕಾರವನ್ನು ಪಡೆಯದಿರುವುದು **ಜೀವನ್ಮುಕ್ತಸ್ಯ ಲಕ್ಷಣಮ್.**

**೪೩೩.** ಇಷ್ಟವಾದ ಅಥವಾ ಅನಿಷ್ಟವಾದ ವಿಷಯವು ಪ್ರಾಪ್ತವಾದಾಗ ಸಮದೃಷ್ಟಿಯಿಂದ ಈ ಎರಡರ ವಿಷಯವಾಗಿಯೂ ತನ್ನಲ್ಲಿ ವಿಕಾರವನ್ನು ಪಡೆಯದಿರುವುದು ಜೀವನ್ಮುಕ್ತನ ಲಕ್ಷಣವು.

['ಯಾವನು ಸರ್ವವಸ್ತುಗಳಲ್ಲಿಯೂ ಆಸಕ್ತಿರಹಿತನಾಗಿ, ಆಯಾ ಪ್ರಿಯಾಪ್ರಿಯ ವಿಷಯಗಳನ್ನು ಪಡೆದಾಗ ಸಂತೋಷಿಸುವುದಿಲ್ಲವೊ ದ್ವೇಷಿಸುವುದಿಲ್ಲವೊ ಅವನ ಪ್ರಜ್ಞೆಯು ಸ್ಥಿರವಾಗಿರುವುದು' (ಗೀತಾ ೨. ೫೭). ]

**ಬ್ರಹ್ಮಾನಂದ-ರಸಾಸ್ವಾದಾಸಕ್ತ-ಚಿತ್ತತಯಾ ಯತೇಃ ।**
**ಅಂತರ್ಬಹಿರವಿಜ್ಞಾನಂ ಜೀವನ್ಮುಕ್ತಸ್ಯ ಲಕ್ಷಣಮ್ ॥ ೪೩೪ ॥**

**ಬ್ರಹ್ಮಾನಂದರಸ-ಆಸ್ವಾದ-ಆಸಕ್ತ-ಚಿತ್ತತಯಾ** = ಬ್ರಹ್ಮಾನಂದರಸದ ಸವಿಯಲ್ಲಿ ಆಸಕ್ತವಾಗಿರುವ ಚಿತ್ತವಿರುವುದರಿಂದಲೇ **ಯತೇಃ** = ಯತಿಗೆ **ಅಂತಃ** = ಒಳಗೂ **ಬಹಿಃ** = ಹೊರಗೂ **ಅವಿಜ್ಞಾನಂ** = ಅರಿವಿಲ್ಲದಿರುವುದು **ಜೀವನ್ಮುಕ್ತಸ್ಯ ಲಕ್ಷಣಮ್.**

**೪೩೪.** ಬ್ರಹ್ಮಾನಂದರಸವನ್ನು ಸವಿಯುವುದರಲ್ಲಿ ಚಿತ್ತವು ಆಸಕ್ತವಾಗಿರುವುದರಿಂದ ಯತಿಗೆ ಒಳಗಿನ ಮತ್ತು ಹೊರಗಿನ ಅರಿವು ಇರುವುದಿಲ್ಲ; ಇದು ಜೀವನ್ಮುಕ್ತನ ಲಕ್ಷಣವು.

**ದೇಹೇಂದ್ರಿಯಾದೌ ಕರ್ತವ್ಯೇ ಮಮಾಹಂಭಾವ-ವರ್ಜಿತಃ ।**
**ಔದಾಸೀನ್ಯೇನ ಯಸ್ತಿಷ್ಠೇತ್ ಸ ಜೀವನ್ಮುಕ್ತಲಕ್ಷಣಃ ॥ ೪೩೫ ॥**

**ದೇಹ-ಇಂದ್ರಿಯ-ಆದೌ** = ದೇಹ ಇಂದ್ರಿಯ ಇವೇ ಮೊದಲಾದುದರಲ್ಲಿ **ಕರ್ತವ್ಯೇ** = ಮಾಡತಕ್ಕ ಕೆಲಸದಲ್ಲಿ **ಮಮ-ಅಹಂ-ಭಾವ-ವರ್ಜಿತಃ** = 'ನನ್ನದು' 'ನಾನು' ಎಂಬ ಭಾವವಿಲ್ಲದೆ **ಯಃ** = ಯಾವನು **ಔದಾಸೀನ್ಯೇನ** = ಉದಾಸೀನಭಾವದಿಂದ **ತಿಷ್ಠೇತ್** = ಇರುವನೊ **ಸಃ** = ಅವನು **ಜೀವನ್ಮುಕ್ತಲಕ್ಷಣಃ.**

**೪೩೫.** ದೇಹ ಇಂದ್ರಿಯಗಳು—ಇವೇ ಮೊದಲಾದುವುಗಳಲ್ಲಿಯೂ ಮಾಡತಕ್ಕ ಕೆಲಸದಲ್ಲಿಯೂ 'ನಾನು' 'ನನ್ನದು' ಎಂಬ ಭಾವವಿಲ್ಲದೆ ಯಾವನು ಉದಾಸೀನನಾಗಿರುವನೊ ಅವನು ಜೀವನ್ಮುಕ್ತನ ಲಕ್ಷಣವುಳ್ಳವನು.

**ವಿಜ್ಞಾತ ಆತ್ಮನೋ ಯಸ್ಯ ಬ್ರಹ್ಮಭಾವಃ ಶ್ರುತೇರ್ಬಲಾತ್ ।**
**ಭವಬಂಧವಿನಿರ್ಮುಕ್ತಃ ಸ ಜೀವನ್ಮುಕ್ತಲಕ್ಷಣಃ ॥ ೪೩೬ ॥**

**ಯಸ್ಯ** = ಯಾವನಿಗೆ **ಶ್ರುತೇಃ** = ಶ್ರುತಿಯ **ಬಲಾತ್** = ಬಲದಿಂದ **ಆತ್ಮನಃ** = ತನ್ನ **ಬ್ರಹ್ಮಭಾವಃ** = ಬ್ರಹ್ಮಭಾವವು **ವಿಜ್ಞಾತಃ** = ತಿಳಿದಿರುವುದೊ, **ಭವಬಂಧವಿನಿರ್ಮುಕ್ತಃ** = ಸಂಸಾರಬಂಧದಿಂದ ಮುಕ್ತನಾದ **ಸಃ** = ಅವನು **ಜೀವನ್ಮುಕ್ತಲಕ್ಷಣಃ.**

**೪೩೬.** ಯಾವನಿಗೆ ಶ್ರುತಿಯ ಬಲದಿಂದ ತನ್ನ ಬ್ರಹ್ಮಭಾವವು ತಿಳಿದು ಬಂದಿರುವುದೊ ಸಂಸಾರಬಂಧದಿಂದ ಮುಕ್ತನಾದ ಅವನು ಜೀವನ್ಮುಕ್ತನ ಲಕ್ಷಣವುಳ್ಳವನು.

**ದೇಹೇಂದ್ರಿಯೇಷ್ವಹಂಭಾವ ಇದಂ ಭಾವಸ್ತದನ್ಯಕೇ ।**
**ಯಸ್ಯ ನೋ ಭವತಃ ಕ್ವಾಪಿ ಸ ಜೀವನ್ಮುಕ್ತ ಇಷ್ಯತೇ ॥ ೪೩೭ ॥**

**ಯಸ್ಯ** = ಯಾವನಿಗೆ **ದೇಹ-ಇಂದ್ರಿಯೇಷು** = ದೇಹ ಇಂದ್ರಿಯ—ಇವುಗಳಲ್ಲಿ **ಅಹಂ-ಭಾವಃ** = 'ನಾನು' ಎಂಬ ಭಾವವೂ **ತತ್-ಅನ್ಯಕೇ** = ಅವುಗಳಿಗಿಂತ ವ್ಯತಿರಿಕ್ತವಾದ ವಸ್ತುಗಳಲ್ಲಿ **ಇದಂ-ಭಾವಃ** = 'ಇದು' ಎಂಬ ಭಾವವೂ **ಕ್ವ ಅಪಿ** = ಎಂದಿಗೂ **ನ ಉ ಭವತಃ** = ಉಂಟಾಗುವುದಿಲ್ಲವೊ **ಸಃ ಜೀವನ್ಮುಕ್ತಃ ಇಷ್ಯತೇ.**

**೪೩೭.** ಯಾವನಿಗೆ ದೇಹೇಂದ್ರಿಯಗಳಲ್ಲಿ 'ನಾನು' ಎಂಬ ಭಾವವೂ, ಅವುಗಳಿಗಿಂತ ವ್ಯತಿರಿಕ್ತವಾದ ವಸ್ತುಗಳಲ್ಲಿ 'ಇದು' ಎಂಬ ಭಾವವೂ ಎಂದಿಗೂ ಉಂಟಾಗುವುದಿಲ್ಲವೊ ಅವನು ಜೀವನ್ಮುಕ್ತನು ಎನಿಸುವನು.

**ನ ಪ್ರತ್ಯಗ್ಬ್ರಹ್ಮಣೋರ್ಭೇದಂ ಕದಾಽಪಿ ಬ್ರಹ್ಮಸರ್ಗಯೋಃ ।**
**ಪ್ರಜ್ಞಯಾ ಯೋ ವಿಜಾನಾತಿ ಸ ಜೀವನ್ಮುಕ್ತ ಇಷ್ಯತೇ ॥ ೪೩೮ ॥**

**ಯಃ** = ಯಾವನು **ಪ್ರತ್ಯಕ್-ಬ್ರಹ್ಮಣೋಃ** = ಜೀವ, ಬ್ರಹ್ಮ ಇವರಲ್ಲಾಗಲಿ, **ಬ್ರಹ್ಮ-ಸರ್ಗಯೋಃ** = ಬ್ರಹ್ಮ, ಜಗತ್ತು ಇವುಗಳಲ್ಲಾಗಲಿ **ಪ್ರಜ್ಞಯಾ** = ಯಥಾರ್ಥ ದೃಷ್ಟಿಯಿಂದ **ಭೇದಂ** = ಭೇದವನ್ನು **ಕದಾ ಅಪಿ** = ಕಾಲತ್ರಯದಲ್ಲಿಯೂ **ನ ವಿಜಾನಾತಿ** = ಅರಿಯುವುದಿಲ್ಲವೊ **ಸಃ ಜೀವನ್ಮುಕ್ತ ಇಷ್ಯತೇ.**

**೪೩೮.** ಯಾವನು ಜೀವ ಮತ್ತು ಬ್ರಹ್ಮ—ಇವರಲ್ಲಾಗಲಿ, ಬ್ರಹ್ಮ ಮತ್ತು ಜಗತ್ತು—ಇವುಗಳಲ್ಲಾಗಲಿ ಯಥಾರ್ಥದೃಷ್ಟಿಯಿಂದ ಭೇದವನ್ನು ಕಾಲ ತ್ರಯದಲ್ಲಿಯೂ ಅರಿಯುವುದಿಲ್ಲವೊ ಅವನು ಜೀವನ್ಮುಕ್ತನು ಎನಿಸುವನು.

**ಸಾಧುಭಿಃ ಪೂಜ್ಯಮಾನೇಽಸ್ಮಿನ್ ಪೀಡ್ಯಮಾನೇಽಪಿ ದುರ್ಜನೈಃ ।**
**ಸಮಭಾವೋ ಭವೇದ್ಯಸ್ಯ ಸ ಜೀವನ್ಮುಕ್ತ ಇಷ್ಯತೇ ॥ ೪೩೯ ॥**

**ಅಸ್ಮಿನ್** [ಶರೀರೇ] = ಈ ಶರೀರವು **ಸಾಧುಭಿಃ** = ಸಾಧುಗಳಿಂದ **ಪೂಜ್ಯಮಾನೇ** = ಗೌರವಿಸಲ್ಪಟ್ಟರೂ, **ದುರ್ಜನೈಃ** = ದುಷ್ಟರಿಂದ **ಪೀಡ್ಯಮಾನೇ ಅಪಿ** = ಪೀಡಿಸಲ್ಪಟ್ಟರೂ **ಯಸ್ಯ** = ಯಾವನಿಗೆ **ಸಮಭಾವಃ ಭವೇತ್** = ಸಮಭಾವವಿರುವುದೊ **ಸಃ ಜೀವನ್ಮುಕ್ತಃ ಇಷ್ಯತೇ.**

**೪೩೯.** ಸಾಧುಗಳು ಈ ಶರೀರವನ್ನು ಗೌರವಿಸಲಿ ಅಥವಾ ದುಷ್ಟರು ಪೀಡಿಸಲಿ, ಯಾವನಿಗೆ ಸಮಭಾವವಿರುವುದೊ ಅವನು ಜೀವನ್ಮುಕ್ತನು ಎನಿಸುವನು.

**ಯತ್ರ ಪ್ರವಿಷ್ಟಾ ವಿಷಯಾಃ ಪರೇರಿತಾ**
**ನದೀಪ್ರವಾಹಾ ಇವ ವಾರಿರಾಶೌ ।**
**ಲೀಯಂತಿ ಸನ್ಮಾತ್ರತಯಾ ನ ವಿಕ್ರಿಯಾ-**
**ಮುತ್ಪಾದಯಂತ್ಯೇಷ ಯತಿರ್ವಿಮುಕ್ತಃ ॥ ೪೪೦ ॥**

**ಪರ-ಈರಿತಾಃ** = ಇತರರಿಂದ ಪ್ರೇರಿತವಾದ **ವಿಷಯಾಃ** = ವಿಷಯಗಳು **ಯತ್ರ** = ಯಾವನಲ್ಲಿ **ಪ್ರವಿಷ್ಟಾಃ** = ಪ್ರವೇಶಿಸಿದವುಗಳಾಗಿ **ವಾರಿರಾಶೌ** = ಸಮುದ್ರದಲ್ಲಿ [ಪ್ರವೇಶಿಸಿದ] **ನದೀ-ಪ್ರವಾಹಾಃ ಇವ** = ನದೀಪ್ರವಾಹಗಳ ಹಾಗೆ **ಸನ್ಮಾತ್ರತಯಾ** = ಬ್ರಹ್ಮಾತ್ಮೈಕ್ಯ-ಭಾವನೆಯಿಂದ **ಲೀಯಂತಿ** = ಲಯವಾಗುವುವೊ, **ವಿಕ್ರಿಯಾಂ** = ವಿಕಾರವನ್ನು **ನ ಉತ್ಪಾದಯಂತಿ** = ಉಂಟುಮಾಡುವುದಿಲ್ಲವೊ **ಏಷಃ ಯತಿಃ** = ಈ ಯತಿಯೇ **ವಿಮುಕ್ತಃ** = ಮುಕ್ತನು.

**೪೪೦.** ಇತರರಿಂದ ಪ್ರೇರಿತವಾಗಿ ಬರುವ ವಿಷಯಗಳು ಪ್ರವೇಶಿಸಿ—ಸಮುದ್ರವನ್ನು ಪ್ರವೇಶಿಸಿದ ನದೀಪ್ರವಾಹಗಳಂತೆ—ಬ್ರಹ್ಮಾತ್ಮೈಕ್ಯಭಾವನೆಯಿಂದ ಯಾವ ಯತಿಯಲ್ಲಿ ಲಯವಾಗುವುವೋ ಮತ್ತು ಯಾವ ವಿಕಾರವನ್ನೂ ಉಂಟುಮಾಡುವುದಿಲ್ಲವೊ ಅವನೇ ಮುಕ್ತನು.

**[ಜೀವನ್ಮುಕ್ತನು ಸ್ವತಃ ಬಹಿರ್ಮುಖನಾಗದಿದ್ದರೂ, ಇತರರು ಮಾಡುವ ಸ್ತುತಿ-ನಿಂದೆಗಳು—ಮತ್ತೊಬ್ಬರ ದೃಷ್ಟಿಯಿಂದ ಒಳ್ಳೆಯದು ಕೆಟ್ಟದು ಎನಿಸಿದ್ದರೂ—ಇವನಲ್ಲಿ ಯಾವ ವಿಕಾರವನ್ನೂ ಉಂಟುಮಾಡದೆ ಅಡಗಿಹೋಗುವುವು. ಗೀತಾ ೨. ೭೦ ನೋಡಿ.]**

**ವಿಜ್ಞಾತಬ್ರಹ್ಮತತ್ತ್ವಸ್ಯ ಯಥಾಪೂರ್ವಂ ನ ಸಂಸೃತಿಃ ।**
**ಅಸ್ತಿ ಚೇನ್ನ ಸ ವಿಜ್ಞಾತಬ್ರಹ್ಮಭಾವೋ ಬಹಿರ್ಮುಖಃ ॥ ೪೪೧ ॥**

**ವಿಜ್ಞಾತ-ಬ್ರಹ್ಮತತ್ತ್ವಸ್ಯ** = ಬ್ರಹ್ಮತತ್ತ್ವವನ್ನು ಅರಿತುಕೊಂಡವನಿಗೆ **ಯಥಾ-ಪೂರ್ವಂ** = ಮೊದಲಿನಂತೆಯೇ **ಸಂಸೃತಿಃ** = ಸಂಸಾರವು **ನ** = ಇರುವುದಿಲ್ಲ, **ಅಸ್ತಿ ಚೇತ್** = ಇದ್ದರೆ **ಸಃ** = ಅವನು **ವಿಜ್ಞಾತ-ಬ್ರಹ್ಮಭಾವಃ ನ** = ಬ್ರಹ್ಮತತ್ತ್ವವನ್ನು ಅರಿತುಕೊಂಡವನು ಆಗುವುದಿಲ್ಲ, **ಬಹಿರ್ಮುಖಃ** = ಬಹಿರ್ಮುಖನಾದವನೇ.

**೪೪೧.** ಬ್ರಹ್ಮತತ್ತ್ವವನ್ನು ಅರಿತುಕೊಂಡವನಿಗೆ ಮೊದಲಿನಂತೆಯೇ ಸಂಸಾರವಿರುವುದಿಲ್ಲ; ಮುನ್ನಿನಂತೆ ಸಂಸಾರವಾಸನೆಯಿದ್ದರೆ ಅವನು ಬ್ರಹ್ಮ ತತ್ತ್ವವನ್ನು ಅರಿತುಕೊಂಡವನಾಗುವುದಿಲ್ಲ, ಬಹಿರ್ಮುಖನೇ[೧] (ಆಗಿರುತ್ತಾನೆ).

[[೧] ಇಂದ್ರಿಯಗಳು ವಿಷಯಗಳ ಕಡೆಗೆ ಹೋಗುವ ಪ್ರವೃತ್ತಿಯುಳ್ಳವನು.]

**ಪ್ರಾಚೀನವಾಸನಾವೇಗಾದಸೌ ಸಂಸರತೀತಿ ಚೇತ್ ।**
**ನ ಸದೇಕತ್ವವಿಜ್ಞಾನಾನ್ಮಂದೀಭವತಿ ವಾಸನಾ ॥ ೪೪೨ ॥**

**ಅಸೌ** = ಇವನು **ಪ್ರಾಚೀನ-ವಾಸನಾ-ವೇಗಾತ್** = ಹಿಂದಿನ ವಾಸನಾವೇಗದಿಂದ **ಸಂಸರತಿ** = ಸಂಸಾರಹೊಂದುತ್ತಾನೆ— **ಇತಿ ಚೇತ್** = ಎಂದು ಹೇಳಿದರೆ, **ನ** = ಇಲ್ಲ; **ಸತ್-ಏಕತ್ವ-ವಿಜ್ಞಾನಾತ್** = ಬ್ರಹ್ಮದ ಅಭೇದಜ್ಞಾನದಿಂದ **ವಾಸನಾ** = ವಾಸನೆಯು **ಮಂದೀಭವತಿ** = ಕೃಶವಾಗುತ್ತದೆ.

**೪೪೨.** 'ಇವನು ಹಿಂದಿನ ವಾಸನಾವೇಗದಿಂದ ಸಂಸರಿಸುತ್ತಾನೆ' ಎಂದರೆ ಅದಕ್ಕೆ ಉತ್ತರವು 'ಇಲ್ಲ'; (ಏಕೆಂದರೆ) ಬ್ರಹ್ಮದ ಅಭೇದಜ್ಞಾನದಿಂದ ಸಂಸಾರವಾಸನೆಯು ಕೃಶಿಸಿಹೋಗುತ್ತದೆ.

**ಅತ್ಯಂತಕಾಮುಕಸ್ಯಾಪಿ ವೃತ್ತಿಃ ಕುಂಠತಿ ಮಾತರಿ ।**
**ತಥೈವ ಬ್ರಹ್ಮಣಿ ಜ್ಞಾತೇ ಪೂರ್ಣಾನಂದೇ ಮನೀಷಿಣಃ ॥ ೪೪೩ ॥**

**ಅತ್ಯಂತಕಾಮುಕಸ್ಯ ಅಪಿ** = ಅತ್ಯಂತ ಕಾಮುಕನಿಗೂ **ಮಾತರಿ** = ತಾಯಿಯ ವಿಷಯದಲ್ಲಿ **ವೃತ್ತಿಃ** = ಕಾಮವೃತ್ತಿಯು **ಕುಂಠತಿ** = ಹಿಂಜರಿಯುತ್ತದೆ; **ತಥಾ ಏವ** = ಹಾಗೆಯೇ **ಪೂರ್ಣಾನಂದೇ ಬ್ರಹ್ಮಣಿ ಜ್ಞಾತೇ** = ಪೂರ್ಣಾನಂದಬ್ರಹ್ಮವನ್ನು ಅರಿತುಕೊಂಡಾಗ **ಮನೀಷಿಣಃ** = ಜ್ಞಾನಿಗೆ [ಆಗುತ್ತದೆ].

**೪೪೩.** ಅತ್ಯಂತ ಕಾಮುಕನಿಗೂ ತನ್ನ ತಾಯಿಯ ವಿಷಯದಲ್ಲಿ ಕಾಮರೂಪವಾದ ಚಿತ್ತವೃತ್ತಿಯು ಹಿಂಜರಿಯುತ್ತದೆ; ಪೂರ್ಣಾನಂದವಾದ ಬ್ರಹ್ಮ

ವನ್ನು ಅರಿತುಕೊಂಡಾಗ ಜ್ಞಾನಿಗೂ ಹಾಗೆಯೇ (ಸಂಸಾರವೃತ್ತಿಯು ಹಿಂಜರಿಯುತ್ತದೆ).

**ನಿದಿಧ್ಯಾಸನಶೀಲಸ್ಯ ಬಾಹ್ಯಪ್ರತ್ಯಯ ಈಕ್ಷ್ಯತೇ ।**
**ಬ್ರವೀತಿ ಶ್ರುತಿರೇತಸ್ಯ ಪ್ರಾರಬ್ಧಂ ಫಲದರ್ಶನಾತ್ ॥ ೪೪೪ ॥**

**ನಿದಿಧ್ಯಾಸನ-ಶೀಲಸ್ಯ** = ನಿದಿಧ್ಯಾಸನವನ್ನು ಮಾಡುತ್ತಿರುವವನಿಗೆ **ಬಾಹ್ಯ ಪ್ರತ್ಯಯಃ** = ಬಾಹ್ಯವಿಷಯಗಳ ಜ್ಞಾನವು **ಈಕ್ಷ್ಯತೇ** = ಕಂಡುಬರುತ್ತದೆ; **ಶ್ರುತಿಃ** = ಶ್ರುತಿಯು **ಏತಸ್ಯ** = ಇವನಿಗೆ—**ಫಲದರ್ಶನಾತ್** = ಕರ್ಮಫಲವು ಕಂಡುಬರುತ್ತಿರುವುದರಿಂದ—**ಪ್ರಾರಬ್ಧಂ** = ಪ್ರಾರಬ್ಧಕರ್ಮವನ್ನು **ಬ್ರವೀತಿ** = ಹೇಳುತ್ತದೆ.

**೪೪೪.** ಸಮಾಧಿಶೀಲನಾದ ಜ್ಞಾನಿಗೆ ಬಾಹ್ಯವಿಷಯಗಳ ಜ್ಞಾನವು[೧] ಕಂಡುಬರುತ್ತದೆ. ಹೀಗೆ ಅವನಿಗೆ ಕರ್ಮಫಲದ ಅನುಭವವು ಕಂಡುಬರುತ್ತಿರುವುದರಿಂದ ಪ್ರಾರಬ್ಧಕರ್ಮವಿದೆಯೆಂದು[೨] ಶ್ರುತಿಯು ಹೇಳುತ್ತದೆ.[೩]

[೧ ಉಪದೇಶ ಭೋಜನ ಇವೇ ಮೊದಲಾದ ವ್ಯವಹಾರ.

೨ ೪೫೦ನೆಯ ಶ್ಲೋಕವನ್ನು ನೋಡಿ.

೩ 'ಅವನಿಗೆ ಎಲ್ಲಿಯವರೆಗೆ ಮೋಕ್ಷವಾಗುವುದಿಲ್ಲವೊ ಅಲ್ಲಿಯವರೆಗೇ ವಿಳಂಬ' **ತಸ್ಯ ತಾವದೇವ ಚಿರಂ ಯಾವನ್ನ ವಿಮೋಕ್ಷ್ಯೇ** (ಛಾಂದೋಗ್ಯ ಉ. ೬. ೧೪. ೨).]

**ಸುಖಾದ್ಯನುಭವೋ ಯಾವತ್ ತಾವತ್ ಪ್ರಾರಬ್ಧಮಿಷ್ಯತೇ ।**
**ಫಲೋದಯಃ ಕ್ರಿಯಾಪೂರ್ವೋ ನಿಷ್ಕ್ರಿಯೋ ನ ಹಿ ಕುತ್ರಚಿತ್ ॥ ೪೪೫ ॥**

**ಸುಖಾದಿ-ಅನುಭವಃ** = ಸುಖಾದಿಗಳ ಅನುಭವವು **ಯಾವತ್** = ಎಲ್ಲಿಯವರೆಗೆ ಇರುವುದೊ **ತಾವತ್** = ಅಲ್ಲಿಯವರೆಗೆ **ಪ್ರಾರಬ್ಧಂ** = ಪ್ರಾರಬ್ಧವು **ಇಷ್ಯತೇ** = ಇರುವುದೆಂದು ಸ್ವೀಕರಿಸಲ್ಪಟ್ಟಿದೆ; **ಹಿ** = ಏಕೆಂದರೆ **ಫಲೋದಯಃ** = ಫಲೋತ್ಪತ್ತಿಯು **ಕ್ರಿಯಾಪೂರ್ವಃ** = ಕರ್ಮವನ್ನು ಮೊದಲೇ ಹೊಂದಿರಬೇಕು, **ಕುತ್ರಚಿತ್** - ಎಲ್ಲಿಯೂ **ನಿಷ್ಕ್ರಿಯಃ** = ಕರ್ಮವಿಲ್ಲದೆ **ನ** = ಆಗುವುದಿಲ್ಲ.

**೪೪೫.** ಸುಖದುಃಖಾದಿಗಳ ಅನುಭವವು ಎಲ್ಲಿಯವರೆಗೆ ಇರುವುದೊ ಅಲ್ಲಿಯವರೆಗೆ ಪ್ರಾರಬ್ಧಕರ್ಮವನ್ನು ಒಪ್ಪಿಕೊಳ್ಳಬೇಕು; ಏಕೆಂದರೆ ಫಲವುಂಟಾಗುವುದಕ್ಕೆ ಮೊದಲು ಕರ್ಮವು ಕಾರಣವಾಗಿರಬೇಕು. ಎಲ್ಲಿಯೂ ಕರ್ಮವಿಲ್ಲದೆ ಫಲವುಂಟಾಗಲಾರದು.

**ಅಹಂ ಬ್ರಹ್ಮೇತಿ ವಿಜ್ಞಾನಾತ್ ಕಲ್ಪಕೋಟಿ-ಶತಾರ್ಜಿತಮ್ ।**
**ಸಂಚಿತಂ ವಿಲಯಂ ಯಾತಿ ಪ್ರಬೋಧಾತ್ ಸ್ವಪ್ನ-ಕರ್ಮವತ್**
**॥ ೪೪೬ ॥**

**ಅಹಂ** = ನಾನು **ಬ್ರಹ್ಮ** = ಬ್ರಹ್ಮವು **ಇತಿ** = ಎಂಬ **ವಿಜ್ಞಾನಾತ್** = ವಿಜ್ಞಾನ ದಿಂದ **ಕಲ್ಪಕೋಟಿ-ಶತಾರ್ಜಿತಂ** = ನೂರು ಕೋಟಿ ಕಲ್ಪಗಳಿಂದ ಸಂಪಾದಿಸಿದ್ದ **ಸಂಚಿತಂ** = **ಸಂಚಿತಕರ್ಮವು** **ಪ್ರಬೋಧಾತ್** = ಎಚ್ಚರದಿಂದ **ಸ್ವಪ್ನ-ಕರ್ಮವತ್** = ಸ್ವಪ್ನಕರ್ಮದ ಹಾಗೆ **ವಿಲಯಂ** = ನಾಶವನ್ನು **ಯಾತಿ** = ಹೊಂದುತ್ತದೆ.

**೪೪೬.** 'ನಾನು ಬ್ರಹ್ಮವು' ಎಂಬ ಐಕ್ಯಜ್ಞಾನದಿಂದ ನೂರಾರು ಕೋಟಿ ಕಲ್ಪಗಳಿಂದ ಸಂಪಾದಿಸಿರುವ ಸಂಚಿತಕರ್ಮವೂ[೧] ಕೂಡ—ಎಚ್ಚರವಾದ ಮೇಲೆ ಸ್ವಪ್ನದಲ್ಲಿ ಮಾಡಿದ ಕರ್ಮವು ನಾಶವಾಗುವಂತೆ—ನಾಶವಾಗುತ್ತದೆ.

[[೧] ಫಲವನ್ನು ಕೊಡಲು ಪ್ರಾರಂಭವಾಗದಿರುವ ಪೂರ್ವಕರ್ಮ.]

**ಯತ್ಕೃತಂ ಸ್ವಪ್ನವೇಲಾಯಾಂ ಪುಣ್ಯಂ ವಾ ಪಾಪಮುಲ್ಬಣಮ್ ।**
**ಸುಪ್ತೋತ್ಥಿತಸ್ಯ ಕಿಂ ತತ್ ಸ್ಯಾತ್ ಸ್ವರ್ಗಾಯ ನರಕಾಯ ವಾ**
**॥ ೪೪೭ ॥**

**ಸ್ವಪ್ನವೇಲಾಯಾಂ** = ಸ್ವಪ್ನದ ಕಾಲದಲ್ಲಿ **ಪುಣ್ಯಂ ವಾ** = ಪುಣ್ಯವಾಗಲಿ **ಉಲ್ಬಣಂ** = ಭೀಕರವಾದ **ಪಾಪಂ** [**ವಾ**] = ಪಾಪವಾಗಲಿ **ಯತ್** = ಯಾವುದು **ಕೃತಂ** = ಮಾಡಲ್ಪಟ್ಟಿತೊ **ಸುಪ್ತ-ಉತ್ಥಿತಸ್ಯ** = ನಿದ್ರೆಯಿಂದ ಎಚ್ಚತ್ತವನಿಗೆ **ತತ್** = ಅದು **ಸ್ವರ್ಗಾಯ** = ಸ್ವರ್ಗಕ್ಕೆ **ನರಕಾಯ ವಾ** = ನರಕಕ್ಕೆ **ಕಿಂ ಸ್ಯಾತ್** = ಕಾರಣ ವಾಗುವುದೆ?

**೪೪೭.** ಸ್ವಪ್ನದಲ್ಲಿ ಮಾಡಿದ್ದ ಪುಣ್ಯಕರ್ಮವಾಗಲಿ ಅಥವಾ ಭೀಕರ ವಾದ ಪಾಪವಾಗಲಿ ನಿದ್ರೆಯಿಂದ ಎಚ್ಚತ್ತವನಿಗೆ ಸ್ವರ್ಗಕ್ಕೆ ಅಥವಾ ನರಕಕ್ಕೆ ಕಾರಣವಾಗುವುದೆ?

**ಸ್ವಮಸಂಗಮುದಾಸೀನಂ ಪರಿಜ್ಞಾಯ ನಭೋ ಯಥಾ ।**
**ನ ಶ್ಲಿಷ್ಯತೇ ಚ ಯತ್ಕಿಂಚಿತ್ ಕದಾಚಿದ್ಭಾವಿಕರ್ಮಭಿಃ ॥ ೪೪೮ ॥**

**ನಭಃ** = ಆಕಾಶವು **ಯಥಾ** = ಹೇಗೋ [ಹಾಗೆಯೇ] **ಸ್ವಂ** = ತನ್ನ ಆತ್ಮನನ್ನು **ಅಸಂಗಂ** = ಅಸಂಗನೆಂದೂ **ಉದಾಸೀನಂ** = ಉದಾಸೀನನೆಂದೂ **ಪರಿಜ್ಞಾಯ** = ತಿಳಿದುಕೊಂಡು [ಯತಿಯು] **ಭಾವಿಕರ್ಮಭಿಃ** = ಆಗಾಮಿಕರ್ಮಗಳಿಂದ **ಯತ್ಕಿಂಚಿತ್** = ಸ್ವಲ್ಪವಾದರೂ **ಕದಾಚಿತ್** = ಎಂದಿಗೂ **ನ ಶ್ಲಿಷ್ಯತೇ** = ಲಿಪ್ತನಾಗುವುದಿಲ್ಲ.

**೪೪೮.** ಆಕಾಶದಂತೆ ತನ್ನ ಆತ್ಮನು ಅಸಂಗನೆಂದೂ ಉದಾಸೀನನೆಂದೂ ತಿಳಿದುಕೊಂಡ ಯತಿಯು ಆಗಾಮಿಕರ್ಮಗಳಿಂದ[1] ಸ್ವಲ್ಪವೂ ಎಂದಿಗೂ ಲಿಪ್ತನಾಗುವುದಿಲ್ಲ.

[[1] ಆತ್ಮಜ್ಞಾನವಾದಮೇಲೆ ಮುಂದೆ ಮಾಡತಕ್ಕ ಕರ್ಮಗಳಿಂದ.]

**ನ ನಭೋ ಘಟಯೋಗೇನ ಸುರಾಗಂಧೇನ ಲಿಪ್ಯತೇ ।**
**ತಥಾತ್ಮೋಪಾಧಿಯೋಗೇನ ತದ್ಧರ್ಮೈರ್ನೈವ ಲಿಪ್ಯತೇ ॥ ೪೪೯ ॥**

**ನಭಃ** = ಆಕಾಶವು **ಘಟ-ಯೋಗೇನ** = ಗಡಿಗೆಯ ಸಂಬಂಧದ ಮೂಲಕ **ಸುರಾಗಂಧೇನ** = [ಅದರಲ್ಲಿರುವ] ಮದ್ಯದ ವಾಸನೆಯಿಂದ **ನ ಲಿಪ್ಯತೇ** = ಲಿಪ್ತವಾಗುವುದಿಲ್ಲ, **ತಥಾ** = ಹಾಗೆಯೇ **ಆತ್ಮಾ** = ಆತ್ಮನು **ಉಪಾಧಿಯೋಗೇನ** = ಉಪಾಧಿ ಸಂಬಂಧದ ಮೂಲಕ **ತತ್-ಧರ್ಮೈಃ** = ಅದರ ಧರ್ಮಗಳಿಂದ **ನ ಏವ ಲಿಪ್ಯತೇ** = ಲಿಪ್ತನಾಗುವುದೇ ಇಲ್ಲ.

**೪೪೯.** ಹೇಗೆ ಆಕಾಶವು ಗಡಿಗೆಯ ಸಂಬಂಧದ ಮೂಲಕ (ಅದರಲ್ಲಿರುವ) ಮದ್ಯದ ವಾಸನೆಯಿಂದ ಲಿಪ್ತವಾಗುವುದಿಲ್ಲವೊ ಹಾಗೆಯೇ ಆತ್ಮನು ಉಪಾಧಿಯ ಸಂಬಂಧದ ಮೂಲಕ ಅದರ ಧರ್ಮಗಳಿಂದ ಲಿಪ್ತನಾಗುವುದಿಲ್ಲ.

[ಸ್ಥೂಲ-ಸೂಕ್ಷ್ಮ-ಶರೀರಗಳ ಸಂಬಂಧವಿದ್ದರೂ ಅವುಗಳ ಧರ್ಮಗಳಿಂದ ಆತ್ಮನು ಲಿಪ್ತನಾಗುವುದಿಲ್ಲ.]

**ಜ್ಞಾನೋದಯಾತ್ ಪುರಾರಬ್ಧಂ ಕರ್ಮ ಜ್ಞಾನಾನ್ನ ನಶ್ಯತಿ ।**
**ಅದತ್ವಾ ಸ್ವಫಲಂ ಲಕ್ಷ್ಯಮುದ್ದಿಶ್ಯೋತ್ಸೃಷ್ಟಬಾಣವತ್ ॥ ೪೫೦ ॥**

**ಜ್ಞಾನೋದಯಾತ್** = ಜ್ಞಾನವು ಉದಯವಾಗುವುದಕ್ಕಿಂತ **ಪುರಾ** = ಮೊದಲೇ **ಆರಬ್ಧಂ** = [ಫಲವನ್ನು ಕೊಡುವುದಕ್ಕೆ] ಪ್ರಾರಂಭವಾಗಿರುವ **ಕರ್ಮ** = ಕರ್ಮವು **ಜ್ಞಾನಾತ್** = ಜ್ಞಾನದಿಂದ, **ಸ್ವಫಲಂ** = ತನ್ನ ಫಲವನ್ನು **ಅದತ್ವಾ** = ಕೊಡದೆ— **ಲಕ್ಷ್ಯಂ** = ಗುರಿಯನ್ನು **ಉದ್ದಿಶ್ಯ** = ಉದ್ದೇಶಿಸಿ **ಉತ್ಸೃಷ್ಟ-ಬಾಣವತ್** = ಬಿಡಲ್ಪಟ್ಟ ಬಾಣದಂತೆ— **ನ ನಶ್ಯತಿ** = ನಾಶವಾಗುವುದಿಲ್ಲ.

**೪೫೦.** ಜ್ಞಾನೋದಯಕ್ಕೆ ಮೊದಲೇ ಫಲವನ್ನು ಕೊಡುವುದಕ್ಕೆ ಆರಂಭವಾಗಿರುವ ಕರ್ಮವು—ಗುರಿಯನ್ನು ಉದ್ದೇಶಿಸಿ ಬಿಟ್ಟ ಬಾಣವು (ಗುರಿಯನ್ನು ಹೊಡೆಯುವಂತೆ)—ತನ್ನ ಫಲವನ್ನು ಕೊಡದೆ ಜ್ಞಾನದಿಂದ ನಾಶವಾಗುವುದಿಲ್ಲ.

**ವ್ಯಾಘ್ರಬುದ್ಧ್ಯಾ ವಿನಿರ್ಮುಕ್ತೋ ಬಾಣಃ ಪಶ್ಚಾತ್ತು ಗೋಮತೌ ।**
**ನ ತಿಷ್ಠತಿ ಛಿನತ್ತ್ಯೇವ ಲಕ್ಷ್ಯಂ ವೇಗೇನ ನಿರ್ಭರಮ್ ॥ ೪೫೧ ॥**

**ವ್ಯಾಘ್ರಬುದ್ಧ್ಯಾ** = ಹುಲಿ ಎಂಬ ಬುದ್ಧಿಯಿಂದ **ವಿನಿರ್ಮುಕ್ತಃ** = ಬಿಡಲ್ಪಟ್ಟ **ಬಾಣಃ** = ಬಾಣವು **ಪಶ್ಚಾತ್** = ಅನಂತರ **ಗೋಮತೌ ತು** = ಹಸು ಎಂಬ ಬುದ್ಧಿಯುಂಟಾದರೂ **ನ ತಿಷ್ಠತಿ** = ನಿಲ್ಲುವುದಿಲ್ಲ, **ವೇಗೇನ** = ವೇಗದಿಂದ **ನಿರ್ಭರಂ** = ಖಂಡಿತವಾಗಿ **ಲಕ್ಷ್ಯಂ** = ಗುರಿಯನ್ನು **ಛಿನತ್ತಿ ಏವ** = ಹೊಡೆದೇ ಹೊಡೆಯುತ್ತದೆ.

**೪೫೧.** ಹುಲಿಯೆಂಬ ಬುದ್ಧಿಯಿಂದ ಬಿಡಲ್ಪಟ್ಟ ಬಾಣವು ಅನಂತರ 'ಅದು ಹಸು' ಎಂಬ ಬುದ್ಧಿಯುಂಟಾದರೂ ನಿಲ್ಲುವುದಿಲ್ಲ; ವೇಗದಿಂದ ತನ್ನ ಗುರಿಯನ್ನು ಖಂಡಿತವಾಗಿ ಹೊಡೆದೇಬಿಡುತ್ತದೆ.

**ಪ್ರಾರಬ್ಧಂ ಬಲವತ್ತರಂ ಖಲು ವಿದಾಂ ಭೋಗೇನ ತಸ್ಯ ಕ್ಷಯಃ**
**ಸಮ್ಯಗ್‌ಜ್ಞಾನಹುತಾಶನೇನ ವಿಲಯಃ ಪ್ರಾಕ್ಸಂಚಿತಾ-**
**ಗಾಮಿನಾಮ್ ।**
**ಬ್ರಹ್ಮಾತ್ಮೈಕ್ಯಮವೇಕ್ಷ್ಯ ತನ್ಮಯತಯಾ ಯೇ ಸರ್ವದಾ ಸಂಸ್ಥಿತಾ-**
**ಸ್ತೇಷಾಂ ತತ್ತ್ರಿತಯಂ ನ ಹಿ ಕ್ವಚಿದಪಿ ಬ್ರಹ್ಮೈವ ತೇ ನಿರ್ಗುಣಮ್**
**॥ ೪೫೨ ॥**

**ಪ್ರಾರಬ್ಧಂ** = ಪ್ರಾರಬ್ಧಕರ್ಮವು **ಬಲವತ್ತರಂ ಖಲು** = ನಿಜವಾಗಿ ಅತ್ಯಂತ ಬಲವಾದದ್ದು; **ವಿದಾಂ** = ಜ್ಞಾನಿಗಳಿಗೂ **ತಸ್ಯ** = ಅದರ **ಭೋಗೇನ** = ಅನುಭವದಿಂದಲೇ **ಕ್ಷಯಃ** = ನಾಶವು [ಆಗಬೇಕು]; **ಪ್ರಾಕ್-ಸಂಚಿತ-ಆಗಾಮಿನಾಂ** = ಹಿಂದೆ ಸಂಪಾದಿಸಿದ ಮತ್ತು ಮುಂದೆ ಬರುವ [ಕರ್ಮಗಳ] **ವಿಲಯಃ** = ನಾಶವು **ಸಮ್ಯಗ್‌ಜ್ಞಾನ-ಹುತಾಶನೇನ** = ಸಮ್ಯಗ್‌ಜ್ಞಾನವೆಂಬ ಅಗ್ನಿಯಿಂದ [ಆಗುತ್ತದೆ]; **ಯೇ** = ಯಾರು **ಬ್ರಹ್ಮ-ಆತ್ಮ-ಐಕ್ಯಂ** = ಜೀವಾತ್ಮ-ಪರಮಾತ್ಮರ ಐಕ್ಯವನ್ನು **ಅವೇಕ್ಷ್ಯ** = ತಿಳಿದುಕೊಂಡು **ತನ್ಮಯತಯಾ** = ತನ್ಮಯತೆಯಿಂದಲೇ **ಸರ್ವದಾ** = ಯಾವಾಗಲೂ **ಸಂಸ್ಥಿತಾಃ** = ಇರುವರೊ **ತೇಷಾಂ** = ಅವರಿಗೆ **ತತ್ ತ್ರಿತಯಂ** = ಆ ಮೂರೂ **ಕ್ವಚಿತ್ ಅಪಿ** = ಸ್ವಲ್ಪವಾದರೂ **ನ** = ಇರುವುದಿಲ್ಲ; **ಹಿ** = ಏಕೆಂದರೆ **ತೇ** = ಅವರು **ನಿರ್ಗುಣಂ** = ನಿರ್ಗುಣವಾದ **ಬ್ರಹ್ಮ ಏವ** = ಬ್ರಹ್ಮವೇ ಆಗಿರುತ್ತಾರೆ.

**೪೫೨.** ಪ್ರಾರಬ್ಧಕರ್ಮವು ನಿಜವಾಗಿ ಅತ್ಯಂತ ಬಲವಾದದ್ದು. ಜ್ಞಾನಿಗಳು ಅದನ್ನು ಅನುಭವಿಸಿಯೇ ನಾಶಗೊಳಿಸಬೇಕು. ಸಮ್ಯಗ್‌ಜ್ಞಾನವೆಂಬ ಅಗ್ನಿಯಿಂದ ಹಿಂದೆ ಸಂಪಾದಿಸಿದ ಮತ್ತು ಮುಂದೆ ಬರುವ ಕರ್ಮಗಳೆಲ್ಲ ನಾಶವಾಗುತ್ತವೆ. ಆದರೆ ಯಾರು ಜೀವಾತ್ಮ-ಪರಮಾತ್ಮರ ಐಕ್ಯವನ್ನು

ತಿಳಿದುಕೊಂಡು ತನ್ಮಯತೆಯಿಂದಲೇ[೧] ಯಾವಾಗಲೂ ಇರುವರೋ ಅವರಿಗೆ ಈ ಮೂರು ಬಗೆಯ ಕರ್ಮವೂ ಸ್ವಲ್ಪವಾದರೂ ಇರುವುದಿಲ್ಲ; ಏಕೆಂದರೆ ಅವರು ನಿರ್ಗುಣವಾದ ಬ್ರಹ್ಮವೇ ಆಗಿರುತ್ತಾರೆ.

[೧ ಬ್ರಹ್ಮಾತ್ಮಭಾವದಿಂದಲೇ.]

**ಉಪಾಧಿ-ತಾದಾತ್ಮ್ಯ-ವಿಹೀನ-ಕೇವಲ-**
**ಬ್ರಹ್ಮಾತ್ಮನೈವಾತ್ಮನಿ ತಿಷ್ಠತೋ ಮುನೇಃ ।**
**ಪ್ರಾರಬ್ಧ-ಸದ್ಭಾವ-ಕಥಾ ನ ಯುಕ್ತಾ**
**ಸ್ವಪ್ನಾರ್ಥ-ಸಂಬಂಧ-ಕಥೇವ ಜಾಗ್ರತಃ ॥ ೪೫೩ ॥**

**ಉಪಾಧಿ-ತಾದಾತ್ಮ್ಯ-ವಿಹೀನ-ಕೇವಲ-ಬ್ರಹ್ಮ-ಆತ್ಮನಾ ಏವ** = ಉಪಾಧಿಗಳೊಂದಿಗೆ ತಾದಾತ್ಮ್ಯವಿಲ್ಲದೆ ಕೇವಲ ಬ್ರಹ್ಮಭಾವದಿಂದಲೇ **ತಿಷ್ಠತಃ** = ಇರುತ್ತಿರುವ **ಮುನೇಃ**=ಮುನಿಗೆ—**ಜಾಗ್ರತಃ**=ಎಚ್ಚತ್ತಿರುವವನಿಗೆ **ಸ್ವಪ್ನ-ಅರ್ಥ-ಸಂಬಂಧ-ಕಥಾ ಇವ** = ಸ್ವಪ್ನದ ವಿಷಯಗಳ ಸಂಬಂಧದ ಮಾತು ಹೇಗೋ ಹಾಗೆ—**ಪ್ರಾರಬ್ಧ-ಸದ್ಭಾವ-ಕಥಾ** = ಪ್ರಾರಬ್ಧವಿದೆಯೆಂಬ ಮಾತು **ನ ಯುಕ್ತಾ** = ಯುಕ್ತವಲ್ಲ.

**೪೫೩.** ಉಪಾಧಿಗಳೊಂದಿಗೆ ತಾದಾತ್ಮ್ಯವಿಲ್ಲದೆ ಕೇವಲ ಬ್ರಹ್ಮಭಾವದಿಂದಲೇ ಇರುತ್ತಿರುವ ಮುನಿಗೆ—ಎಚ್ಚತ್ತಿರುವವನಿಗೆ ಸ್ವಪ್ನದಲ್ಲಿ ಕಂಡ ವಿಷಯಗಳ ಸಂಬಂಧವಿದೆಯೆಂಬ ಮಾತು ಹೇಗೆ ಯುಕ್ತವಲ್ಲವೋ ಹಾಗೆ—ಪ್ರಾರಬ್ಧವಿದೆಯೆಂಬ ಮಾತು ಯುಕ್ತವಲ್ಲ.

**ನ ಹಿ ಪ್ರಬುದ್ಧಃ ಪ್ರತಿಭಾಸ-ದೇಹೇ**
**ದೇಹೋಪಯೋಗಿನ್ಯಪಿ ಚ ಪ್ರಪಂಚೇ ।**
**ಕರೋತ್ಯಹಂತಾಂ ಮಮತಾಮಿದಂತಾಂ**
**ಕಿಂತು ಸ್ವಯಂ ತಿಷ್ಠತಿ ಜಾಗರೇಣ ॥ ೪೫೪ ॥**

**ಪ್ರಬುದ್ಧಃ** = ಎಚ್ಚತ್ತಿರುವವನು **ಪ್ರತಿಭಾಸದೇಹೇ** = [ಸ್ವಪ್ನದಲ್ಲಿ] ತೋರಿದ ದೇಹದಲ್ಲಾಗಲಿ **ಅಪಿ ಚ** = ಮತ್ತು **ದೇಹ-ಉಪಯೋಗಿನಿ** = ಆ ದೇಹಕ್ಕೆ ಉಪಯೋಗವಾದ **ಪ್ರಪಂಚೇ** = ವಿಷಯವಸ್ತುವಿನಲ್ಲಾಗಲಿ **ಅಹಂತಾಂ** = 'ನಾನು' ಎಂಬ ಭಾವನೆಯನ್ನು **ಮಮತಾಂ** = 'ನನ್ನದು' ಎಂಬ ಭಾವನೆಯನ್ನು **ಇದಂತಾಂ** = 'ಇದು' ಎಂಬ ಭಾವನೆಯನ್ನು **ನ ಹಿ ಕರೋತಿ** = ಮಾಡುವುದಿಲ್ಲ; **ಕಿಂ ತು** = ಮತ್ತೇನೆಂದರೆ **ಸ್ವಯಂ** = ತಾನು **ಜಾಗರೇಣ ತಿಷ್ಠತಿ** = ಎಚ್ಚತ್ತಿರುತ್ತಾನೆ.

**೪೫೪.** (ಸ್ವಪ್ನದಿಂದ) ಎಚ್ಚತ್ತಿರುವವನು (ಸ್ವಪ್ನದಲ್ಲಿ) ತೋರಿದ ದೇಹದಲ್ಲಾಗಲಿ ಅದಕ್ಕೆ ಉಪಯೋಗವಾದ ವಿಷಯವಸ್ತುವಿನಲ್ಲಾಗಲಿ 'ನಾನು'

'ನನ್ನದು' 'ಇದು' ಎಂಬ ಭಾವನೆಯನ್ನು ಮಾಡುವುದಿಲ್ಲ; ಮತ್ತೇನೆಂದರೆ ತನ್ನ ಸ್ವರೂಪದಲ್ಲಿಯೇ ಎಚ್ಚತ್ತಿರುತ್ತಾನೆ.

**ನ ತಸ್ಯ ಮಿಥ್ಯಾರ್ಥಸಮರ್ಥನೇಚ್ಛಾ**
**ನ ಸಂಗ್ರಹಸ್ತಜ್ಜಗತೋಽಪಿ ದೃಷ್ಟಃ ।**
**ತತ್ರಾನುವೃತ್ತಿರ್ಯದಿ ಚೇನ್ಮೃಷಾರ್ಥೇ**
**ನ ನಿದ್ರಯಾ ಮುಕ್ತ ಇತೀಷ್ಯತೇ ಧ್ರುವಮ್ ॥ ೪೫೫ ॥**

**ತಸ್ಯ**=ಅವನಿಗೆ **ಮಿಥ್ಯಾರ್ಥ-ಸಮರ್ಥನ-ಇಚ್ಛಾ**=ಮಿಥ್ಯಾವಸ್ತುಗಳ ಸಮರ್ಥನದಲ್ಲಿ ಬಯಕೆಯು **ನ**=ಇರುವುದಿಲ್ಲ; **ತಜ್ಜಗತಃ**=ಆ ಸ್ವಪ್ನಜಗತ್ತಿನ **ಸಂಗ್ರಹಃ ಅಪಿ**=ಸಂಗ್ರಹವೂ ಕೂಡ **ನ ದೃಷ್ಟಃ**=ಕಂಡುಬರುವುದಿಲ್ಲ; **ತತ್ರ ಮೃಷಾರ್ಥೇ**=ಆ ಅನೃತವಸ್ತುವಿನಲ್ಲಿ **ಅನುವೃತ್ತಿಃ ಚೇತ್ ಯದಿ**=ಅನುವರ್ತನವಿದ್ದರೆ **ಸಃ**=ಅವನು **ನಿದ್ರಯಾ**=ನಿದ್ರೆಯಿಂದ **ನ ಮುಕ್ತಃ ಇತಿ**=ಬಿಡಲ್ಪಟ್ಟವನಲ್ಲವೆಂದು **ಇಷ್ಯತೇ**=ತಿಳಿಯಲ್ಪಡುತ್ತದೆ, **ಧ್ರುವಂ**=ಇದು ನಿಶ್ಚಯವು.

**೪೫೫.** ಅವನಿಗೆ ಮಿಥ್ಯಾವಸ್ತುಗಳ ಸಮರ್ಥನದಲ್ಲಿ ಬಯಕೆಯು ಇರುವುದಿಲ್ಲ; ಆ ಸ್ವಪ್ನಜಗತ್ತಿನ ಸಂಗ್ರಹವೂ ಕೂಡ ಕಂಡುಬರುವುದಿಲ್ಲ. ಆ ಅನೃತವಸ್ತುವಿನಲ್ಲಿ ಅನುವರ್ತನವಿದ್ದರೆ ಅವನು ನಿದ್ರೆಯಿಂದ ಎಚ್ಚತ್ತಿಲ್ಲವೆಂದು ತಿಳಿಯಲ್ಪಡುತ್ತದೆ. ಇದು ನಿಶ್ಚಯವು.

**ತದ್ವತ್ ಪರೇ ಬ್ರಹ್ಮಣಿ ವರ್ತಮಾನಃ**
**ಸದಾತ್ಮನಾ ತಿಷ್ಠತಿ ನಾನ್ಯದೀಕ್ಷತೇ ।**
**ಸ್ಮೃತಿರ್ಯಥಾ ಸ್ವಪ್ನವಿಲೋಕಿತಾರ್ಥೇ**
**ತಥಾ ವಿದಃ ಪ್ರಾಶನ-ಮೋಚನಾದೌ ॥ ೪೫೬ ॥**

**ತದ್ವತ್**=ಹಾಗೆಯೇ **ಪರೇ ಬ್ರಹ್ಮಣಿ**=ಪರಬ್ರಹ್ಮದಲ್ಲಿ **ವರ್ತಮಾನಃ**=ಇರುವವನು **ಸದಾತ್ಮನಾ**=ಬ್ರಹ್ಮಭಾವದಿಂದಲೇ **ತಿಷ್ಠತಿ**=ಇರುತ್ತಾನೆ, **ಅನ್ಯತ್**=ಬೇರೆ ಯಾವುದನ್ನೂ **ನ ಈಕ್ಷತೇ**=ನೋಡುವುದಿಲ್ಲ; **ಸ್ವಪ್ನ-ವಿಲೋಕಿತ-ಅರ್ಥೇ**=ಸ್ವಪ್ನದಲ್ಲಿ ಕಂಡ ವಿಷಯದಲ್ಲಿ **ಸ್ಮೃತಿಃ**=ನೆನಪು **ಯಥಾ**=ಹೇಗೋ **ತಥಾ**=ಹಾಗೆಯೇ **ವಿದಃ**=ಬ್ರಹ್ಮವಿದನಿಗೆ **ಪ್ರಾಶನ-ಮೋಚನ-ಆದೌ**=ಊಟಮಾಡುವುದು ಬಿಡುವುದು ಮೊದಲಾದುವುಗಳಲ್ಲಿ [ನೆನಪು ಮಾತ್ರ ಇರುತ್ತದೆ].

**೪೫೬.** ಹಾಗೆಯೇ ಪರಬ್ರಹ್ಮದಲ್ಲಿ ಲೀನವಾದ ಮನಸ್ಸುಳ್ಳವನು ಬ್ರಹ್ಮಭಾವದಿಂದಲೇ ಇರುತ್ತಾನೆ, ಬೇರೆ ಯಾವುದನ್ನೂ ನೋಡುವುದಿಲ್ಲ. ಸ್ವಪ್ನ

ದಲ್ಲಿ ಕಂಡ ವಿಷಯದ ನೆನಪು ಹೇಗೋ ಹಾಗೆ ಬ್ರಹ್ಮವಿದನಿಗೆ ಊಟಮಾಡು ವುದು ಬಿಡುವುದು ಮೊದಲಾದುವುಗಳಲ್ಲಿ ನೆನಪು ಮಾತ್ರ ಇರುತ್ತದೆ.

**ಕರ್ಮಣಾ ನಿರ್ಮಿತೋ ದೇಹಃ ಪ್ರಾರಬ್ಧಂ ತಸ್ಯ ಕಲ್ಪ್ಯತಾಮ್ ।**
**ನಾನಾದೇರಾತ್ಮನೋ ಯುಕ್ತಂ ನೈವಾತ್ಮಾ ಕರ್ಮ-ನಿರ್ಮಿತಃ**
**॥ ೪೫೭ ॥**

**ದೇಹಃ**=ದೇಹವು **ಕರ್ಮಣಾ**=ಕರ್ಮದಿಂದ **ನಿರ್ಮಿತಃ**=ನಿರ್ಮಿತವಾಗಿದೆ; **ತಸ್ಯ**=ಅದಕ್ಕೆ **ಪ್ರಾರಬ್ಧಂ**=ಪ್ರಾರಬ್ಧವು **ಕಲ್ಪ್ಯತಾಂ**=ಕಲ್ಪಿಸಲ್ಪಡಲಿ; • [ಆದರೆ, **ಅನಾದೇಃ**=ಅನಾದಿಯಾದ **ಆತ್ಮನಃ**=ಆತ್ಮನಿಗೆ **ನ ಯುಕ್ತಂ**=ಯುಕ್ತವಲ್ಲ. **ಆತ್ಮಾ**=ಆತ್ಮನು **ಕರ್ಮ-ನಿರ್ಮಿತಃ ನ ಏವ**=ಕರ್ಮದಿಂದ ನಿರ್ಮಿತನೇ ಆಗಿಲ್ಲ]

**೪೫೭.** ದೇಹವು ಕರ್ಮದಿಂದ ನಿರ್ಮಿತವಾಗಿದೆ; ಅದಕ್ಕೆ ಪ್ರಾರಬ್ಧ ವನ್ನು ಕಲ್ಪಿಸಬಹುದು. ಆದರೆ ಅನಾದಿಯಾದ ಆತ್ಮನಿಗೆ ಅದನ್ನು ಕಲ್ಪಿಸು ವುದು ಯುಕ್ತವಲ್ಲ; (ಏಕೆಂದರೆ) ಆತ್ಮನು ಕರ್ಮದಿಂದ ನಿರ್ಮಿತನೇ ಆಗಿಲ್ಲ.

**ಅಜೋ ನಿತ್ಯಃ ಶಾಶ್ವತ ಇತಿ ಬ್ರೂತೇ ಶ್ರುತಿರಮೋಘವಾಕ್ ।**
**ತದಾತ್ಮನಾ ತಿಷ್ಠತೋಽಸ್ಯ ಕುತಃ ಪ್ರಾರಬ್ಧ-ಕಲ್ಪನಾ ॥ ೪೫೮ ॥**

**ಅಜಃ**=ಜನ್ಮರಹಿತನು **ನಿತ್ಯಃ**=ನಿತ್ಯನು **ಶಾಶ್ವತಃ**=ಶಾಶ್ವತನು **ಇತಿ**=ಎಂದು **ಅಮೋಘವಾಕ್**=ಸತ್ಯವಚನವುಳ್ಳ **ಶ್ರುತಿಃ**=ಶ್ರುತಿಯು **ಬ್ರೂತೇ**=ಹೇಳುತ್ತದೆ; **ತದಾತ್ಮನಾ**=ಆ ಆತ್ಮಸ್ವರೂಪದಿಂದ **ತಿಷ್ಠತಃ**=ಇರುತ್ತಿರುವ **ಅಸ್ಯ**=ಇವನಿಗೆ **ಪ್ರಾರಬ್ಧ-ಕಲ್ಪನಾ**=ಪ್ರಾರಬ್ಧದ ಕಲ್ಪನೆಯು **ಕುತಃ**=ಎಲ್ಲಿಂದ ಬರುವುದು?

**೪೫೮.** (ಆತ್ಮನು) ಜನ್ಮರಹಿತನು ನಿತ್ಯನು ಶಾಶ್ವತನು—ಎಂದು ಸತ್ಯ ವಚನವುಳ್ಳ ಶ್ರುತಿಯು ಹೇಳುತ್ತದೆ.[೧] ಆ ಆತ್ಮಸ್ವರೂಪದಿಂದ ಇರುತ್ತಿರುವ ಯೋಗಿಗೆ ಪ್ರಾರಬ್ಧದ ಸಂಬಂಧ ಎಲ್ಲಿಂದ ಬರುವುದು?

[[೧] **ಅಜೋ ನಿತ್ಯಃ ಶಾಶ್ವತೋಽಯಂ ಪುರಾಣಃ** (ಕಠ ಉ. ೧. ೨. ೧೮). ]

**ಪ್ರಾರಬ್ಧಂ ಸಿಧ್ಯತಿ ತದಾ ಯದಾ ದೇಹಾತ್ಮನಾ ಸ್ಥಿತಿಃ ।**
**ದೇಹಾತ್ಮಭಾವೋ ನೈವೇಷ್ಟಃ ಪ್ರಾರಬ್ಧಂ ತ್ಯಜತಾಮತಃ ॥ ೪೫೯ ॥**

**ಯದಾ**=ಯಾವಾಗ **ದೇಹ-ಆತ್ಮನಾ**=ದೇಹಾತ್ಮಭಾವದಿಂದ **ಸ್ಥಿತಿಃ**=ಸ್ಥಿತಿಯು [ಇರುವುದೊ] **ತದಾ**=ಆಗ **ಪ್ರಾರಬ್ಧಂ**=ಪ್ರಾರಬ್ಧವು **ಸಿಧ್ಯತಿ**=ಸಿದ್ಧಿಸುವುದು; **ದೇಹಾತ್ಮಭಾವಃ**=ದೇಹಾತ್ಮಭಾವವು **ನ ಏವ ಇಷ್ಟಃ**=ಇಷ್ಟವೇ ಇಲ್ಲ; **ಅತಃ**=ಆದುದರಿಂದ **ಪ್ರಾರಬ್ಧಂ**=ಪ್ರಾರಬ್ಧವು **ತ್ಯಜತಾಂ**=ಬಿಡಲ್ಪಡಲಿ.

**೪೫೯.** ದೇಹವೇ ಆತ್ಮನು ಎಂದು ತಿಳಿದಿರುವವರೆಗೆ ಪ್ರಾರಬ್ಧವು ಸಿದ್ಧಿಸುವುದು. ಆದರೆ (ಸ್ಥಿತಪ್ರಜ್ಞನಿಗೆ) ದೇಹಾತ್ಮಭಾವವಿರುವುದೆಂದು ಯಾರೂ ಒಪ್ಪಿಕೊಳ್ಳುವುದಿಲ್ಲ. ಆದುದರಿಂದ (ಆತ್ಮನಲ್ಲಿ) ಪ್ರಾರಬ್ಧವನ್ನು ಕಲ್ಪಿಸಕೂಡದು.

**ಶರೀರಸ್ಯಾಪಿ ಪ್ರಾರಬ್ಧಕಲ್ಪನಾ ಭ್ರಾಂತಿರೇವ ಹಿ ।**
**ಅಧ್ಯಸ್ತಸ್ಯ ಕುತಃ ಸತ್ತ್ವಮಸತ್ತ್ವಸ್ಯ ಕುತೋ ಜನಿಃ ।**
**ಅಜಾತಸ್ಯ ಕುತೋ ನಾಶಃ ಪ್ರಾರಬ್ಧಮಸತಃ ಕುತಃ ॥ ೪೬೦ ॥**

**ಶರೀರಸ್ಯ ಅಪಿ** = ಶರೀರಕ್ಕೂ **ಪ್ರಾರಬ್ಧಕಲ್ಪನಾ** = ಪ್ರಾರಬ್ಧವನ್ನು ಕಲ್ಪಿಸುವುದು **ಭ್ರಾಂತಿಃ ಏವ** = ಭ್ರಾಂತಿಯೇ; **ಹಿ** = ಏಕೆಂದರೆ **ಅಧ್ಯಸ್ತಸ್ಯ** = ಆರೋಪಿತವಾಗಿರುವುದಕ್ಕೆ **ಸತ್ತ್ವಂ** = ಅಸ್ತಿತ್ವವು **ಕುತಃ** = ಎಲ್ಲಿಂದ ಬರುವುದು? **ಅಸತ್ತ್ವಸ್ಯ** = ಅಸ್ತಿತ್ವವಿಲ್ಲದಿರುವುದಕ್ಕೆ **ಜನಿಃ** = ಜನ್ಮವು **ಕುತಃ? ಅಜಾತಸ್ಯ** = ಹುಟ್ಟದಿರುವುದಕ್ಕೆ **ನಾಶಃ** = ನಾಶವು **ಕುತಃ? ಅಸತಃ** = ಇಲ್ಲದಿರುವುದಕ್ಕೆ **ಪ್ರಾರಬ್ಧಂ** = ಪ್ರಾರಬ್ಧವು **ಕುತಃ?**

**೪೬೦.** ಶರೀರಕ್ಕೂ ಕೂಡ ಪ್ರಾರಬ್ಧವನ್ನು ಕಲ್ಪಿಸುವುದು ಭ್ರಾಂತಿಯೇ ಸರಿ; ಏಕೆಂದರೆ ಆರೋಪಿತವಾಗಿರುವುದಕ್ಕೆ ಅಸ್ತಿತ್ವವು ಎಲ್ಲಿಂದ ಬರುವುದು? ಅಸ್ತಿತ್ವವಿಲ್ಲದಿರುವುದಕ್ಕೆ ಜನ್ಮವು ಎಲ್ಲಿಂದ ಬರುವುದು? ಜನ್ಮವಿಲ್ಲದಿರುವುದಕ್ಕೆ ನಾಶವು ಎಲ್ಲಿಂದ ಬರುವುದು? ಇಲ್ಲದೆ ಇರುವುದಕ್ಕೆ ಪ್ರಾರಬ್ಧವು ಎಲ್ಲಿಂದ ಬರುವುದು?

**ಜ್ಞಾನೇನಾಜ್ಞಾನಕಾರ್ಯಸ್ಯ ಸಮೂಲಸ್ಯ ಲಯೋ ಯದಿ ।**
**ತಿಷ್ಠತ್ಯಯಂ ಕಥಂ ದೇಹ ಇತಿ ಶಂಕಾವತೋ ಜಡಾನ್ ॥ ೪೬೧ ॥**

**ಸಮಾಧಾತುಂ ಬಾಹ್ಯದೃಷ್ಟ್ಯಾ ಪ್ರಾರಬ್ಧಂ ವದತಿ ಶ್ರುತಿಃ ।**
**ನ ತು ದೇಹಾದಿ-ಸತ್ಯತ್ವ-ಬೋಧನಾಯ ವಿಪಶ್ಚಿತಾಮ್ ॥ ೪೬೨ ॥**

**ಜ್ಞಾನೇನ** = ಜ್ಞಾನದಿಂದ **ಸಮೂಲಸ್ಯ** = ಮೂಲವಾದ ಅಜ್ಞಾನದೊಂದಿಗೆ **ಅಜ್ಞಾನ-ಕಾರ್ಯಸ್ಯ** = ಅಜ್ಞಾನದ ಕಾರ್ಯದ **ಲಯಃ ಯದಿ** = ನಾಶವಾಗುವುದಾದರೆ **ಅಯಂ ದೇಹಃ** = ಈ ದೇಹವು **ಕಥಂ** = ಹೇಗೆ **ತಿಷ್ಠತಿ** = ನಿಂತಿರುವುದು **ಇತಿ** = ಹೀಗೆಂದು **ಶಂಕಾವತಃ** = ಸಂದೇಹವುಳ್ಳ **ಜಡಾನ್** = ಜಡರನ್ನು ಕುರಿತು **ಸಮಾಧಾತುಂ** = ಸಮಾಧಾನಪಡಿಸಲು **ಬಾಹ್ಯದೃಷ್ಟ್ಯಾ** = ಹೊರಗಿನ ದೃಷ್ಟಿಯಿಂದ **ಶ್ರುತಿಃ** = ಶ್ರುತಿಯು **ಪ್ರಾರಬ್ಧಂ** = ಪ್ರಾರಬ್ಧವನ್ನು **ವದತಿ** = ಹೇಳುತ್ತದೆ, **ವಿಪಶ್ಚಿತಾಂ** = ಜ್ಞಾನಿಗಳಿಗೆ **ದೇಹಾದಿ-ಸತ್ಯತ್ವ ಬೋಧನಾಯ** = ದೇಹಾದಿಗಳ ಅಸ್ತಿತ್ವವನ್ನು ಉಪದೇಶಿಸಲು **ನ ತು** = ಅಲ್ಲ.

**೪೬೧-೪೬೨.** ಮೂಲವಾದ ಅಜ್ಞಾನದೊಂದಿಗೆ ಅದರ ಕಾರ್ಯವು ಜ್ಞಾನದಿಂದ ನಾಶವಾಗುವುದಾದರೆ 'ಈ ದೇಹವು ಹೇಗೆ ನಿಂತಿರುವುದು?' ಎಂದು ಸಂದೇಹಪಡುವ ಜಡರನ್ನು ಸಮಾಧಾನಪಡಿಸಲು ಶ್ರುತಿಯು ಬಾಹ್ಯ ದೃಷ್ಟಿಯಿಂದ ಪ್ರಾರಬ್ಧವನ್ನು ಹೇಳುತ್ತದೆಯೇ ಹೊರತು ಜ್ಞಾನಿಗಳಿಗೆ ದೇಹವೇ ಮೊದಲಾದುವು ನಿಜವಾಗಿಯೂ ಇರುವುವೆಂದು ಉಪದೇಶಿಸುವುದಕ್ಕಲ್ಲ.

**ಪರಿಪೂರ್ಣಮನಾದ್ಯಂತಮಪ್ರಮೇಯಮವಿಕ್ರಿಯಮ್ ।**
**ಏಕಮೇವಾದ್ವಯಂ ಬ್ರಹ್ಮ ನೇಹ ನಾನಾಸ್ತಿ ಕಿಂಚನ ॥ ೪೬೩ ॥**

**ಬ್ರಹ್ಮ**=ಬ್ರಹ್ಮವು **ಪರಿಪೂರ್ಣಂ**=ಪರಿಪೂರ್ಣವಾದುದು, **ಅನಾದಿ-ಅಂತಂ**=ಆದಿ-ಅಂತಗಳಿಲ್ಲದ್ದು, **ಅಪ್ರಮೇಯಂ**=ಪ್ರಮಾಣಗಳಿಗೆ ಗೋಚರವಲ್ಲದ್ದು, **ಅವಿಕ್ರಿಯಂ**=ವಿಕಾರವಿಲ್ಲದ್ದು, **ಏಕಮ್ ಏವ**=ಸಜಾತೀಯ-ಭೇದವಿಲ್ಲದ್ದು, **ಅದ್ವಯಂ**=ವಿಜಾತೀಯ-ಭೇದವಿಲ್ಲದ್ದು; **ಇಹ**=ಈ ಬ್ರಹ್ಮದಲ್ಲಿ **ನಾನಾ**=ನಾನಾತ್ವವು **ಕಿಂಚನ**=ಸ್ವಲ್ಪವೂ **ನ ಅಸ್ತಿ**=ಇಲ್ಲ.

**೪೬೩.** ಬ್ರಹ್ಮವು ಪರಿಪೂರ್ಣವಾದದ್ದು, ಆದಿ-ಅಂತಗಳಿಲ್ಲದ್ದು, ಪ್ರಮಾಣಗಳಿಗೆ ಗೋಚರವಲ್ಲದ್ದು, ವಿಕಾರವಿಲ್ಲದ್ದು, ಸಜಾತೀಯ-ಭೇದವಿಲ್ಲದ್ದು, ವಿಜಾತೀಯ-ಭೇದವಿಲ್ಲದ್ದು; ಈ ಬ್ರಹ್ಮದಲ್ಲಿ ನಾನಾತ್ವವು ಸ್ವಲ್ಪವೂ ಇಲ್ಲ.

**ಸದ್ಘನಂ ಚಿದ್ಘನಂ ನಿತ್ಯಮಾನಂದಘನಮಕ್ರಿಯಮ್ ।**
**ಏಕಮೇವಾದ್ವಯಂ ಬ್ರಹ್ಮ ನೇಹ ನಾನಾಸ್ತಿ ಕಿಂಚನ ॥ ೪೬೪ ॥**

**ಬ್ರಹ್ಮ**=ಬ್ರಹ್ಮವು **ಸದ್‌ಘನಂ**=ಸತ್-ಶರೀರವು, **ಚಿದ್‌ಘನಂ**=ಚಿತ್-ಶರೀರವು, **ನಿತ್ಯಂ**=ನಿತ್ಯವೂ **ಆನಂದಘನಂ**=ಆನಂದಶರೀರವು, **ಅಕ್ರಿಯಂ**=ನಿಷ್ಕ್ರಿಯವು; [ಉಳಿದುದು ೪೬೩ರಂತೆ].

**೪೬೪.** ಬ್ರಹ್ಮವು ಸಚ್ಛರೀರವು, ಚಿಚ್ಛರೀರವು, ನಿತ್ಯವೂ ಆನಂದಶರೀರವು,[1] ನಿಷ್ಕ್ರಿಯವು; ಏಕವೂ ಅದ್ವಯವೂ ಆಗಿರುವುದು; ಈ ಬ್ರಹ್ಮದಲ್ಲಿ ನಾನಾತ್ವವು ಸ್ವಲ್ಪವೂ ಇಲ್ಲ.

[[1] ಎಂದರೆ ಸಚ್ಚಿದಾನಂದಸ್ವರೂಪವು.]

**ಪ್ರತ್ಯಗೇಕರಸಂ ಪೂರ್ಣಮನಂತಂ ಸರ್ವತೋಮುಖಮ್ ।**
**ಏಕಮೇವಾದ್ವಯಂ ಬ್ರಹ್ಮ ನೇಹ ನಾನಾಸ್ತಿ ಕಿಂಚನ ॥ ೪೬೫ ॥**

**ಬ್ರಹ್ಮ**=ಬ್ರಹ್ಮವು **ಪ್ರತ್ಯಕ್**=[ಎಲ್ಲರ] ಒಳಗಿರತಕ್ಕದ್ದು, **ಏಕರಸಂ**=ಸಮರಸವಾದದ್ದು, **ಪೂರ್ಣಂ**=ಪೂರ್ಣವು, **ಅನಂತಂ**=ಅನಂತವು, **ಸರ್ವತೋಮುಖಂ**=ಸರ್ವವ್ಯಾಪಿಯು; [ಉಳಿದುದು ಹಿಂದಿನಂತೆಯೆ].

**೪೬೫.** ಬ್ರಹ್ಮವು ಎಲ್ಲರ ಒಳಗಿರತಕ್ಕದ್ದು, ಸಮರಸವಾದದ್ದು, ಪೂರ್ಣವು, ಅನಂತವು, ಸರ್ವವ್ಯಾಪಿಯು; ಏಕವೂ ಅದ್ವಯವೂ ಆಗಿರುವುದು. ಈ ಬ್ರಹ್ಮದಲ್ಲಿ ನಾನಾತ್ವವು ಸ್ವಲ್ಪವೂ ಇಲ್ಲ.

**ಅಹೇಯಮನುಪಾದೇಯಮನಾಧೇಯಮನಾಶ್ರಯಮ್ ।**
**ಏಕಮೇವಾದ್ವಯಂ ಬ್ರಹ್ಮ ನೇಹ ನಾನಾಸ್ತಿ ಕಿಂಚನ ॥ ೪೬೬ ॥**

**ಬ್ರಹ್ಮ**=ಬ್ರಹ್ಮವು **ಅಹೇಯಂ**=ಬಿಡತಕ್ಕದ್ದಲ್ಲ, **ಅನುಪಾದೇಯಂ**=ತೆಗೆದುಕೊಳ್ಳತಕ್ಕದ್ದಲ್ಲ, **ಅನಾಧೇಯಂ**=ಆಧೇಯವಿಲ್ಲದ್ದು, **ಅನಾಶ್ರಯಂ**=ಆಧಾರವಿಲ್ಲದ್ದು; [ಉಳಿದುದು ಹಿಂದಿನಂತೆಯೆ].

**೪೬೬.** ಬ್ರಹ್ಮವನ್ನು ಬಿಡುವುದಕ್ಕಾಗುವುದಿಲ್ಲ,[೧] ತೆಗೆದುಕೊಳ್ಳುವುದಕ್ಕಾಗುವುದಿಲ್ಲ; ಅದಕ್ಕೆ ಆಧೇಯವಾಗಲಿ[೨] ಆಧಾರವಾಗಲಿ ಇಲ್ಲ; ಇದು ಏಕವೂ ಅದ್ವಯವೂ ಆಗಿರುವುದು. ಈ ಬ್ರಹ್ಮದಲ್ಲಿ ನಾನಾತ್ವವು ಸ್ವಲ್ಪವೂ ಇಲ್ಲ.

[[೧] ಏಕೆಂದರೆ ಇದು ಎಲ್ಲದರ ಆತ್ಮನಾಗಿರುವುದು.
[೨] ಪ್ರಪಂಚವೇ ಇಲ್ಲದಿರುವುದರಿಂದ ಇದು ಯಾವುದಕ್ಕೂ ಆಧಾರವಾಗಲಾರದು.]

**ನಿರ್ಗುಣಂ ನಿಷ್ಕಲಂ ಸೂಕ್ಷ್ಮಂ ನಿರ್ವಿಕಲ್ಪಂ ನಿರಂಜನಮ್ ।**
**ಏಕಮೇವಾದ್ವಯಂ ಬ್ರಹ್ಮ ನೇಹ ನಾನಾಸ್ತಿ ಕಿಂಚನ ॥ ೪೬೭ ॥**

**ಬ್ರಹ್ಮ**=ಬ್ರಹ್ಮವು **ನಿರ್ಗುಣಂ**=ಗುಣರಹಿತವಾದದ್ದು, **ನಿಷ್ಕಲಂ**=ಅವಯವರಹಿತವಾದದ್ದು, **ಸೂಕ್ಷ್ಮಂ**=ಸೂಕ್ಷ್ಮವಾದದ್ದು, **ನಿರ್ವಿಕಲ್ಪಂ**=ವಿಕಲ್ಪರಹಿತವಾದದ್ದು, **ನಿರಂಜನಂ**=ಅಂಜನ-ರಹಿತವಾದದ್ದು; [ಉಳಿದುದು ಹಿಂದಿನಂತೆಯೆ].

**೪೬೭.** ಬ್ರಹ್ಮವು ನಿರ್ಗುಣವೂ ನಿಷ್ಕಲವೂ[೧] ಸೂಕ್ಷ್ಮವೂ ನಿರ್ವಿಕಲ್ಪವೂ ನಿರಂಜನವೂ[೨] ಏಕವೂ ಅದ್ವಯವೂ ಆಗಿರುವುದು. ಈ ಬ್ರಹ್ಮದಲ್ಲಿ ನಾನಾತ್ವವು ಸ್ವಲ್ಪವೂ ಇಲ್ಲ.

[[೧] ಪ್ರಾಣವೇ ಮೊದಲಾದ ಹದಿನಾರು ಕಲೆಗಳಿಲ್ಲದ್ದು.
[೨] ಅವಿದ್ಯೆಯೆಂಬ ಆವರಣದಿಂದ ವರ್ಜಿತವಾದದ್ದು.]

**ಅನಿರೂಪ್ಯ-ಸ್ವರೂಪಂ ಯನ್ಮನೋವಾಚಾಮಗೋಚರಮ್ ।**
**ಏಕಮೇವಾದ್ವಯಂ ಬ್ರಹ್ಮ ನೇಹ ನಾನಾಸ್ತಿ ಕಿಂಚನ ॥ ೪೬೮ ॥**

**ಯತ್ ಬ್ರಹ್ಮ** = ಯಾವ ಬ್ರಹ್ಮವು **ಅನಿರೂಪ್ಯ-ಸ್ವರೂಪಂ** = ಇಂಥದ್ದೆಂದು ನಿರೂಪಿಸಲಾಗದ ಸ್ವರೂಪವುಳ್ಳದ್ದು, **ಮನೋವಾಚಾಂ** = ಮನಸ್ಸುವಾಕ್ಕುಗಳಿಗೆ **ಅಗೋಚರಂ** = ಅಗೋಚರವಾದದ್ದು; [ಉಳಿದುದು ಹಿಂದಿನಂತೆಯೆ].

**೪೬೮.** ಬ್ರಹ್ಮವು ಇಂಥದ್ದೆಂದು ನಿರೂಪಿಸಲಾಗದ ಸ್ವರೂಪವುಳ್ಳದ್ದು, ಮನಸ್ಸಿಗೂ ವಾಕ್ಕುಗಳಿಗೂ ಅಗೋಚರವಾದದ್ದು; ಏಕವೂ ಅದ್ವಯವೂ ಆಗಿರುವುದು. ಈ ಬ್ರಹ್ಮದಲ್ಲಿ ನಾನಾತ್ವವು ಸ್ವಲ್ಪವೂ ಇಲ್ಲ.

**ಸತ್ ಸಮೃದ್ಧಂ ಸ್ವತಃಸಿದ್ಧಂ ಶುದ್ಧಂ ಬುದ್ಧಮನೀದೃಶಮ್ ।**
**ಏಕಮೇವಾದ್ವಯಂ ಬ್ರಹ್ಮ ನೇಹ ನಾನಾಸ್ತಿ ಕಿಂಚನ ॥ ೪೬೯ ॥**

**ಬ್ರಹ್ಮ** = ಬ್ರಹ್ಮವು **ಸತ್** = ಸತ್ಸ್ವರೂಪವಾದದ್ದು, **ಸಮೃದ್ಧಂ** = ಸಮೃದ್ಧವಾದದ್ದು, **ಸ್ವತಃಸಿದ್ಧಂ** = ಸ್ವತಃಸಿದ್ಧವಾದದ್ದು, **ಶುದ್ಧಂ** = ಶುದ್ಧವಾದದ್ದು, **ಬುದ್ಧಂ** = ಜ್ಞಾನಸ್ವರೂಪವಾದದ್ದು, **ಅನೀದೃಶಂ** = ಅಸದೃಶವಾದದ್ದು; [ಉಳಿದುದು ಹಿಂದಿನಂತೆಯೆ].

**೪೬೯.** ಬ್ರಹ್ಮವು ಸತ್‌ಸ್ವರೂಪವೂ ಸಮೃದ್ಧವೂ[೧] ಸ್ವತಃಸಿದ್ಧವೂ[೨] ಶುದ್ಧವೂ ಜ್ಞಾನಸ್ವರೂಪವೂ ಅಸದೃಶವೂ ಏಕವೂ ಅದ್ವಯವೂ ಆದದ್ದು. ಈ ಬ್ರಹ್ಮದಲ್ಲಿ ನಾನಾತ್ವವು ಸ್ವಲ್ಪವೂ ಇಲ್ಲ.

[[೧] ಅಖಂಡಾನಂದದಿಂದ ಪೂರ್ಣವಾಗಿದೆ.
[೨] ಎಲ್ಲಾ ಪ್ರಮಾಣಗಳ ಪ್ರವೃತ್ತಿಗೆ ಕಾರಣವಾಗಿದೆ.]

**ನಿರಸ್ತ-ರಾಗಾ ವಿನಿರಸ್ತ-ಭೋಗಾಃ**
**ಶಾಂತಾಃ ಸುದಾಂತಾ ಯತಯೋ ಮಹಾಂತಃ ।**
**ವಿಜ್ಞಾಯ ತತ್ತ್ವಂ ಪರಮೇತದಂತೇ**
**ಪ್ರಾಪ್ತಾಃ ಪರಾಂ ನಿರ್ವೃತಿಮಾತ್ಮಯೋಗಾತ್ ॥ ೪೭೦ ॥**

**ನಿರಸ್ತ-ರಾಗಾಃ** = ವಿಷಯೇಚ್ಛೆಗಳನ್ನು ಬಿಟ್ಟವರಾದ **ವಿನಿರಸ್ತ-ಭೋಗಾಃ** = ಭೋಗಗಳನ್ನು ಬಿಟ್ಟವರಾದ **ಶಾಂತಾಃ** = ಶಾಂತರಾದ **ಸುದಾಂತಾಃ** = ಜಿತೇಂದ್ರಿಯರಾದ **ಮಹಾಂತಃ** = ಮಹನೀಯರಾದ **ಯತಯಃ** = ಯತಿಗಳು **ಏತತ್ ಪರಂ ತತ್ತ್ವಂ** = ಈ ಪರಮತತ್ತ್ವವನ್ನು **ವಿಜ್ಞಾಯ** = ತಿಳಿದುಕೊಂಡು **ಅಂತೇ** = ಕೊನೆಯಲ್ಲಿ **ಆತ್ಮಯೋಗಾತ್** = ಆತ್ಮಜ್ಞಾನ ಪ್ರಸಾದದಿಂದ **ಪರಾಂ** = ಶ್ರೇಷ್ಠವಾದ **ನಿರ್ವೃತಿಂ** = ಆನಂದವನ್ನು **ಪ್ರಾಪ್ತಾಃ** = ಹೊಂದಿದವರಾಗುತ್ತಾರೆ.

**೪೨೦.** ವಿಷಯೇಚ್ಛೆಗಳನ್ನು ತೊರೆದು, ಭೋಗಗಳನ್ನು ತ್ಯಜಿಸಿ, ಶಾಂತರಾಗಿ, ಇಂದ್ರಿಯಗಳನ್ನು ಪೂರ್ಣವಾಗಿ ನಿಗ್ರಹಿಸಿದ ಮಹನೀಯರಾದ ಯತಿಗಳು ಈ ಪರತತ್ತ್ವವನ್ನು ತಿಳಿದುಕೊಂಡು, ಕಡೆಗೆ ಆತ್ಮಜ್ಞಾನ ಪ್ರಸಾದದಿಂದ ಪರಮಾನಂದವನ್ನೇ ಹೊಂದಿರುತ್ತಾರೆ.

**ಭವಾನಪೀದಂ ಪರತತ್ತ್ವಮಾತ್ಮನಃ**
**ಸ್ವರೂಪಮಾನಂದಘನಂ ವಿಚಾರ್ಯ ।**
**ವಿಧೂಯ ಮೋಹಂ ಸ್ವಮನಃಪ್ರಕಲ್ಪಿತಂ**
**ಮುಕ್ತಃ ಕೃತಾರ್ಥೋ ಭವತು ಪ್ರಬುದ್ಧಃ ॥ ೪೨೧ ॥**

**ಭವಾನ್ ಅಪಿ**=ನೀನು ಕೂಡ **ಆತ್ಮನಃ**=ಆತ್ಮನ **ಸ್ವರೂಪಂ**=ಸ್ವರೂಪವಾದ **ಆನಂದಘನಂ**=ಆನಂದಘನವಾದ **ಪರತತ್ತ್ವಂ**=ಪರತತ್ತ್ವವನ್ನು **ವಿಚಾರ್ಯ**=ವಿವೇಚಿಸಿ, **ಸ್ವ-ಮನಃ-ಪ್ರಕಲ್ಪಿತಂ**=ನಿನ್ನ ಮನಸ್ಸಿನಲ್ಲಿ ಕಲ್ಪಿತವಾಗಿರುವ **ಮೋಹಂ**=ಮೋಹವನ್ನು **ವಿಧೂಯ**=ಕೊಡವಿಕೊಂಡು, **ಪ್ರಬುದ್ಧಃ**=ಜ್ಞಾನಿಯಾಗಿ **ಮುಕ್ತಃ**=ಮುಕ್ತನಾಗಿ **ಕೃತಾರ್ಥಃ ಭವತು**=ಕೃತಾರ್ಥನಾಗು.

**೪೨೧.** ನೀನು ಕೂಡ ಈ ಆತ್ಮನ ಸ್ವರೂಪವಾಗಿರುವ ಆನಂದಘನವಾದ ಪರತತ್ತ್ವವನ್ನು ವಿವೇಚಿಸಿ, ನಿನ್ನ ಮನಸ್ಸಿನಲ್ಲಿ ಕಲ್ಪಿತವಾಗಿರುವ ಮೋಹವನ್ನು ಕೊಡವಿಕೊಂಡು, ಜ್ಞಾನಿಯೂ ಮುಕ್ತನೂ ಆಗಿ ಕೃತಾರ್ಥನಾಗು.

**ಸಮಾಧಿನಾ ಸಾಧು ವಿನಿಶ್ಚಲಾತ್ಮನಾ**
**ಪಶ್ಯಾತ್ಮತತ್ತ್ವಂ ಸ್ಫುಟಬೋಧ-ಚಕ್ಷುಷಾ ।**
**ನಿಃಸಂಶಯಂ ಸಮ್ಯಗವೇಕ್ಷಿತಶ್ಚೇ-**
**ಚ್ಛ್ರುತಃ ಪದಾರ್ಥೋ ನ ಪುನರ್ವಿಕಲ್ಪ್ಯತೇ ॥ ೪೨೨ ॥**

**ಸಾಧು**=ಚೆನ್ನಾಗಿ **ವಿನಿಶ್ಚಲ-ಆತ್ಮನಾ**=ನಿಶ್ಚಲವಾದ ಮನಸ್ಸಿನಿಂದ ಕೂಡಿರುವ **ಸಮಾಧಿನಾ**=ಸಮಾಧಿಯಿಂದ **ಸ್ಫುಟ-ಬೋಧ-ಚಕ್ಷುಷಾ** = ಸ್ಫುಟವಾದ ಜ್ಞಾನದೃಷ್ಟಿಯಿಂದ **ಆತ್ಮತತ್ತ್ವಂ**=ಆತ್ಮತತ್ತ್ವವನ್ನು **ಪಶ್ಯ**=ಸಾಕ್ಷಾತ್ಕರಿಸು; **ಶ್ರುತಃ**=ಶ್ರವಣಮಾಡಿದ **ಪದಾರ್ಥಃ**=ಪದಾರ್ಥವು **ಸಮ್ಯಕ್**=ಚೆನ್ನಾಗಿ **ನಿಃಸಂಶಯಂ**=ಸಂಶಯವಿಲ್ಲದೆ **ಅವೇಕ್ಷಿತಃ ಚೇತ್**=ಗ್ರಹಿಸಲ್ಪಟ್ಟರೆ **ಪುನಃ**=ಮತ್ತೆ **ನ ವಿಕಲ್ಪ್ಯತೇ**=ಸಂಶಯವನ್ನುಂಟುಮಾಡುವುದಿಲ್ಲ.

**೪೨೨.** ಚೆನ್ನಾಗಿ ನಿಶ್ಚಲವಾದ ಮನಸ್ಸಿನಿಂದ ಕೂಡಿದ ಸಮಾಧಿಯಿಂದ ಸ್ಫುಟವಾದ ಜ್ಞಾನದೃಷ್ಟಿಯ ಮೂಲಕ ಆತ್ಮತತ್ತ್ವವನ್ನು ಸಾಕ್ಷಾತ್ಕರಿಸು.

(ಗುರುವಿನಿಂದ ಉಪದೇಶಿಸಲ್ಪಟ್ಟ) ಪದಗಳ ಅರ್ಥವನ್ನು ಚೆನ್ನಾಗಿ ಕೇಳಿದರೆ ಪುನಃ ಸಂಶಯವುಂಟಾಗುವುದಿಲ್ಲ.

**ಸ್ವಸ್ಯಾವಿದ್ಯಾ-ಬಂಧ-ಸಂಬಂಧಮೋಕ್ಷಾತ್**
**ಸತ್ಯಜ್ಞಾನಾನಂದ-ರೂಪಾತ್ಮಲಬ್ಧೌ ।**
**ಶಾಸ್ತ್ರಂ ಯುಕ್ತಿರ್ದೇಶಿಕೋಕ್ತಿಃ ಪ್ರಮಾಣಂ**
**ಚಾಂತಃಸಿದ್ಧಾ ಸ್ವಾನುಭೂತಿಃ ಪ್ರಮಾಣಮ್ ॥ ೪೭೩ ॥**

**ಸ್ವಸ್ಯ** = ತನಗೆ **ಅವಿದ್ಯಾ-ಬಂಧ-ಸಂಬಂಧ-ಮೋಕ್ಷಾತ್** = ಅವಿದ್ಯಾಬಂಧದ ಸಂಬಂಧದ ಬಿಡುಗಡೆಯಿಂದ **ಸತ್ಯ-ಜ್ಞಾನ-ಆನಂದ-ರೂಪ-ಆತ್ಮಲಬ್ಧೌ** = ಸತ್ಯಜ್ಞಾನಾನಂದ-ಸ್ವರೂಪನಾದ ಆತ್ಮನನ್ನು ಸಾಕ್ಷಾತ್ಕರಿಸುವುದಕ್ಕೆ **ಶಾಸ್ತ್ರಂ** = ಶಾಸ್ತ್ರವು **ಯುಕ್ತಿಃ** = ಯುಕ್ತಿಯು **ದೇಶಿಕೋಕ್ತಿಃ** = ಆಚಾರ್ಯನ ಉಕ್ತಿಯು **ಪ್ರಮಾಣಂ** = ಪ್ರಮಾಣವು; **ಅಂತಃಸಿದ್ಧಾ** = ಒಳಗೆ ಉಂಟಾದ **ಸ್ವಾನುಭೂತಿಃ ಚ** = ತನ್ನ ಅನುಭವವೂ **ಪ್ರಮಾಣಂ** = ಪ್ರಮಾಣವು.

**೪೭೩.** ತನಗೆ ಅವಿದ್ಯಾಬಂಧ-ಸಂಬಂಧದ ಬಿಡುಗಡೆಯಿಂದ ಸತ್ಯ ಜ್ಞಾನಾನಂದಸ್ವರೂಪನಾದ ಆತ್ಮನನ್ನು ಸಾಕ್ಷಾತ್ಕರಿಸಿದುದಕ್ಕೆ ಶಾಸ್ತ್ರವೂ[೧] ಯುಕ್ತಿಯೂ[೨] ಆಚಾರ್ಯನ ಉಕ್ತಿಯೂ[೩] ಪ್ರಮಾಣವು; ಒಳಗೆ ಉಂಟಾದ ತನ್ನ ಅನುಭವವೂ[೪] ಪ್ರಮಾಣವು.

[[೧] **ಭಿದ್ಯತೇ ಹೃದಯಗ್ರಂಥಿಃ** (ಮುಂಡಕ ಉ. ೨. ೨. ೮), **ತರತಿ ಶೋಕಮಾತ್ಮವಿತ್** (ಛಾಂದೋಗ್ಯ ಉ. ೭. ೧. ೩) ಇವೇ ಮೊದಲಾದ ಶ್ರುತಿಗಳು.

[೨] ಬ್ರಹ್ಮಜ್ಞಾನದಿಂದ ಬಂಧವು ಹೋಗುತ್ತದೆ, ಏಕೆಂದರೆ ಇದು ಕಲ್ಪಿತವಾದುದು-ಎಂಬೀ ರೂಪದ ಯುಕ್ತಿ.

[೩] ಆತ್ಮವಿದನೂ ನಿಃಸ್ಪೃಹನೂ ಕರುಣಾಮಯನೂ ಆದ ಆಚಾರ್ಯನ ಮಾತುಗಳು ಪ್ರಮಾಣವಾಗುತ್ತವೆ.

[೪] ತನ್ನಲ್ಲಿ ಸಮಾಧಿಯಿಂದ ಸಿದ್ಧವಾಗುವ ಸ್ವಾನುಭವ; ಇದು ಕೊನೆಯ ಪ್ರಮಾಣ.]

**ಬಂಧೋ ಮೋಕ್ಷಶ್ಚ ತೃಪ್ತಿಶ್ಚ ಚಿಂತಾಽಽರೋಗ್ಯಕ್ಷುದಾದಯಃ ।**
**ಸ್ವೇನೈವ ವೇದ್ಯಾ ಯಜ್ಜ್ಞಾನಂ ಪರೇಷಾಮಾನುಮಾನಿಕಮ್**
**॥ ೪೭೪ ॥**

**ಬಂಧಃ** = ಬಂಧ **ಮೋಕ್ಷಃ ಚ** = ಮೋಕ್ಷ **ತೃಪ್ತಿಃ ಚ** = ತೃಪ್ತಿ **ಚಿಂತಾ-ಆರೋಗ್ಯ-ಕ್ಷುತ್-ಆದಯಃ** = ಚಿಂತೆ ಆರೋಗ್ಯ ಹಸಿವು ಮೊದಲಾದುವು **ಸ್ವೇನ**

**ಏವ** = ತನ್ನಿಂದಲೇ **ವೇದ್ಯಾಃ** = ತಿಳಿಯಲ್ಪಡತಕ್ಕವುಗಳು; **ಯತ್-ಜ್ಞಾನಂ**=ಯಾವ ಬಂಧಾದಿಗಳ ಜ್ಞಾನವು **ಪರೇಷಾಂ** = ಇತರರಿಗೆ **ಆನುಮಾನಿಕಂ** = ಅನುಮಾನ ದಿಂದಲೇ ತಿಳಿಯಲ್ಪಡತಕ್ಕದ್ದು.

**೪೭೪.** ಬಂಧ ಮೋಕ್ಷ ತೃಪ್ತಿ ಚಿಂತೆ ಆರೋಗ್ಯ ಹಸಿವು—ಇವೇ ಮೊದಲಾದುವನ್ನು ಮನುಷ್ಯನು ತಾನೇ ತಿಳಿಯುತ್ತಾನೆ. ಅವನಿಗೆ ಇವುಗಳ ಜ್ಞಾನವಿರುವುದನ್ನು ಇತರರು ಅನುಮಾನದಿಂದಲೇ ತಿಳಿದುಕೊಳ್ಳಬೇಕು.

**ತಟಸ್ಥಿತಾ ಬೋಧಯಂತಿ ಗುರವಃ ಶ್ರುತಯೋ ಯಥಾ ।**
**ಪ್ರಜ್ಞಯೈವ ತರೇದ್ವಿದ್ವಾನೀಶ್ವರಾನುಗೃಹೀತಯಾ ॥ ೪೭೫ ॥**

**ಯಥಾ** = ಹೇಗೆ **ಶ್ರುತಯಃ** = ಉಪನಿಷತ್ತುಗಳು **ತಟಸ್ಥಿತಾಃ** = ತಟಸ್ಥಿತವಾಗಿಯೇ **ಬೋಧಯಂತಿ**=ಬೋಧಿಸುತ್ತವೆಯೊ [**ತಥಾ**=ಹಾಗೆಯೇ] **ಗುರವಃ**=ಗುರುಗಳು [**ಬೋಧಯಂತಿ**]; **ವಿದ್ವಾನ್** = ವಿದ್ವಾಂಸನು **ಈಶ್ವರ-ಅನುಗೃಹೀತಯಾ** = ಈಶ್ವರನಿಂದ ಅನುಗ್ರಹಿಸಲ್ಪಟ್ಟ **ಪ್ರಜ್ಞಯಾ ಏವ** = ಜ್ಞಾನದಿಂದಲೇ **ತರೇತ್** = [ಸಂಸಾರ ಸಾಗರವನ್ನು] ದಾಟಬೇಕು.

**೪೭೫.** ಉಪನಿಷತ್ತುಗಳು ಮತ್ತು ಗುರುಗಳು ತಟಸ್ಥರಾಗಿಯೇ[೧] ಬೋಧಿಸುತ್ತಾರೆ. ವಿದ್ವಾಂಸನಾದವನು ಈಶ್ವರನಿಂದ ಅನುಗ್ರಹಿಸಲ್ಪಟ್ಟ ಜ್ಞಾನದಿಂದಲೇ (ಸಂಸಾರಸಾಗರವನ್ನು) ದಾಟಬೇಕು.

[[೧] ಉಪದೇಶವು ಯಾವಾಗಲೂ ಪರೋಕ್ಷವಾಗಿರುತ್ತದೆ; ಆದರೆ ಆತ್ಮಸಾಕ್ಷಾತ್ಕಾರವು ಅಪರೋಕ್ಷವಾಗಿರುತ್ತದೆ. ಪರೋಕ್ಷವು ಅಪರೋಕ್ಷಕ್ಕೆ ಸಾಧನವಾಗಿರುತ್ತದೆ.]

**ಸ್ವಾನುಭೂತ್ಯಾ ಸ್ವಯಂ ಜ್ಞಾತ್ವಾ ಸ್ವಮಾತ್ಮಾನಮಖಂಡಿತಮ್ ।**
**ಸಂಸಿದ್ಧಃ ಸಮ್ಮುಖಂ ತಿಷ್ಠೇನ್ನಿರ್ವಿಕಲ್ಪಾತ್ಮನಾಽಽತ್ಮನಿ ॥ ೪೭೬ ॥**

**ಸ್ವಾನುಭೂತ್ಯಾ**=ತನ್ನ ಅನುಭವದಿಂದಲೇ **ಸ್ವಂ**=ತನ್ನ **ಅಖಂಡಿತಂ**=ಅಖಂಡಿತನಾದ **ಆತ್ಮಾನಂ**=ಆತ್ಮನನ್ನು **ಸ್ವಯಂ**=ತಾನೇ **ಜ್ಞಾತ್ವಾ**=ತಿಳಿದುಕೊಂಡು **ಸಂಸಿದ್ಧಃ**= ಸಂಸಿದ್ಧನಾಗಿ **ನಿರ್ವಿಕಲ್ಪಾತ್ಮನಾ** = ನಿರ್ವಿಕಲ್ಪರೂಪದಿಂದ **ಆತ್ಮನಿ** = ತನ್ನಲ್ಲಿ **ಸಮ್ಮುಖಂ**= ಆತ್ಮಾಭಿಮುಖನಾಗಿ **ತಿಷ್ಠೇತ್** = ನಿಲ್ಲಬೇಕು.

**೪೭೬.** ತನ್ನ ಅನುಭವದಿಂದಲೇ ತನ್ನ ಅಖಂಡಾತ್ಮನನ್ನು ತಾನೇ ತಿಳಿದುಕೊಂಡು ಸಂಸಿದ್ಧನಾಗಿ ನಿರ್ವಿಕಲ್ಪರೂಪದಿಂದ ತನ್ನಲ್ಲಿಯೇ ಆತ್ಮಾಭಿಮುಖನಾಗಿ ನಿಲ್ಲಬೇಕು.

**ವೇದಾಂತ-ಸಿದ್ಧಾಂತ-ನಿರುಕ್ತಿರೇಷಾ**
**ಬ್ರಹ್ಮೈವ ಜೀವಃ ಸಕಲಂ ಜಗಚ್ಚ ।**
**ಅಖಂಡರೂಪಸ್ಥಿತಿರೇವ ಮೋಕ್ಷೋ**
**ಬ್ರಹ್ಮಾದ್ವಿತೀಯೇ ಶ್ರುತಯಃ ಪ್ರಮಾಣಮ್ ॥ ೪೭೭ ॥**

**ಜೀವಃ** = ಜೀವನು **ಸಕಲಂ ಜಗತ್ ಚ** = ಸಮಸ್ತ ಜಗತ್ತು **ಬ್ರಹ್ಮ ಏವ** = ಬ್ರಹ್ಮವೇ, **ಅಖಂಡರೂಪಸ್ಥಿತಿಃ ಏವ** = ಬ್ರಹ್ಮಸ್ವರೂಪದಲ್ಲಿರುವುದೇ **ಮೋಕ್ಷಃ** = ಮೋಕ್ಷವು — **ಏಷಾ** = ಇದು **ವೇದಾಂತ-ಸಿದ್ಧಾಂತ-ನಿರುಕ್ತಿಃ** = ವೇದಾಂತಸಿದ್ಧಾಂತದ ಕೊನೆಯ ನಿರ್ಣಯು; **ಬ್ರಹ್ಮ-ಅದ್ವಿತೀಯೇ** = ಬ್ರಹ್ಮವು ಅದ್ವಿತೀಯವು ಎಂಬುದಕ್ಕೆ **ಶ್ರುತಯಃ** = ಉಪನಿಷತ್ತುಗಳೇ **ಪ್ರಮಾಣಂ** = ಪ್ರಮಾಣವು.

**೪೭೭.** ಜೀವನೂ ಸಮಸ್ತ ಜಗತ್ತೂ ಬ್ರಹ್ಮವೇ, ಬ್ರಹ್ಮಸ್ವರೂಪದಲ್ಲಿರುವುದೇ ಮೋಕ್ಷವು — ಇದು ವೇದಾಂತಸಿದ್ಧಾಂತದ ಕೊನೆಯ ನಿರ್ಣಯು. ಬ್ರಹ್ಮವು ಅದ್ವಿತೀಯವು ಎಂಬುದಕ್ಕೆ ಉಪನಿಷತ್ತುಗಳೇ ಪ್ರಮಾಣವು.

**ಇತಿ ಗುರುವಚನಾಚ್ಛ್ರುತಿಪ್ರಮಾಣಾತ್**
**ಪರಮವಗಮ್ಯ ಸತತ್ತ್ವಮಾತ್ಮಯುಕ್ತ್ಯಾ ।**
**ಪ್ರಶಮಿತಕರಣಃ ಸಮಾಹಿತಾತ್ಮಾ**
**ಕ್ವಚಿದಚಲಾಕೃತಿರಾತ್ಮನಿಷ್ಠಿತೋಽಭೂತ್ ॥ ೪೭೮ ॥**

**ಇತಿ** = ಹೀಗೆ **ಗುರುವಚನಾತ್** = ಗುರೂಪದೇಶದಿಂದಲೂ **ಶ್ರುತಿಪ್ರಮಾಣಾತ್** = ಶ್ರುತಿಪ್ರಮಾಣದಿಂದಲೂ **ಆತ್ಮಯುಕ್ತ್ಯಾ** = ತನ್ನ ಯುಕ್ತಿಯಿಂದಲೂ **ಪರಂ ಸತತ್ತ್ವಂ** = ಪರಮಾತ್ಮತತ್ತ್ವವನ್ನು **ಅವಗಮ್ಯ** = ತಿಳಿದುಕೊಂಡು **ಪ್ರಶಮಿತಕರಣಃ** = ಇಂದ್ರಿಯಗಳನ್ನೆಲ್ಲ ನಿಗ್ರಹಿಸಿದವನಾಗಿ **ಸಮಾಹಿತಾತ್ಮಾ** = ಸಮಾಹಿತ ಚಿತ್ತನಾಗಿ **ಕ್ವಚಿತ್** = ಒಂದು ಏಕಾಂತಪ್ರದೇಶದಲ್ಲಿ **ಅಚಲಾಕೃತಿಃ** = ನಿಶ್ಚಲವಾದ ಆಕಾರವುಳ್ಳವನಾಗಿ **ಆತ್ಮನಿಷ್ಠಿತಃ ಅಭೂತ್** = ಬ್ರಹ್ಮನಿಷ್ಠನಾದನು.

**೪೭೮.** ಹೀಗೆ ಗುರೂಪದೇಶದಿಂದಲೂ ಶ್ರುತಿಪ್ರಮಾಣದಿಂದಲೂ ತನ್ನ ಯುಕ್ತಿಯಿಂದಲೂ ಪರಮಾತ್ಮ-ತತ್ತ್ವವನ್ನು ತಿಳಿದುಕೊಂಡು, ಇಂದ್ರಿಯಗಳನ್ನೆಲ್ಲ ನಿಗ್ರಹಿಸಿ, ಚಿತ್ತವನ್ನು ನಿರುದ್ಧಗೊಳಿಸಿ, ಒಂದು ಏಕಾಂತಪ್ರದೇಶದಲ್ಲಿ ನಿಶ್ಚಲನಾಗಿ ಕುಳಿತು ಬ್ರಹ್ಮನಿಷ್ಠನಾದನು.

**ಕಿಂಚಿತ್ಕಾಲಂ ಸಮಾಧಾಯ ಪರೇ ಬ್ರಹ್ಮಣಿ ಮಾನಸಮ್ ।**
**ವ್ಯುತ್ಥಾಯ ಪರಮಾನಂದಾದಿದಂ ವಚನಮಬ್ರವೀತ್ ॥ ೪೭೯ ॥**

**೪೭೯.** ಪರಬ್ರಹ್ಮದಲ್ಲಿ ಮನಸ್ಸನ್ನು ಸ್ವಲ್ಪಹೊತ್ತು ನಿಲ್ಲಿಸಿ, (ಅನಂತರ) ಬಹಿರ್ಮುಖನಾಗಿ[೧] ಪರಮಾನಂದದಿಂದ ಈ ಮಾತನ್ನು ಹೇಳಿದನು:

[೧ ಪ್ರಾರಬ್ಧವಶದಿಂದ]

**ಬುದ್ಧಿರ್ವಿನಷ್ಟಾ ಗಲಿತಾ ಪ್ರವೃತ್ತಿ-**
**ರ್ಬ್ರಹ್ಮಾತ್ಮನೋರೇಕತಯಾಧಿಗತ್ಯಾ ।**
**ಇದಂ ನ ಜಾನೇಽಪ್ಯನಿದಂ ನ ಜಾನೇ**
**ಕಿಂ ವಾ ಕಿಯದ್ವಾ ಸುಖಮಸ್ತ್ಯಪಾರಮ್ ॥ ೪೮೦ ॥**

ಬ್ರಹ್ಮ-ಆತ್ಮನೋಃ = ಬ್ರಹ್ಮ ಮತ್ತು ಆತ್ಮ—ಇವರ **ಏಕತಯಾ ಅಧಿಗತ್ಯಾ** = ಐಕ್ಯಜ್ಞಾನದಿಂದ [ನನ್ನ] **ಬುದ್ಧಿಃ** = ಮನಸ್ಸು **ವಿನಷ್ಟಾ** = ನಾಶವಾಯಿತು, **ಪ್ರವೃತ್ತಿಃ** = ಪ್ರವೃತ್ತಿಯು **ಗಲಿತಾ** = ಶಿಥಿಲವಾಯಿತು; **ಇದಂ ನ ಜಾನೇ** = ಇದು ಎಂಬುದನ್ನು ಅರಿಯೆನು, **ಅನಿದಂ ನ ಜಾನೇ** = ಇದಲ್ಲವೆಂಬುದನ್ನು ಅರಿಯೆನು, **ಅಪಾರಂ** = ಕೊನೆಯಿಲ್ಲದ **ಸುಖಂ** = ಆನಂದವು **ಕಿಂ ವಾ** = ಯಾವುದೊ **ಕಿಯತ್ ವಾ ಅಸ್ತಿ** = ಎಷ್ಟಿದೆಯೊ [ನಾನು ಅರಿಯೆನು].

**೪೮೦.** ಜೀವಾತ್ಮ ಮತ್ತು ಪರಮಾತ್ಮ—ಇವರ ಐಕ್ಯಜ್ಞಾನದಿಂದ ಮನಸ್ಸು ನಾಶವಾಯಿತು;[೧] ಹೊರಗಿನ ಪ್ರವೃತ್ತಿಯು ಶಿಥಿಲವಾಯಿತು; 'ಇದು' ಎಂಬುದನ್ನು ಅರಿಯೆನು, 'ಇದಲ್ಲ' ಎಂಬುದನ್ನೂ ಅರಿಯೆನು. ಅಪಾರವಾದ ಆನಂದವು ಯಾವುದೊ ಎಷ್ಟಿದೆಯೊ (ಅರಿಯೆನು).

[೧ ಚಿತ್ತವೃತ್ತಿಗಳೆಲ್ಲ ನಾಶವಾಯಿತು ಎಂದರ್ಥ.]

**ವಾಚಾ ವಕ್ತುಮಶಕ್ಯಮೇವ ಮನಸಾ ಮಂತುಂ ನ ವಾ ಶಕ್ಯತೇ**
**ಸ್ವಾನಂದಾಮೃತ-ಪೂರಪೂರಿತ-ಪರಬ್ರಹ್ಮಾಂಬುಧೇರ್ವೈಭವಮ್ ।**
**ಅಂಭೋರಾಶಿ-ವಿಶೀರ್ಣ-ವಾರ್ಷಿಕ-ಶಿಲಾಭಾವಂ ಭಜನ್ಮೇ ಮನೋ**
**ಯಸ್ಯಾಂಶಾಂಶಲವೇ ವಿಲೀನಮಧುನಾಽಽನಂದಾತ್ಮನಾ ನಿರ್ವೃತಮ್**
**॥ ೪೮೧ ॥**

**ಅಂಭೋರಾಶಿ-ವಿಶೀರ್ಣ-ವಾರ್ಷಿಕ-ಶಿಲಾಭಾವಂ** = ಸಮುದ್ರದಲ್ಲಿ ಸಿಡಿದು ಬಿದ್ದ ಆಲಿಕಲ್ಲಿನ ರೂಪವನ್ನು **ಭಜತ್** = ಹೊಂದಿದ **ಮೇ** = ನನ್ನ **ಮನಃ** = ಮನಸ್ಸು **ಯಸ್ಯ** = ಯಾವ ಸಮುದ್ರದ **ಅಂಶಾಂಶ-ಲವೇ** = ಅಂಶದ ಅಂಶದ ಅಲ್ಪಭಾಗದಲ್ಲಿ **ವಿಲೀನಂ** = ವಿಲೀನವಾಗಿ **ಅಧುನಾ** = ಈಗ **ಆನಂದಾತ್ಮನಾ** = ಆನಂದಸ್ವರೂಪದಿಂದ **ನಿರ್ವೃತಂ** = ಸುಖವನ್ನು ಪಡೆಯಿತೊ, [ಅಂಥ] **ಸ್ವ-ಆನಂದ-ಅಮೃತ-ಪೂರಪೂರಿತ-**

**ಪರಬ್ರಹ್ಮ-ಅಂಬುಧೇಃ**=ಆತ್ಮಾನಂದವೆಂಬ ಅಮೃತಪ್ರವಾಹದಿಂದ ತುಂಬಿರುವ ಪರಬ್ರಹ್ಮವೆಂಬ ಸಮುದ್ರದ **ವೈಭವಂ**=ವೈಭವವನ್ನು **ವಾಚಾ**=ವಾಕ್ಕಿನಿಂದ **ವಕ್ತುಂ**=ಹೇಳುವುದಕ್ಕೆ **ಅಶಕ್ಯಮ್ ಏವ**=ಸಾಧ್ಯವೇ ಇಲ್ಲ, **ಮನಸಾ ವಾ**=ಮನಸ್ಸಿನಿಂದ **ಮಂತುಂ**=ತಿಳಿಯುವುದಕ್ಕೆ **ನ ಶಕ್ಯತೇ**=ಸಾಧ್ಯವೇ ಇಲ್ಲ.

**೪೮೧.** ಸಮುದ್ರದಲ್ಲಿ ಸಿಡಿದುಬಿದ್ದ ಆಲಿಕಲ್ಲಿನಂತೆ[೧] ನನ್ನ ಮನಸ್ಸು ಯಾವ ಸಮುದ್ರದ ಅಂಶಾಂಶದ ಅಲ್ಪಭಾಗದಲ್ಲಿ[೨] ಲಯವಾಗಿ, ಈಗ[೩] ಆನಂದ ಸ್ವರೂಪದಿಂದ ಸುಖವನ್ನು ಪಡೆಯಿತೊ ಅಂಥ ಆತ್ಮಾನಂದವೆಂಬ ಅಮೃತ ಪ್ರವಾಹದಿಂದ ತುಂಬಿರುವ ಪರಬ್ರಹ್ಮವೆಂಬ ಸಮುದ್ರದ ವೈಭವವನ್ನು ಮಾತಿನಿಂದ ಹೇಳುವುದಕ್ಕೆ ಸಾಧ್ಯವೇ ಇಲ್ಲ, ಮನಸ್ಸಿನಿಂದ ತಿಳಿಯುವುದಕ್ಕೂ ಸಾಧ್ಯವಿಲ್ಲ.

[೧ ಮಳೆಯ ಜೊತೆಯಲ್ಲಿ ಬೀಳುವ ಆಲಿಕಲ್ಲು ಸಮುದ್ರದಲ್ಲಿ ಬಿದ್ದೊಡನೆಯೇ ಕರಗಿ ನೀರಾಗುವಂತೆ.

೨ ಅವ್ಯಕ್ತವು ಪರಬ್ರಹ್ಮದ ಒಂದಂಶವಾಗಿದೆ. ಸೂತ್ರಾತ್ಮನು ಅವ್ಯಕ್ತದ ಅಂಶವಾಗಿದ್ದಾನೆ. ವಿರಾಟ್ಪುರುಷನು ಸೂತ್ರಾತ್ಮನ ಅಂಶವಾಗಿದ್ದಾನೆ. ಮನಸ್ಸು ಕರಗಿ ಲಯವಾಗಲು ಈ ವಿರಾಟ್ಪುರುಷನ ಆನಂದವೇ ಸಾಕು.

೩ ಸಮಾಧಿಯಿಂದ ಬಹಿಃಪ್ರಜ್ಞನಾದ ಮೇಲೆ.]

**ಕ್ವ ಗತಂ ಕೇನ ವಾ ನೀತಂ ಕುತ್ರ ಲೀನಮಿದಂ ಜಗತ್ ।**
**ಅಧುನೈವ ಮಯಾ ದೃಷ್ಟಂ ನಾಸ್ತಿ ಕಿಂ ಮಹದದ್ಭುತಮ್ ॥ ೪೮೨ ॥**

**ಇದಂ ಜಗತ್**=ಈ ಜಗತ್ತು **ಕ್ವ ಗತಂ**=ಎಲ್ಲಿ ಹೋಯಿತೋ, **ಕೇನ ವಾ**=ಯಾರಿಂದ **ನೀತಂ**=ಒಯ್ಯಲ್ಪಟ್ಟಿತೋ, **ಕುತ್ರ**=ಎಲ್ಲಿ **ಲೀನಂ**=ಲಯವಾಯಿತೋ [ನಾನು ಅರಿಯೆನು]; **ಅಧುನಾ ಏವ**=ಈಗ ತಾನೇ **ಮಯಾ**=ನನ್ನಿಂದ **ದೃಷ್ಟಂ**=ನೋಡಲ್ಪಟ್ಟಿತ್ತು; [ಈಗ] **ನ ಅಸ್ತಿ**=ಇಲ್ಲವಾಗಿದೆ, **ಕಿಂ ಮಹತ್ ಅದ್ಭುತಂ**=ಎಂಥ ಮಹದಾಶ್ಚರ್ಯ!

**೪೮೨.** ಈ ಜಗತ್ತು ಎಲ್ಲಿ ಹೋಯಿತೋ ಯಾರಿಂದ ಒಯ್ಯಲ್ಪಟ್ಟಿತೋ ಎಲ್ಲಿ ಲಯವಾಯಿತೋ (ನಾನು ಅರಿಯೆನು). ಈಗ ತಾನೇ ಅದನ್ನು ನೋಡಿದ್ದೆನು, ಈಗ ಇಲ್ಲವಾಗಿದೆ! ಎಂಥ ಮಹದಾಶ್ಚರ್ಯ!

**ಕಿಂ ಹೇಯಂ ಕಿಮುಪಾದೇಯಂ ಕಿಮನ್ಯತ್ಕಿಂ ವಿಲಕ್ಷಣಮ್ ।**
**ಅಖಂಡಾನಂದ-ಪೀಯೂಷ-ಪೂರ್ಣೇ ಬ್ರಹ್ಮ-ಮಹಾರ್ಣವೇ**
**॥ ೪೮೩ ॥**

**ಅಖಂಡ-ಆನಂದಪೀಯೂಷ-ಪೂರ್ಣೇ** = ಅಖಂಡವಾದ ಆನಂದಾಮೃತ ದಿಂದ ತುಂಬಿರುವ **ಬ್ರಹ್ಮ-ಮಹಾರ್ಣವೇ** = ಬ್ರಹ್ಮವೆಂಬ ಮಹಾಸಮುದ್ರದಲ್ಲಿ **ಕಿಂ ಹೇಯಂ** = ಬಿಡತಕ್ಕದ್ದು ಯಾವುದು? **ಕಿಂ ಉಪಾದೇಯಂ** = ತೆಗೆದುಕೊಳ್ಳತಕ್ಕದ್ದು ಯಾವುದು? **ಕಿಮ್ ಅನ್ಯತ್** = ಬೇರಾದುದು ಯಾವುದು? **ಕಿಂ ವಿಲಕ್ಷಣಂ** = ವಿಜಾತೀಯವಾದುದು ಯಾವುದು?

**೪೮೩.** ಅಖಂಡವಾದ ಆನಂದಾಮೃತದಿಂದ ತುಂಬಿರುವ ಬ್ರಹ್ಮವೆಂಬ ಮಹಾಸಮುದ್ರದಲ್ಲಿ ಬಿಡತಕ್ಕದ್ದು ಯಾವುದು, ತೆಗೆದುಕೊಳ್ಳತಕ್ಕದ್ದು ಯಾವುದು, (ಉಳಿದಿರುವ) ಬೇರಾವುದನ್ನು (ಗ್ರಹಿಸಬೇಕು), ವಿಜಾತೀಯ ವಾದ ಯಾವುದನ್ನು (ತ್ಯಜಿಸಬೇಕು)?

**ನ ಕಿಂಚಿದತ್ರ ಪಶ್ಯಾಮಿ ನ ಶೃಣೋಮಿ ನ ವೇದ್ಮ್ಯಹಮ್ ।**
**ಸ್ವಾತ್ಮನೈವ ಸದಾನಂದರೂಪೇಣಾಸ್ಮಿ ವಿಲಕ್ಷಣಃ　　॥ ೪೮೪ ॥**

**ಅಹಂ** = ನಾನು **ಅತ್ರ** = ಈ ಬ್ರಾಹ್ಮೀಸ್ಥಿತಿಯಲ್ಲಿ **ನ ಕಿಂಚಿತ್ ಪಶ್ಯಾಮಿ** = ಏನನ್ನೂ ನೋಡುತ್ತಿಲ್ಲ, **ನ ಶೃಣೋಮಿ** = ಕೇಳುತ್ತಿಲ್ಲ, **ನ ವೇದ್ಮಿ** = ಅರಿಯುತ್ತಿಲ್ಲ; **ಸದಾನಂದರೂಪೇಣ** = ಸದಾನಂದಸ್ವರೂಪವಾದ **ಸ್ವಾತ್ಮನಾ ಏವ** = ಆತ್ಮರೂಪ ದಿಂದಲೇ **ವಿಲಕ್ಷಣಃ ಅಸ್ಮಿ** = ವಿಲಕ್ಷಣನಾಗಿರುವೆನು.

**೪೮೪.** ಈ ಬ್ರಾಹ್ಮೀಸ್ಥಿತಿಯಲ್ಲಿ ನಾನು ಏನನ್ನೂ ನೋಡುತ್ತಿಲ್ಲ, ಏನನ್ನೂ ಕೇಳುತ್ತಿಲ್ಲ, ಏನನ್ನೂ ಅರಿಯುತ್ತಿಲ್ಲ; ಸದಾನಂದಸ್ವರೂಪವಾದ ಆತ್ಮರೂಪದಿಂದಲೇ ವಿಲಕ್ಷಣನಾಗಿರುತ್ತೇನೆ.[೧]

[[೧] ಪಂಚಕೋಶಗಳಿಗಿಂತ ಅಥವಾ ವರ್ಣಾಶ್ರಮಾದಿಗಳ ಅಭಿಮಾನಕ್ಕಿಂತ ವಿಲಕ್ಷಣ ನಾಗಿರುತ್ತೇನೆ.]

**ನಮೋ ನಮಸ್ತೇ ಗುರವೇ ಮಹಾತ್ಮನೇ**
**ವಿಮುಕ್ತ-ಸಂಗಾಯ ಸದುತ್ತಮಾಯ ।**
**ನಿತ್ಯಾದ್ವಯಾನಂದರಸ-ಸ್ವರೂಪಿಣೇ**
**ಭೂಮ್ನೇ ಸದಾಽಪಾರ-ದಯಾಂಬುಧಾಮ್ನೇ ॥ ೪೮೫ ॥**

**ಮಹಾತ್ಮನೇ** = ಮಹಾತ್ಮನಾದ **ವಿಮುಕ್ತ-ಸಂಗಾಯ** = ಸಂಗರಹಿತನಾದ **ಸದುತ್ತಮಾಯ** = ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠನಾದ **ನಿತ್ಯ-ಅದ್ವಯಾನಂದ-ರಸ-ಸ್ವರೂಪಿಣೇ** = ನಿತ್ಯಾದ್ವಯಾನಂದರಸ-ಸ್ವರೂಪನಾದ **ಭೂಮ್ನೇ** = ಭೂಮನಾದ **ಸದಾ-ಅಪಾರ-ದಯಾಂಬು-ಧಾಮ್ನೇ** = ಯಾವಾಗಲೂ ಅಪಾರ ದಯಾಸಮುದ್ರನಾಗಿರುವ **ಗುರವೇ** = ಗುರುವಾದ **ತೇ** = ನಿನಗೆ **ನಮಃ ನಮಃ** = ಪುನಃ ಪುನಃ ನಮಸ್ಕಾರಗಳು.

**೪೮೫.** ಮಹಾತ್ಮನೂ ಸಂಗರಹಿತನೂ ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠನೂ ನಿತ್ಯಾದ್ವಯಾನಂದರಸ-ಸ್ವರೂಪನೂ ಭೂಮನೂ ಸದಾ ಅಪಾರ-ದಯಾ ಸಮುದ್ರನೂ ಗುರುವೂ ಆದ ನಿನಗೆ ಪುನಃಪುನಃ ನಮಸ್ಕಾರಗಳು.

**ಯತ್ಕಟಾಕ್ಷ-ಶಶಿ-ಸಾಂದ್ರ-ಚಂದ್ರಿಕಾ-**
**ಪಾತ-ಧೂತ-ಭವತಾಪಜ-ಶ್ರಮಃ ।**
**ಪ್ರಾಪ್ತವಾನಹಮಖಂಡ-ವೈಭವಾ-**
**ನಂದಮಾತ್ಮಪದಮಕ್ಷಯಂ ಕ್ಷಣಾತ್ ॥ ೪೮೬ ॥**

**ಯತ್-ಕಟಾಕ್ಷ-ಶಶಿ-ಸಾಂದ್ರ-ಚಂದ್ರಿಕಾ-ಪಾತ-ಧೂತ-ಭವತಾಪಜ-ಶ್ರಮಃ** = ಯಾವನ ಕಡೆಗಣ್ಣಿನ ನೋಟವೆಂಬ ಚಂದ್ರನ ದಟ್ಟವಾದ ಬೆಳದಿಂಗಳಿನ ಪ್ರಸರಣದ ಮೂಲಕ ಸಂಸಾರದ ಕ್ಲೇಶದಿಂದ ಉಂಟಾದ ಶ್ರಮವನ್ನು ಹೋಗಲಾಡಿಸಿಕೊಂಡ **ಅಹಂ** = ನಾನು **ಅಕ್ಷಯಂ** = ಅಕ್ಷಯವಾದ **ಅಖಂಡ-ವೈಭವಾನಂದಂ** = ಅಖಂಡ ವೈಭವಾನಂದವಾದ **ಆತ್ಮಪದಂ** = ಪರಮಪದವನ್ನು **ಕ್ಷಣಾತ್** = ಕ್ಷಣಮಾತ್ರದಲ್ಲಿ **ಪ್ರಾಪ್ತವಾನ್** = ಹೊಂದಿದೆನೋ [ಅಂಥ ಗುರುವಿಗೆ ನಮಸ್ಕಾರ].

**೪೮೬.** ಯಾವನ ಕಡೆಗಣ್ಣಿನ ನೋಟವೆಂಬ ಚಂದ್ರನ ದಟ್ಟವಾದ ಬೆಳದಿಂಗಳಿನ ಪ್ರಸರಣದ ಮೂಲಕ ಸಂಸಾರಕ್ಲೇಶದಿಂದ ಉಂಟಾದ ಶ್ರಮವನ್ನು ಹೋಗಲಾಡಿಸಿಕೊಂಡ ನಾನು ಅಕ್ಷಯವೂ ಅಖಂಡ ವೈಭವಾನಂದವೂ ಆದ ಪರಮಪದವನ್ನು ಕ್ಷಣಮಾತ್ರದಲ್ಲಿ ಹೊಂದಿದೆನೋ (ಅಂಥ ಗುರುವಿಗೆ ನಮಸ್ಕಾರ).

**ಧನ್ಯೋಽಹಂ ಕೃತಕೃತ್ಯೋಽಹಂ ವಿಮುಕ್ತೋಽಹಂ ಭವಗ್ರಹಾತ್ ।**
**ನಿತ್ಯಾನಂದ-ಸ್ವರೂಪೋಽಹಂ ಪೂರ್ಣೋಽಹಂ ತ್ವದನುಗ್ರಹಾತ್ ॥ ೪೮೭ ॥**

**ತ್ವತ್-ಅನುಗ್ರಹಾತ್** = ನಿಮ್ಮ ಅನುಗ್ರಹದಿಂದ **ಅಹಂ** = ನಾನು **ಧನ್ಯಃ** = ಧನ್ಯನು, **ಅಹಂ ಕೃತಕೃತ್ಯಃ** = ಕೃತಕೃತ್ಯನು, **ಅಹಂ ಭವಗ್ರಹಾತ್** = ಭವಬಂಧದಿಂದ **ವಿಮುಕ್ತಃ** = ವಿಮುಕ್ತನು, **ಅಹಂ ನಿತ್ಯಾನಂದಸ್ವರೂಪಃ** = ನಿತ್ಯಾನಂದಸ್ವರೂಪನು, **ಅಹಂ ಪೂರ್ಣಃ** = ಪರಿಪೂರ್ಣನು.

**೪೮೭.** ನಿಮ್ಮ ಅನುಗ್ರಹದಿಂದ ನಾನು ಧನ್ಯನೂ ಕೃತಕೃತ್ಯನೂ ಆದೆನು, ಸಂಸಾರಬಂಧದಿಂದ ವಿಮುಕ್ತನಾದೆನು; ನಾನು ನಿತ್ಯಾನಂದಸ್ವರೂಪನು, ಪರಿಪೂರ್ಣನು.

**ಅಸಂಗೋಽಹಮನಂಗೋಽಹಮಲಿಂಗೋಽಹಮಭಂಗುರಃ ।**
**ಪ್ರಶಾಂತೋಽಹಮನಂತೋಽಹಮಮಲೋಽಹಂ ಚಿರಂತನಃ**
**॥ ೪೮೮ ॥**

ಅಹಂ=ನಾನು **ಅಸಂಗಃ**=ಅಸಂಗನು, **ಅಹಮ್ ಅನಂಗಃ**=ಶರೀರರಹಿತನು, **ಅಹಮ್ ಅಲಿಂಗಃ**=ಲಿಂಗಶರೀರ-ರಹಿತನು, **ಅಹಮ್ ಅಭಂಗುರಃ**=ನಾಶರಹಿತನು, **ಅಹಮ್ ಪ್ರಶಾಂತಃ**=ಪ್ರಶಾಂತನು, **ಅಹಮ್ ಅನಂತಃ**=ಅನಂತನು, **ಅಹಮ್ ಅಮಲಃ**=ಶುದ್ಧನು, **ಅಹಂ ಚಿರಂತನಃ**=ಸನಾತನನು.

**೪೮೮.** ನಾನು ಸಂಗರಹಿತನು, ಸ್ಥೂಲ-ಸೂಕ್ಷ್ಮ-ಶರೀರ-ರಹಿತನು, ನಾಶರಹಿತನು, ಪ್ರಶಾಂತನು, ಅನಂತನು, ಶುದ್ಧನು, ಸನಾತನನು.

**ಅಕರ್ತಾಽಹಮಭೋಕ್ತಾಽಹಮವಿಕಾರೋಽಹಮಕ್ರಿಯಃ ।**
**ಶುದ್ಧಬೋಧ-ಸ್ವರೂಪೋಽಹಂ ಕೇವಲೋಽಹಂ ಸದಾಶಿವಃ**
**॥ ೪೮೯ ॥**

ಅಹಂ=ನಾನು **ಅಕರ್ತಾ**-ಕರ್ತೃವಲ್ಲ, **ಅಹಮ್ ಅಭೋಕ್ತಾ**=ಭೋಕ್ತೃವಲ್ಲ, **ಅಹಮ್ ಅವಿಕಾರಃ**=ನಿರ್ವಿಕಾರನು, **ಅಹಮ್ ಅಕ್ರಿಯಃ**=ಕ್ರಿಯಾಶೂನ್ಯನು, **ಅಹಂ ಶುದ್ಧ-ಬೋಧ-ಸ್ವರೂಪಃ**=ಶುದ್ಧಜ್ಞಾನಸ್ವರೂಪನು, **ಅಹಂ ಕೇವಲಃ**=ಕೇವಲನು, **ಅಹಂ ಸದಾಶಿವಃ**=ಸದಾ ಮಂಗಳಸ್ವರೂಪನು.

**೪೮೯.** ನಾನು ಕರ್ತೃವಲ್ಲ, ಭೋಕ್ತೃವಲ್ಲ; ನಾನು ನಿರ್ವಿಕಾರನು, ಕ್ರಿಯಾಶೂನ್ಯನು, ಶುದ್ಧಜ್ಞಾನಸ್ವರೂಪನು, ಕೇವಲನು, ನಿತ್ಯಮಂಗಳಸ್ವರೂಪನು.

**ದ್ರಷ್ಟುಃ ಶ್ರೋತುರ್ವಕ್ತುಃ ಕರ್ತುರ್ಭೋಕ್ತುರ್ವಿಭಿನ್ನ ಏವಾಹಮ್।**
**ನಿತ್ಯ-ನಿರಂತರ-ನಿಷ್ಕ್ರಿಯ-ನಿಃಸೀಮಾಸಂಗ-ಪೂರ್ಣಬೋಧಾತ್ಮಾ**
**॥ ೪೯೦ ॥**

ಅಹಂ=ನಾನು **ದ್ರಷ್ಟುಃ**-ನೋಡುವವನಿಗಿಂತ **ಶ್ರೋತುಃ**=ಕೇಳುವವನಿಗಿಂತ **ವಕ್ತುಃ**=ಮಾತನಾಡುವವನಿಗಿಂತ **ಕರ್ತುಃ**=ಕರ್ತೃವಿಗಿಂತ **ಭೋಕ್ತುಃ**=ಭೋಕ್ತೃವಿಗಿಂತ **ವಿಭಿನ್ನಃ ಏವ**-ಬೇರೆಯಾದವನೇ; [ನಾನು] **ನಿತ್ಯ-ನಿರಂತರ-ನಿಷ್ಕ್ರಿಯ-ನಿಃಸೀಮ-ಅಸಂಗ-ಪೂರ್ಣಬೋಧಾತ್ಮಾ**=ನಿತ್ಯವೂ ನಿರಂತರವೂ ನಿಷ್ಕ್ರಿಯವೂ ಸೀಮೆಯಿಲ್ಲದುದೂ ಸಂಗರಹಿತವೂ ಆದ ಪೂರ್ಣಜ್ಞಾನದ ಸ್ವರೂಪನು.

**೪೯೦.** ನಾನು ನೋಡುವವನಿಗಿಂತ ಕೇಳುವವನಿಗಿಂತ ಮಾತನಾಡು ವವನಿಗಿಂತ ಕರ್ತೃವಿಗಿಂತ ಭೋಕ್ತೃವಿಗಿಂತ ಬೇರೆಯಾದವನೇ; (ನಾನು) ನಿತ್ಯವೂ ನಿರಂತರವೂ ನಿಷ್ಕ್ರಿಯವೂ ಸೀಮೆಯಿಲ್ಲದುದೂ ಸಂಗರಹಿತವೂ ಆದ ಪೂರ್ಣಜ್ಞಾನದ ಸ್ವರೂಪನಾಗಿರುವೆನು.

**ನಾಹಮಿದಂ ನಾಹಮದೋಽಪ್ಯುಭಯೋರವಭಾಸಕಂ ಪರಂ ಶುದ್ಧಮ್ ।**
**ಬಾಹ್ಯಾಭ್ಯಂತರ-ಶೂನ್ಯಂ ಪೂರ್ಣಂ ಬ್ರಹ್ಮಾದ್ವಿತೀಯ-ಮೇವಾಹಮ್ ॥ ೪೯೧ ॥**

**ಅಹಂ** = ನಾನು **ಇದಂ ನ** = ಇದಲ್ಲ, **ಅಹಮ್ ಅದಃ ನ** = ಅದಲ್ಲ; **ಅಪಿ** = ಆದರೆ **ಅಹಂ** = ನಾನು **ಉಭಯೋಃ** = ಇವೆರಡರ **ಅವಭಾಸಕಂ** = ಪ್ರಕಾಶಕವಾಗಿ ರುವ **ಪರಂ** = ಶ್ರೇಷ್ಠವಾದ **ಶುದ್ಧಂ** = ಶುದ್ಧವಾದ **ಬಾಹ್ಯಾಭ್ಯಂತರ-ಶೂನ್ಯಂ** = ಒಳಗು ಹೊರಗು ಎಂಬ ಭೇದವಿಲ್ಲದ **ಪೂರ್ಣಂ** = ಪೂರ್ಣವಾದ **ಅದ್ವಿತೀಯಂ** = ಅದ್ವಿತೀಯವಾದ **ಬ್ರಹ್ಮ ಏವ** = ಬ್ರಹ್ಮವೇ.

**೪೯೧.** ನಾನು ಇದೂ[೧] ಅಲ್ಲ, ಅದೂ[೨] ಅಲ್ಲ; ಆದರೆ ಇವೆರಡನ್ನೂ ಪ್ರಕಾಶಿಸುವ, ಶ್ರೇಷ್ಠವೂ ಶುದ್ಧವೂ ಆದ, ಒಳಗು ಹೊರಗು ಎಂಬ ಭೇದ ವಿಲ್ಲದೆ, ಪೂರ್ಣವಾದ ಅದ್ವಿತೀಯವಾದ ಬ್ರಹ್ಮವೇ ನಾನು.

[೧ ಅಪರೋಕ್ಷಜ್ಞಾನಕ್ಕೆ ವಿಷಯವಾದುದು.
೨ ಪರೋಕ್ಷಜ್ಞಾನಕ್ಕೆ ವಿಷಯವಾದುದು.]

**ನಿರುಪಮಮನಾದಿತತ್ತ್ವಂ ತ್ವಮಹಮಿದಮದ ಇತಿ ಕಲ್ಪನಾ-ದೂರಮ್ ।**
**ನಿತ್ಯಾನಂದೈಕರಸಂ ಸತ್ಯಂ ಬ್ರಹ್ಮಾದ್ವಿತೀಯಮೇವಾಹಮ್ ॥೪೯೨॥**

**ನಿರುಪಮಂ** = ಉಪಮಾನವಿಲ್ಲದ **ಅನಾದಿತತ್ತ್ವಂ** = ಅನಾದಿತತ್ತ್ವವಾದ **ತ್ವಮ್ ಅಹಂ** = ನೀನು ನಾನು **ಇದಮ್ ಅದಃ** = ಇದು ಅದು **ಇತಿ** = ಎಂಬ **ಕಲ್ಪನಾದೂರಂ** = ಕಲ್ಪನೆಗಳಿಗೆ ದೂರವಾಗಿರುವ **ನಿತ್ಯಾನಂದ-ಏಕರಸಂ** = ನಿತ್ಯಾ ನಂದೈಕರಸವಾದ **ಸತ್ಯಂ** = ಸತ್ಯವಾದ **ಅದ್ವಿತೀಯಂ** = ಅದ್ವಿತೀಯವಾದ **ಬ್ರಹ್ಮ ಏವ** = ಬ್ರಹ್ಮವೇ **ಅಹಂ** = ನಾನು.

**೪೯೨.** ಅಸದೃಶವಾದ, 'ನೀನು-ನಾನು, ಇದು-ಅದು' ಎಂಬ ಕಲ್ಪನೆ ಗಳಿಗೆ ದೂರವಾಗಿರುವ, ನಿತ್ಯಾನಂದೈಕರಸವಾದ ಸತ್ಯವಾದ ಅದ್ವಿತೀಯ ವಾದ ಬ್ರಹ್ಮವೇ ನಾನು.

ನಾರಾಯಣೋಽಹಂ ನರಕಾಂತಕೋಽಹಂ
ಪುರಾಂತಕೋಽಹಂ ಪುರುಷೋಽಹಮೀಶಃ ।
ಅಖಂಡಬೋಧೋಽಹಮಶೇಷಸಾಕ್ಷೀ
ನಿರೀಶ್ವರೋಽಹಂ ನಿರಹಂ ಚ ನಿರ್ಮಮಃ ॥ ೪೯೩ ॥

**ಅಹಂ** = ನಾನು **ನಾರಾಯಣಃ** = ನಾರಾಯಣನು **ಅಹಂ ನರಕಾಂತಕಃ** = ನರಕಾಂತಕನು **ಅಹಂ ಪುರಾಂತಕಃ** = ತ್ರಿಪುರಾಸುರಸಂಹಾರಿಯು **ಅಹಂ ಪುರುಷಃ** = ಹೃದಯದಲ್ಲಿರುವವನು **ಈಶಃ** = ಈಶ್ವರನು **ಅಹಮ್ ಅಖಂಡಬೋಧಃ** = ಅಖಂಡ ಜ್ಞಾನಸ್ವರೂಪನು **ಅಶೇಷಸಾಕ್ಷೀ** = ಸರ್ವಸಾಕ್ಷಿಯು **ಅಹಂ ನಿರೀಶ್ವರಃ** = ತನಗೆ ಬೇರೊಬ್ಬ ಈಶ್ವರನಿಲ್ಲದವನು **ನಿರಹಂ ಚ** = ಅಹಂಕಾರಶೂನ್ಯನು **ನಿರ್ಮಮಃ** = ಮಮಕಾರಶೂನ್ಯನು.

**೪೯೩.** ನಾನೇ ನಾರಾಯಣನು, ನರಕಾಂತಕನು,[೧] ತ್ರಿಪುರಾಸುರ ಸಂಹಾರಿಯಾದ ಶಿವನು; ನಾನೇ ಹೃದಯಗುಹೆಯಲ್ಲಿರುವ ಅಂತರ್ಯಾಮಿಯು ಮತ್ತು ಈಶ್ವರನು; ನಾನೇ ಅಖಂಡಜ್ಞಾನಸ್ವರೂಪನು ಮತ್ತು ಸರ್ವಸಾಕ್ಷಿಯು; ನನಗೆ ಮತ್ತೊಬ್ಬ ಈಶ್ವರನಿಲ್ಲ; ನನಗೆ ಅಹಂಕಾರ-ಮಮಕಾರಗಳಿಲ್ಲ.

[[೧] ಶ್ರೀಕೃಷ್ಣನು;ಅಥವಾ ಭಕ್ತರನ್ನು ನರಕದುಃಖದಿಂದ ನಿವಾರಿಸುವವನು.]

ಸರ್ವೇಷು ಭೂತೇಷ್ವಹಮೇವ ಸಂಸ್ಥಿತೋ
ಜ್ಞಾನಾತ್ಮನಾಽಂತರ್ಬಹಿರಾಶ್ರಯಃ ಸನ್ ।
ಭೋಕ್ತಾ ಚ ಭೋಗ್ಯಂ ಸ್ವಯಮೇವ ಸರ್ವಂ
ಯದ್ಯತ್ ಪೃಥಗ್ದೃಷ್ಟಮಿದಂತಯಾ ಪುರಾ ॥ ೪೯೪ ॥

**ಅಹಮ್ ಏವ** = ನಾನೇ **ಜ್ಞಾನಾತ್ಮನಾ** = ಜ್ಞಾನಸ್ವರೂಪದಿಂದ **ಅಂತಃ** = ಒಳಗೂ **ಬಹಿಃ** = ಹೊರಗೂ **ಆಶ್ರಯಃ ಸನ್** = ಆಶ್ರಯನಾಗಿ **ಸರ್ವೇಷು ಭೂತೇಷು** = ಸಮಸ್ತ ಭೂತಗಳಲ್ಲಿ **ಸಂಸ್ಥಿತಃ** = ಇರುತ್ತೇನೆ; [ನಾನೇ] **ಭೋಕ್ತಾ ಚ** = ಭೋಕ್ತೃವೂ **ಭೋಗ್ಯಂ** = ಭೋಗ್ಯವೂ [ಆಗಿದ್ದೇನೆ]; **ಪುರಾ** = ಮೊದಲು **ಯತ್ ಯತ್** = ಯಾವಯಾವುದು **ಇದಂತಯಾ** = 'ಇದು' ಎಂಬ ಭಾವನೆಯಿಂದ **ಪೃಥಕ್** = ಬೇರೆಯಾಗಿ **ದೃಷ್ಟಂ** = ನೋಡಲ್ಪಟ್ಟಿತ್ತೊ **ಸರ್ವಂ** = ಅದೆಲ್ಲವೂ **ಸ್ವಯಮ್ ಏವ** = ನಾನೇ.

**೪೯೪.** ನಾನೇ ಜ್ಞಾನಸ್ವರೂಪದಿಂದ ಒಳಗೂ ಹೊರಗೂ ಆಶ್ರಯನಾಗಿ ಸರ್ವಭೂತಗಳಲ್ಲಿಯೂ ಇದ್ದೇನೆ. ಭೋಕ್ತೃವೂ ಭೋಗ್ಯವೂ ನಾನೇ.

ಮೊದಲು ಯಾವಯಾವುದು 'ಇದು' ಎಂಬ ಭಾವನೆಯಿಂದ ಬೇರೆಬೇರೆಯಾಗಿ ಕಾಣುತ್ತಿತ್ತೊ ಅದೆಲ್ಲವೂ ನಾನೇ ಆಗಿದ್ದೇನೆ.

**ಮಯ್ಯಖಂಡ-ಸುಖಾಂಭೋಧೌ ಬಹುಧಾ ವಿಶ್ವವೀಚಯಃ ।**
**ಉತ್ಪದ್ಯಂತೇ ವಿಲೀಯಂತೇ ಮಾಯಾಮಾರುತ-ವಿಭ್ರಮಾತ್**
**॥ ೪೯೫ ॥**

**ಅಖಂಡ-ಸುಖ-ಅಂಭೋಧೌ** = ಅಖಂಡಾನಂದಸಮುದ್ರಸ್ವರೂಪನಾಗಿರುವ **ಮಯಿ** = ನನ್ನಲ್ಲಿ **ವಿಶ್ವವೀಚಯಃ** = ವಿಶ್ವಗಳೆಂಬ ತರಂಗಗಳು **ಮಾಯಾ-ಮಾರುತ-ವಿಭ್ರಮಾತ್** = ಮಾಯೆಯೆಂಬ ಸುಂಟರಗಾಳಿಯಿಂದ **ಬಹುಧಾ** = ಅನೇಕವಿಧವಾಗಿ **ಉತ್ಪದ್ಯಂತೇ** = ಹುಟ್ಟುತ್ತವೆ, **ವಿಲೀಯಂತೇ** = ನಾಶವಾಗುತ್ತವೆ.

**೪೯೫.** ಅಖಂಡಾನಂದ-ಸಮುದ್ರ-ಸ್ವರೂಪನಾಗಿರುವ ನನ್ನಲ್ಲಿ ವಿಶ್ವಗಳೆಂಬ ತರಂಗಗಳು ಮಾಯೆಯೆಂಬ ಸುಂಟರಗಾಳಿಯಿಂದ ಅನೇಕ ವಿಧವಾಗಿ ಹುಟ್ಟುತ್ತವೆ, ನಾಶವಾಗುತ್ತವೆ.

**ಸ್ಥೂಲಾದಿಭಾವಾ ಮಯಿ ಕಲ್ಪಿತಾ ಭ್ರಮಾ-**
**ದಾರೋಪಿತಾನುಸ್ಫುರಣೇನ ಲೋಕೈಃ ।**
**ಕಾಲೇ ಯಥಾ ಕಲ್ಪಕ-ವತ್ಸರಾಯ-**
**ನರ್ತ್ವಾದಯೋ ನಿಷ್ಕಲ-ನಿರ್ವಿಕಲ್ಪೇ ॥ ೪೯೬ ॥**

**ಯಥಾ** = ಹೇಗೆ **ನಿಷ್ಕಲ-ನಿರ್ವಿಕಲ್ಪೇ** = ನಿರವಯವವೂ ನಿರ್ವಿಶೇಷವೂ ಆದ **ಕಾಲೇ** = ಕಾಲದಲ್ಲಿ **ಕಲ್ಪಕ-ವತ್ಸರ-ಅಯನ-ಋತು-ಆದಯಃ** = ಕಲ್ಪ ಸಂವತ್ಸರ ಅಯನ ಋತು ಮೊದಲಾದುವು [**ಕಲ್ಪಿತಾಃ** = ಕಲ್ಪಿತವಾಗಿವೆಯೊ **ತಥಾ** = ಹಾಗೆ] **ಲೋಕೈಃ** = ಜನರಿಂದ **ಸ್ಥೂಲಾದಿಭಾವಾಃ** = ಸ್ಥೂಲವೇ ಮೊದಲಾದ ಭಾವಗಳು **ಆರೋಪಿತ-ಅನುಸ್ಫುರಣೇನ** = ಆರೋಪಿತವಾಗಿ ತೋರುತ್ತಿರುವುದರ ಮೂಲಕ **ಮಯಿ** = ನನ್ನಲ್ಲಿ **ಭ್ರಮಾತ್** = ಭ್ರಮೆಯಿಂದ **ಕಲ್ಪಿತಾಃ** = ಕಲ್ಪಿಸಲ್ಪಟ್ಟಿವೆ.

**೪೯೬.** ನಿರವಯವವೂ ನಿರ್ವಿಶೇಷವೂ ಆದ ಕಾಲದಲ್ಲಿ ಕಲ್ಪ ಸಂವತ್ಸರ ಅಯನ ಋತು ಮೊದಲಾದುವು ಹೇಗೆ ಕಲ್ಪಿತವಾಗಿವೆಯೊ ಹಾಗೆಯೇ ನನ್ನಲ್ಲಿ ಸ್ಥೂಲ-ಸೂಕ್ಷ್ಮಾದಿ-ಭಾವಗಳನ್ನು—ಆರೋಪಿತವಾಗಿ ತೋರುತ್ತಿರುವ ವಸ್ತುಗಳ ಮೂಲಕ—ಜನರು ಭ್ರಾಂತಿಯಿಂದ ಕಲ್ಪಿಸುತ್ತಾರೆ.

**ಆರೋಪಿತಂ ನಾಶ್ರಯದೂಷಕಂ ಭವೇತ್**
**ಕದಾಽಪಿ ಮೂಢೈರ್ಮತಿದೋಷದೂಷಿತೈಃ ।**

**ನಾರ್ದ್ರೀಕರೋತ್ಯೂಷರ-ಭೂಮಿಭಾಗಂ**
**ಮರೀಚಿಕಾ-ವಾರಿ-ಮಹಾಪ್ರವಾಹಃ ॥ ೪೯೭ ॥**

**ಮತಿ-ದೋಷ-ದೂಷಿತೈಃ** = ಬುದ್ಧಿಯ ದೋಷದಿಂದ ಕಲುಷಿತರಾಗಿರುವ **ಮೂಢೈಃ** = ಮೂಢರಿಂದ **ಆರೋಪಿತಂ** = ಆರೋಪಿತವಾದದ್ದು **ಕದಾ ಅಪಿ** = ಎಂದಿಗೂ **ಆಶ್ರಯ-ದೂಷಕಂ ನ ಭವೇತ್** = ಅಧಿಷ್ಠಾನವಾದುದಕ್ಕೆ ದೋಷವನ್ನುಂಟುಮಾಡುವುದಿಲ್ಲ; **ಮರೀಚಿಕಾ-ವಾರಿ-ಮಹಾಪ್ರವಾಹಃ** - ಬಿಸಿಲ್ಗುದುರೆಯ ನೀರಿನ ಪ್ರವಾಹವು **ಊಷರ-ಭೂಮಿ-ಭಾಗಂ** = ಮರುಭೂಮಿಯನ್ನು **ನ ಆರ್ದ್ರೀಕರೋತಿ** = ನೆನೆಯಿಸಲಾರದು.

**೪೯೭.** ಬುದ್ಧಿಯ ದೋಷದಿಂದ ಕಲುಷಿತರಾಗಿರುವ ಮೂಢರಿಂದ ಆರೋಪಿತವಾದದ್ದು ಅಧಿಷ್ಠಾನವಾದ ವಸ್ತುವಿಗೆ ಎಂದಿಗೂ ದೋಷವನ್ನುಂಟುಮಾಡುವುದಿಲ್ಲ; ಬಿಸಿಲ್ಗುದುರೆಯ ನೀರಿನ ಪ್ರವಾಹವು ಮರುಭೂಮಿಯನ್ನು ಎಂದಿಗೂ ನೆನೆಯಿಸಲಾರದು.

['ಹೀಗಿರುವಾಗ ಯಾವುದರಲ್ಲಿ ಯಾವುದನ್ನು ಅಧ್ಯಾಸಮಾಡಿದೆಯೊ ಅದರಿಂದ ಉಂಟಾದ ಗುಣವಾಗಲಿ ದೋಷವಾಗಲಿ ಅದಕ್ಕೆ (ಎಂದರೆ ಆಶ್ರಯಕ್ಕೆ) ಸ್ವಲ್ಪವೂ ಸಂಬಂಧಿಸಿರುವುದಿಲ್ಲ' **ತತ್ರ ಏವಂ ಸತಿ ಯತ್ರ ಯದಧ್ಯಾಸಃ ತತ್ಕೃತೇನ ಗುಣೇನ ದೋಷೇಣ ವಾ ಅಣುಮಾತ್ರೇಣಾಪಿ ಸ ನ ಸಂಬಧ್ಯತೇ ।** (ಅಧ್ಯಾಸ-ಭಾಷ್ಯ)]

**ಆಕಾಶವಲ್ಲೇಪ-ವಿದೂರಗೋಽಹಮ್**
**ಆದಿತ್ಯವದ್ಭಾಸ್ಯ-ವಿಲಕ್ಷಣೋಽಹಮ್ ।**
**ಅಹಾರ್ಯವನ್ನಿತ್ಯವಿನಿಶ್ಚಲೋಽಹಮ್**
**ಅಂಭೋಧಿವತ್ಪಾರ-ವಿವರ್ಜಿತೋಽಹಮ್ ॥ ೪೯೮ ॥**

**ಅಹಂ** = ನಾನು **ಆಕಾಶವತ್** = ಆಕಾಶದಂತೆ **ಲೇಪ-ವಿದೂರಗಃ** = ನಿರ್ಲಿಪ್ತನು; **ಅಹಮ್ ಆದಿತ್ಯವತ್** = ಸೂರ್ಯನಂತೆ **ಭಾಸ್ಯ-ವಿಲಕ್ಷಣಃ** = ಬೆಳಗಲ್ಪಡುವ ವಸ್ತುಗಳಿಗಿಂತ ಭಿನ್ನನು; **ಅಹಮ್ ಅಹಾರ್ಯವತ್** = ಪರ್ವತದಂತೆ **ನಿತ್ಯ-ವಿನಿಶ್ಚಲಃ** = ಯಾವಾಗಲೂ ಅಚಲನಾದವನು; **ಅಹಮ್ ಅಂಭೋಧಿವತ್** = ಸಮುದ್ರದಂತೆ **ಪಾರ-ವಿವರ್ಜಿತಃ** = ಪಾರವಿಲ್ಲದವನು.

**೪೯೮.** ನಾನು ಆಕಾಶದಂತೆ ನಿರ್ಲಿಪ್ತನು. ನಾನು ಸೂರ್ಯನಂತೆ ಬೆಳಗಲ್ಪಡುವ ವಸ್ತುಗಳಿಗಿಂತ ಅತ್ಯಂತ ಭಿನ್ನನು. ನಾನು ಪರ್ವತದಂತೆ ಯಾವಾಗಲೂ ಅಚಲನಾದವನು. ನಾನು ಸಮುದ್ರದಂತೆ ಪಾರವಿಲ್ಲದವನು.

**ನ ಮೇ ದೇಹೇನ ಸಂಬಂಧೋ ಮೇಘೇನೇವ ವಿಹಾಯಸಃ ।**
**ಅತಃ ಕುತೋ ಮೇ ತದ್ಧರ್ಮಾ ಜಾಗ್ರತ್ಸ್ವಪ್ನಸುಷುಪ್ತಯಃ ॥ ೪೯೯ ॥**

**ವಿಹಾಯಸಃ** = ಆಕಾಶಕ್ಕೆ **ಮೇಘೇನ ಇವ** = ಮೇಘದೊಂದಿಗೆ ಹೇಗೋ ಹಾಗೆ **ಮೇ** = ನನಗೆ **ದೇಹೇನ** = ದೇಹದೊಂದಿಗೆ **ಸಂಬಂಧಃ** = ಸಂಬಂಧವು **ನ** = ಇಲ್ಲವು; **ಅತಃ** = ಆದುದರಿಂದ **ತದ್ಧರ್ಮಾಃ** = ಅದರ ಧರ್ಮಗಳಾದ **ಜಾಗ್ರತ್-ಸ್ವಪ್ನ-ಸುಷುಪ್ತಯಃ** = ಜಾಗ್ರತ್ಸ್ವಪ್ನಸುಷುಪ್ತಿಗಳು **ಮೇ** = ನನಗೆ **ಕುತಃ** = ಎಲ್ಲಿಯವು?

**೪೯೯.** ಆಕಾಶಕ್ಕೆ ಮೇಘದ ಸಂಬಂಧವಿಲ್ಲದಿರುವಂತೆ ನನಗೆ ದೇಹದ ಸಂಬಂಧವಿರುವುದಿಲ್ಲ. ಆದುದರಿಂದ ಅದರ ಧರ್ಮಗಳಾದ ಜಾಗ್ರತ್-ಸ್ವಪ್ನ ಸುಷುಪ್ತಿಗಳು ನನಗೆ ಎಲ್ಲಿಂದ ಬರುವುವು?

**ಉಪಾಧಿರಾಯಾತಿ ಸ ಏವ ಗಚ್ಛತಿ**
**ಸ ಏವ ಕರ್ಮಾಣಿ ಕರೋತಿ ಭುಂಕ್ತೇ ।**
**ಸ ಏವ ಜೀರ್ಯನ್ಮ್ರಿಯತೇ ಸದಾಽಹಂ**
**ಕುಲಾದ್ರಿವನ್ನಿಶ್ಚಲ ಏವ ಸಂಸ್ಥಿತಃ ॥ ೫೦೦ ॥**

**ಉಪಾಧಿಃ** = ಉಪಾಧಿಯು **ಆಯಾತಿ** = ಬರುತ್ತದೆ, **ಸಃ ಏವ** = ಅದೇ **ಗಚ್ಛತಿ** = ಹೋಗುತ್ತದೆ, **ಸಃ ಏವ ಕರ್ಮಾಣಿ** = ಕರ್ಮಗಳನ್ನು **ಕರೋತಿ** = ಮಾಡುತ್ತದೆ, **ಭುಂಕ್ತೇ** = ಫಲವನ್ನು ಭೋಗಿಸುತ್ತದೆ, **ಸಃ ಏವ ಜೀರ್ಯನ್** = ಮುಪ್ಪನ್ನು ಹೊಂದಿ **ಮ್ರಿಯತೇ** = ನಾಶವಾಗುತ್ತದೆ; **ಅಹಂ** = ನಾನು **ಸದಾ** = ಯಾವಾಗಲೂ **ಕುಲಾದ್ರಿವತ್** = ಕುಲಾಚಲದಂತೆ **ನಿಶ್ಚಲಃ ಏವ** = ನಿಶ್ಚಲನಾಗಿಯೇ **ಸಂಸ್ಥಿತಃ** = ಇರುತ್ತೇನೆ.

**೫೦೦.** ಉಪಾಧಿಯು ಬರುತ್ತದೆ, ಅದೇ ಹೋಗುತ್ತದೆ; ಅದೇ ಕರ್ಮಗಳನ್ನು ಮಾಡುತ್ತದೆ, ಫಲವನ್ನು ಭೋಗಿಸುತ್ತದೆ; ಅದೇ ಮುಪ್ಪನ್ನು ಹೊಂದಿ ನಾಶವಾಗುತ್ತದೆ. (ಆದರೆ) ನಾನು ಯಾವಾಗಲೂ ಕುಲಾಚಲದಂತೆ ನಿಶ್ಚಲನಾಗಿಯೇ ಇರುತ್ತೇನೆ.

**ನ ಮೇ ಪ್ರವೃತ್ತಿರ್ನ ಚ ಮೇ ನಿವೃತ್ತಿಃ**
**ಸದೈಕರೂಪಸ್ಯ ನಿರಂಶಕಸ್ಯ ।**
**ಏಕಾತ್ಮಕೋ ಯೋ ನಿಬಿಡೋ ನಿರಂತರೋ**
**ವ್ಯೋಮೇವ ಪೂರ್ಣಃ ಸ ಕಥಂ ನು ಚೇಷ್ಟತೇ ॥ ೫೦೧ ॥**

**ಸದಾ** = ಯಾವಾಗಲೂ **ಏಕರೂಪಸ್ಯ** = ಏಕರೂಪನಾದ **ನಿರಂಶಕಸ್ಯ** = ನಿರವಯುವನಾದ **ಮೇ** = ನನಗೆ **ನ ಪ್ರವೃತ್ತಿಃ** = ಪ್ರವೃತ್ತಿಯಿಲ್ಲ, **ಮೇ ನ ಚ ನಿವೃತ್ತಿಃ**= ನಿವೃತ್ತಿಯಿಲ್ಲ; **ಯಃ**= ಯಾವನು **ಏಕಾತ್ಮಕಃ**= ಏಕರೂಪನೊ **ನಿಬಿಡಃ**= ಸಾಂದ್ರನೊ **ನಿರಂತರಃ**= ನಿರವಕಾಶನೊ **ವ್ಯೋಮ ಇವ**= ಆಕಾಶದಂತೆ **ಪೂರ್ಣಃ**= ಪೂರ್ಣನೊ **ಸಃ** = ಅವನು **ಕಥಂ ನು ಚೇಷ್ಟತೇ**= ಹೇಗೆ ತಾನೇ ಕೆಲಸವನ್ನು ಮಾಡಿಯಾನು?

**೫೦೧.** ಯಾವಾಗಲೂ ಏಕರೂಪನಾದ ನಿರವಯುವನಾದ ನನಗೆ ಪ್ರವೃತ್ತಿಯೂ ಇಲ್ಲ, ನಿವೃತ್ತಿಯೂ ಇಲ್ಲ. ಯಾವನು ಏಕರೂಪದವನೊ ಸಾಂದ್ರನೊ[೧] ನಿರವಕಾಶನೊ ಆಕಾಶದಂತೆ ಪೂರ್ಣನೊ ಅವನು ಹೇಗೆ ತಾನೇ ಕೆಲಸವನ್ನು ಮಾಡಿಯಾನು?

[[೧] ಉಪ್ಪಿನ ಹರಳಿನಂತೆ ಘನವಾಗಿರುವುದು.]

**ಪುಣ್ಯಾನಿ ಪಾಪಾನಿ ನಿರಿಂದ್ರಿಯಸ್ಯ**
**ನಿಶ್ಚೇತಸೋ ನಿರ್ವಿಕೃತೇರ್ನಿರಾಕೃತೇಃ ।**
**ಕುತೋ ಮಮಾಖಂಡ-ಸುಖಾನುಭೂತೇ-**
**ರ್ಬ್ರೂತೇ ಹ್ಯನನ್ವಾಗತಮಿತ್ಯಪಿ ಶ್ರುತಿಃ ॥ ೫೦೨ ॥**

**ನಿರಿಂದ್ರಿಯಸ್ಯ** = ಇಂದ್ರಿಯರಹಿತನಾದ **ನಿಶ್ಚೇತಸಃ** = ಚಿತ್ತರಹಿತನಾದ **ನಿರ್ವಿಕೃತೇಃ** = ನಿರ್ವಿಕಾರನಾದ **ನಿರಾಕೃತೇಃ** = ಆಕಾರ-ರಹಿತನಾದ **ಅಖಂಡ-ಸುಖಾನುಭೂತೇಃ** = ಅಖಂಡಾನಂದಾನುಭವನಾದ **ಮಮ** = ನನಗೆ **ಪುಣ್ಯಾನಿ** = ಪುಣ್ಯಗಳಾಗಲಿ **ಪಾಪಾನಿ** = ಪಾಪಗಳಾಗಲಿ **ಕುತಃ** = ಎಲ್ಲಿಂದ ಬಂದಾವು? **ಶ್ರುತಿಃ ಹಿ** = ಶ್ರುತಿಯೂ **ಅನನ್ವಾಗತಂ** = ಸ್ಪೃಷ್ಟವಾಗಿಲ್ಲ **ಇತಿ ಅಪಿ** = ಎಂದೇ **ಬ್ರೂತೇ** = ಹೇಳುತ್ತದೆ.

**೫೦೨.** ಇಂದ್ರಿಯರಹಿತನೂ ಚಿತ್ತವಿಲ್ಲದವನೂ ನಿರ್ವಿಕಾರನೂ ನಿರಾಕಾರನೂ ಅಖಂಡಾನಂದಾನುಭವ-ಸ್ವರೂಪನೂ ಆದ ನನಗೆ ಪುಣ್ಯಗಳಾಗಲಿ ಪಾಪಗಳಾಗಲಿ ಎಲ್ಲಿಂದ ಬಂದಾವು? 'ಸ್ಪೃಷ್ಟವಾಗಿಲ್ಲ' ಎಂದೇ ಶ್ರುತಿಯು ಹೇಳುತ್ತದೆ.[೧]

[[೧] '(ಈ ರೂಪವು) ಪುಣ್ಯದಿಂದ ಸ್ಪೃಷ್ಟವಾಗಿಲ್ಲ, ಪಾಪದಿಂದ ಸ್ಪೃಷ್ಟವಾಗಿಲ್ಲ; ಏಕೆಂದರೆ ಅವನು ಬುದ್ಧಿಯ ಶೋಕಗಳನ್ನೆಲ್ಲ ದಾಟಿರುತ್ತಾನೆ' **ಅನನ್ವಾಗತಂ ಪುಣ್ಯೇನ, ಅನನ್ವಾಗತಂ ಪಾಪೇನ, ತೀರ್ಣೋ ಹಿ ತದಾ ಸರ್ವಾಂಛೋಕಾನ್ ಹೃದಯಸ್ಯ ಭವತಿ** (ಬೃಹದಾರಣ್ಯಕ ಉ. ೪. ೩. ೨೨) ಎಂದು ಶ್ರುತಿಯು ಸುಷುಪ್ತಾವಸ್ಥೆಯ ಅನುಭವವನ್ನು ತಿಳಿಸುತ್ತದೆ.]

**ಛಾಯಯಾ ಸ್ಪೃಷ್ಟಮುಷ್ಣಂ ವಾ ಶೀತಂ ವಾ ಸುಷ್ಠು ದುಷ್ಠು ವಾ ।**
**ನ ಸ್ಪೃಶತ್ಯೇವ ಯತ್ಕಿಂಚಿತ್ ಪುರುಷಂ ತದ್ವಿಲಕ್ಷಣಮ್ ॥ ೫೦೩ ॥**

**ಛಾಯಯಾ** = ನೆರಳಿನಿಂದ **ಸ್ಪೃಷ್ಟಂ** = ಮುಟ್ಟಲ್ಪಟ್ಟ **ಉಷ್ಣಂ ವಾ** = ಉಷ್ಣವಾಗಲಿ **ಶೀತಂ ವಾ** = ಶೀತವಾಗಲಿ **ಸುಷ್ಠು** = ಒಳ್ಳೆಯದಾಗಲಿ **ದುಷ್ಠು ವಾ** = ಕೆಟ್ಟದಾಗಲಿ **ಯತ್ಕಿಂಚಿತ್** = ಯಾವುದೊಂದೂ **ತದ್ವಿಲಕ್ಷಣಂ** = ಅದಕ್ಕಿಂತ ಭಿನ್ನನಾದ **ಪುರುಷಂ** = ಪುರುಷನನ್ನು **ನ ಸ್ಪೃಶತಿ ಏವ** = ಸೋಂಕುವುದೇ ಇಲ್ಲ.

**೫೦೩.** ನೆರಳಿನ ಮೂಲಕ ಮುಟ್ಟಿದ ಉಷ್ಣವಾಗಲಿ ಶೀತವಾಗಲಿ, ಒಳ್ಳೆಯದಾಗಲಿ ಕೆಟ್ಟದಾಗಲಿ, ನೆರಳಿಗಿಂತ ಭಿನ್ನನಾದ ಪುರುಷನನ್ನು ಸೋಂಕುವುದೇ ಇಲ್ಲ.

**ನ ಸಾಕ್ಷಿಣಂ ಸಾಕ್ಷ್ಯಧರ್ಮಾಃ ಸಂಸ್ಪೃಶಂತಿ ವಿಲಕ್ಷಣಮ್ ।**
**ಅವಿಕಾರಮುದಾಸೀನಂ ಗೃಹಧರ್ಮಾಃ ಪ್ರದೀಪವತ್ ॥ ೫೦೪ ॥**

**ಗೃಹಧರ್ಮಾಃ** = ಮನೆಯ ಧರ್ಮಗಳು **ಪ್ರದೀಪವತ್** = ದೀಪವನ್ನು ಹೇಗೋ ಹಾಗೆ **ಸಾಕ್ಷ್ಯಧರ್ಮಾಃ** = ದೃಶ್ಯವಸ್ತುಗಳ ಧರ್ಮಗಳು **ಅವಿಕಾರಂ** = ನಿರ್ವಿಕಾರನಾದ **ಉದಾಸೀನಂ** = ಉದಾಸೀನನಾದ **ವಿಲಕ್ಷಣಂ** = ವಿಲಕ್ಷಣನಾದ **ಸಾಕ್ಷಿಣಂ** = ಸಾಕ್ಷಿಯನ್ನು **ನ ಸಂಸ್ಪೃಶಂತಿ** = ಮುಟ್ಟುವುದಿಲ್ಲ.

**೫೦೪.** ಮನೆಯ ಧರ್ಮಗಳು (ಅವುಗಳನ್ನು ಪ್ರಕಾಶಿಸುವ) ಪ್ರದೀಪವನ್ನು ಮುಟ್ಟದಿರುವಂತೆ ನಿರ್ವಿಕಾರನೂ ಉದಾಸೀನನೂ ವಿಲಕ್ಷಣನೂ ಆದ ಸಾಕ್ಷಿಯನ್ನು ದೃಶ್ಯವಸ್ತುಗಳ ಧರ್ಮಗಳು ಮುಟ್ಟುವುದಿಲ್ಲ.

**ರವೇರ್ಯಥಾ ಕರ್ಮಣಿ ಸಾಕ್ಷಿಭಾವೋ**
**ವಹ್ನೇರ್ಯಥಾ ದಾಹ-ನಿಯಾಮಕತ್ವಮ್ ।**
**ರಜ್ಜೋರ್ಯಥಾಽಽರೋಪಿತವಸ್ತು-ಸಂಗ-**
**ಸ್ತಥೈವ ಕೂಟಸ್ಥ-ಚಿದಾತ್ಮನೋ ಮೇ ॥ ೫೦೫ ॥**

**ಕರ್ಮಣಿ** = ಕರ್ಮದಲ್ಲಿ **ರವೇಃ** = ಸೂರ್ಯನಿಗೆ **ಸಾಕ್ಷಿಭಾವಃ** = ಸಾಕ್ಷಿತ್ವವು **ಯಥಾ** = ಹೇಗೋ, **ವಹ್ನೇಃ** = ಅಗ್ನಿಗೆ **ದಾಹ-ನಿಯಾಮಕತ್ವಂ** = ದಹಿಸುವಿಕೆಯು **ಯಥಾ, ರಜ್ಜೋಃ** = ಹಗ್ಗಕ್ಕೆ **ಆರೋಪಿತ-ವಸ್ತು-ಸಂಗಃ** = ಆರೋಪಿಸಲ್ಪಟ್ಟ ವಸ್ತುವಿನ ಸಂಬಂಧವು **ಯಥಾ, ತಥಾ ಏವ** = ಹಾಗೆಯೇ **ಕೂಟಸ್ಥ-ಚಿದಾತ್ಮನಃ** = ಕೂಟಸ್ಥ-ಚಿತ್ಸ್ವರೂಪನಾದ ನನಗೆ [ಸಾಕ್ಷಿಭಾವವು].

**೫೦೫.** (ಮನುಷ್ಯರು ಮಾಡುವ ಒಳ್ಳೆಯ ಮತ್ತು ಕೆಟ್ಟ) ಕರ್ಮಗಳಿಗೆ ಸೂರ್ಯನು ಹೇಗೆ ಸಾಕ್ಷಿಯೋ,[೧] ಅಗ್ನಿಯು ಎಲ್ಲವನ್ನೂ ಹೇಗೆ ದಹಿಸುವುದೋ,[೨] ಹಗ್ಗವು ತನ್ನಲ್ಲಿ ಆರೋಪಿತವಾದ ವಸ್ತುವಿನೊಂದಿಗೆ ಹೇಗೆ ಸಂಬಂಧವನ್ನು ಪಡೆದಿದೆಯೋ[೩] ಹಾಗೆಯೇ ಕೂಟಸ್ಥ-ಚಿತ್ಸ್ವರೂಪನಾದ ನನಗೆ (ಸಾಕ್ಷಿಭಾವವಿರುತ್ತದೆ).

[೧ ಸೂರ್ಯನ ಬೆಳಕಿನಲ್ಲಿ ಮನುಷ್ಯರು ಎಂಥ ಕೆಲಸವನ್ನು ಮಾಡಿದರೂ ಅದರಿಂದ ಅವನು ಲಿಪ್ತನಾಗುವುದಿಲ್ಲ.

೨ ದಹಿಸಲ್ಪಟ್ಟ ವಸ್ತುಗಳ ಧರ್ಮಗಳಿಂದ ಅಗ್ನಿಯು ಲಿಪ್ತವಾಗುವುದಿಲ್ಲ.

೩ ಹಗ್ಗಕ್ಕೂ ಹಾವಿಗೂ ಇರುವ ಸಂಬಂಧವು ಕೇವಲ ಕಲ್ಪನೆ.]

**ಕರ್ತಾಽಪಿ ವಾ ಕಾರಯಿತಾಽಪಿ ನಾಹಂ**
**ಭೋಕ್ತಾಽಪಿ ವಾ ಭೋಜಯಿತಾಽಪಿ ನಾಹಮ್ ।**
**ದ್ರಷ್ಟಾಽಪಿ ವಾ ದರ್ಶಯಿತಾಽಪಿ ನಾಹಂ**
**ಸೋಽಹಂ ಸ್ವಯಂಜ್ಯೋತಿರನೀದೃಗಾತ್ಮಾ ॥ ೫೦೬ ॥**

**ಅಹಂ** = ನಾನು **ಕರ್ತಾ ಅಪಿ ವಾ** = ಕರ್ತೃವೂ **ಕಾರಯಿತಾ ಅಪಿ** = ಮಾಡಿಸುವವನೂ **ನ** = ಅಲ್ಲ, **ಅಹಂ ಭೋಕ್ತಾ ಅಪಿ ವಾ** = ಭೋಕ್ತೃವೂ **ಭೋಜಯಿತಾ ಅಪಿ** = ಅನುಭವಿಸುವಂತೆ ಮಾಡುವವನೂ **ನ, ಅಹಂ ದ್ರಷ್ಟಾ ಅಪಿ ವಾ** = ದ್ರಷ್ಟೃವೂ **ದರ್ಶಯಿತಾ ವಾ** = ತೋರಿಸುವವನೂ **ನ; ಸಃ ಅಹಂ** = ಆ ನಾನು **ಸ್ವಯಂಜ್ಯೋತಿಃ** = ಸ್ವಯಂಜ್ಯೋತಿಯು, **ಅನೀದೃಕ್-ಆತ್ಮಾ** = ಇದಕ್ಕಿಂತ ಬೇರೆಯ ಸ್ವರೂಪದವನೇ.

**೫೦೬.** ನಾನು ಮಾಡುವವನಾಗಲಿ ಮಾಡಿಸುವವನಾಗಲಿ ಅಲ್ಲ, ಅನುಭವಿಸುವವನಾಗಲಿ (ಇತರರನ್ನು) ಅನುಭವಿಸುವಂತೆ ಮಾಡುವವನಾಗಲಿ ಅಲ್ಲ, ನೋಡುವವನಾಗಲಿ ತೋರಿಸುವವನಾಗಲಿ ಅಲ್ಲ; ಆ ನಾನು ಸ್ವಯಂ ಜ್ಯೋತಿಯು, ದೃಶ್ಯಜಗತ್ತಿಗಿಂತ ಭಿನ್ನಸ್ವರೂಪದವನು.

**ಚಲತ್ಯುಪಾಧೌ ಪ್ರತಿಬಿಂಬಲೌಲ್ಯ-**
**ಮೌಪಾಧಿಕಂ ಮೂಢಧಿಯೋ ನಯಂತಿ ।**
**ಸ್ವಬಿಂಬಭೂತಂ ರವಿವದ್ವಿನಿಷ್ಕ್ರಿಯಂ**
**ಕರ್ತಾಽಸ್ಮಿ ಭೋಕ್ತಾಽಸ್ಮಿ ಹತೋಽಸ್ಮಿ ಹೇತಿ ॥ ೫೦೭ ॥**

**ಮೂಢಧಿಯಃ** = ಮೂಢಬುದ್ಧಿಯುಳ್ಳವರು **ಉಪಾಧೌ ಚಲತಿ [ಸತಿ]** = ಉಪಾಧಿಯು ಚಲಿಸುತ್ತಿರಲಾಗಿ **ಔಪಾಧಿಕಂ** = ಉಪಾಧಿಸಂಬಂಧವಾದ **ಪ್ರತಿಬಿಂಬ-**

**ಲೌಲ್ಯಂ**=ಪ್ರತಿಬಿಂಬದ ಚಾಂಚಲ್ಯವನ್ನು **ರವಿವತ್**=ಸೂರ್ಯನಂತೆ **ವಿನಿಷ್ಕ್ರಿಯಂ**=ನಿಷ್ಕ್ರಿಯನಾದ **ಸ್ವಬಿಂಬಭೂತಂ**=ತಮ್ಮ ಬಿಂಬವಾದ [ಆತ್ಮನಿಗೆ] **ನಯಂತಿ**=ಸೇರಿಸುತ್ತಾರೆ; **ಕರ್ತಾ ಅಸ್ಮಿ**=ಕರ್ತೃವಾಗಿದ್ದೇನೆ, **ಭೋಕ್ತಾ ಅಸ್ಮಿ**=ಭೋಕ್ತೃವಾಗಿದ್ದೇನೆ, **ಹಾ ಹತಃ ಅಸ್ಮಿ**=ಅಯ್ಯೋ ಸತ್ತೆನು! **ಇತಿ**=ಎಂದು (ತಿಳಿಯುತ್ತಾರೆ).]

**೫೦೭.** ಉಪಾಧಿಯು ಅಲುಗಾಡಿದಾಗ ಅದರಲ್ಲಿ ಪ್ರತಿಬಿಂಬಿಸಿರುವುದೂ ಚಲಿಸುತ್ತದೆ.[೧] ಮೂಢಬುದ್ಧಿಯುಳ್ಳವರು ಈ ಚಾಂಚಲ್ಯವನ್ನು ಸೂರ್ಯನಂತೆ ನಿಷ್ಕ್ರಿಯನಾದ ತಮ್ಮ ಬಿಂಬವಾದ ಆತ್ಮನಿಗೆ ಸೇರಿಸುತ್ತಾರೆ. 'ನಾನು ಕರ್ತೃವು, ನಾನು ಭೋಕ್ತೃವು, ಅಯ್ಯೋ ನಾನು ಸತ್ತೆನು!'[೨] ಎಂದು ಭಾವಿಸುತ್ತಾರೆ.

[[೧] ಸೂರ್ಯನು ಪ್ರತಿಬಿಂಬಿಸಿರುವ ನೀರೇ ಉಪಾಧಿಯು. ನೀರು ಅಲುಗಾಡಿದಾಗ ಸೂರ್ಯನ ಪ್ರತಿಬಿಂಬವೂ ನೀರಿನೊಂದಿಗೆ ಅಲುಗಾಡುತ್ತದೆ, ಆದರೆ ಸೂರ್ಯನಿಗೆ ಈ ಅಲುಗಾಟವಿಲ್ಲ. ಇದನ್ನು ಕಂಡ ಯಾವನೋ ಮೂಢಬುದ್ಧಿಯು ಸೂರ್ಯನೇ ಚಲಿಸುತ್ತಾನೆಂದು ಭಾವಿಸಿಕೊಳ್ಳಬಹುದು. ಹೀಗೆಯೇ ಬುದ್ಧಿಯ ವೃತ್ತಿಗಳಲ್ಲಿ ಪ್ರತಿಬಿಂಬಿಸಿರುವ ಆತ್ಮನಿಗೆ ವೃತ್ತಿಗಳ ಚಾಂಚಲ್ಯವನ್ನು ಮೂಢಬುದ್ಧಿಗಳು ಆರೋಪಿಸುತ್ತಾರೆ.

[೨] ಇದು ಅಜ್ಞಾನಿಗಳ ಗೋಳಾಟ.]

**ಜಲೇ ವಾಽಪಿ ಸ್ಥಲೇ ವಾಽಪಿ ಲುಠತ್ವೇಷ ಜಡಾತ್ಮಕಃ ।**
**ನಾಹಂ ವಿಲಿಪ್ಯೇ ತದ್ಧರ್ಮೈರ್ಘಟಧರ್ಮೈರ್ನಭೋ ಯಥಾ ॥೫೦೮॥**

**ಜಡಾತ್ಮಕಃ**=ಜಡಸ್ವರೂಪವಾದ **ಏಷಃ**=ಈ ದೇಹವು **ಜಲೇ ವಾ ಅಪಿ**=ನೀರಿನಲ್ಲಿಯಾದರೂ **ಸ್ಥಲೇ ವಾ ಅಪಿ**=ನೆಲದ ಮೇಲಾದರೂ **ಲುಠತು**=ಬೀಳಲಿ; **ಘಟಧರ್ಮೈಃ**=ಗಡಿಗೆಯ ಧರ್ಮಗಳಿಂದ **ನಭಃ ಯಥಾ**=ಆಕಾಶವು ಹೇಗೋ ಹಾಗೆ, **ಅಹಂ**=ನಾನು **ತದ್ಧರ್ಮೈಃ**=ಆ ಧರ್ಮಗಳಿಂದ **ನ ವಿಲಿಪ್ಯೇ**=ಲಿಪ್ತನಾಗುವುದಿಲ್ಲ.

**೫೦೮.** ಈ ಜಡಸ್ವರೂಪವಾದ ದೇಹವು ನೀರಿನಲ್ಲಿಯಾದರೂ ನೆಲದ ಮೇಲಾದರೂ ಬೀಳಲಿ! ಗಡಿಗೆಯ ಧರ್ಮಗಳು ಆಕಾಶಕ್ಕೆ ಅಂಟದಿರುವಂತೆ ಈ ಶರೀರಧರ್ಮಗಳು ನನಗೆ ಅಂಟುವುದಿಲ್ಲ.

[ಗಡಿಗೆಯಲ್ಲಿ ಅವಚ್ಛಿನ್ನವಾಗಿರುವಂತೆ ಕಾಣುವ ಆಕಾಶವು ಬಾಹ್ಯಾಕಾಶದೊಂದಿಗೆ ಏಕವಾಗಿದೆ; ಗಡಿಗೆಯು ಒಡೆಯಲಿ ಒಡೆಯದಿರಲಿ ಆಕಾಶಕ್ಕೆ ಯಾವ ಭೇದವೂ ಉಂಟಾಗುವುದಿಲ್ಲ. ಆತ್ಮನಿಗೆ ಶರೀರದೊಂದಿಗೆ ಸಂಬಂಧವುಂಟಾದಂತೆ ಕಂಡು ಬಂದರೂ ಅವನ ನಿರಂಜನತ್ವಕ್ಕೆ ಯಾವ ಹಾನಿಯೂ ಆಗುವುದಿಲ್ಲ.]

**ಕರ್ತೃತ್ವ-ಭೋಕ್ತೃತ್ವ-ಖಲತ್ವ-ಮತ್ತತಾ-**
**ಜಡತ್ವ-ಬದ್ಧತ್ವ-ವಿಮುಕ್ತತಾದಯಃ ।**
**ಬುದ್ಧೇರ್ವಿಕಲ್ಪಾ ನ ತು ಸಂತಿ ವಸ್ತುತಃ**
**ಸ್ವಸ್ಮಿನ್ ಪರೇ ಬ್ರಹ್ಮಣಿ ಕೇವಲೇಽದ್ವಯೇ ॥ ೫೦೯ ॥**

**ಕರ್ತೃತ್ವ-ಭೋಕ್ತೃತ್ವ-ಖಲತ್ವ-ಮತ್ತತಾ-ಜಡತ್ವ-ಬದ್ಧತ್ವ-ವಿಮುಕ್ತತಾ-ಆದಯಃ** = ಕರ್ತೃತ್ವ ಭೋಕ್ತೃತ್ವ ನೀಚತ್ವ ಮತ್ತತೆ ಜಡತ್ವ ಬದ್ಧತ್ವ ಮುಕ್ತತ್ವ ಮೊದಲಾದುವು **ಬುದ್ಧೇಃ** = ಬುದ್ಧಿಯ **ವಿಕಲ್ಪಾಃ** = ಧರ್ಮಗಳು, **ಕೇವಲೇ** = ಕೇವಲವಾದ **ಅದ್ವಯೇ** = ಅದ್ವಯವಾದ **ಸ್ವಸ್ಮಿನ್** = ತನ್ನ ಆತ್ಮನಾದ **ಪರೇ ಬ್ರಹ್ಮಣಿ** = ಪರಬ್ರಹ್ಮದಲ್ಲಿ **ವಸ್ತುತಃ** = ನಿಜವಾಗಿ **ನ ತು ಸಂತಿ** = ಇಲ್ಲವು.

**೫೦೯.** ಕರ್ತೃತ್ವ ಭೋಕ್ತೃತ್ವ ನೀಚತ್ವ ಮತ್ತತೆ ಜಡತ್ವ ಬದ್ಧತ್ವ ಮುಕ್ತತ್ವ—ಇವೇ ಮೊದಲಾದುವು ಬುದ್ಧಿಯ ಧರ್ಮಗಳೇ ಹೊರತು ಕೇವಲವೂ ಅದ್ವಯವೂ ಆತ್ಮವೂ ಆದ ಪರಬ್ರಹ್ಮದಲ್ಲಿ ನಿಜವಾಗಿ ಇಲ್ಲವು.

**ಸಂತು ವಿಕಾರಾಃ ಪ್ರಕೃತೇರ್ದಶಧಾ ಶತಧಾ ಸಹಸ್ರಧಾ ವಾಽಪಿ ।**
**ಕಿಂ ಮೇಽಸಂಗಚಿತೇಸ್ತೈರ್ನ ಘನಃ ಕ್ವಚಿದಂಬರಂ ಸ್ಪೃಶತಿ ॥೫೧೦॥**

**ಪ್ರಕೃತೇಃ** = ಪ್ರಕೃತಿಯ **ವಿಕಾರಾಃ** = ವಿಕಾರಗಳು **ದಶಧಾ** = ಹತ್ತು ಬಗೆಯಾಗಿ **ಶತಧಾ** = ನೂರು ಬಗೆಯಾಗಿ **ಸಹಸ್ರಧಾ ವಾ ಅಪಿ** = ಅಥವಾ ಸಾವಿರ ಬಗೆಯಾಗಿ **ಸಂತು** = ಇರಲಿ; **ಅಸಂಗಚಿತೇಃ** = ಅಸಂಗಚಿದ್ರೂಪನಾದ **ಮೇ** = ನನಗೆ **ತೈಃ** = ಅವುಗಳಿಂದ **ಕಿಂ** = ಏನಾಗಬೇಕು? **ಘನಃ** = ಮೇಘವು **ಕ್ವಚಿತ್** = ಎಲ್ಲಿಯೂ **ಅಂಬರಂ** = ಆಕಾಶವನ್ನು **ನ ಸ್ಪೃಶತಿ** = ಸೋಂಕುವುದಿಲ್ಲ.

**೫೧೦.** ಪ್ರಕೃತಿಯ ವಿಕಾರಗಳು ಹತ್ತು ಬಗೆಯಾಗಿರಲಿ ನೂರು ಬಗೆಯಾಗಿರಲಿ ಅಥವಾ ಸಾವಿರ ಬಗೆಯಾಗಿರಲಿ; ಅಸಂಗಚಿದ್ರೂಪನಾದ ನನಗೆ ಅವುಗಳಿಂದ ಏನಾಗಬೇಕು? ಮೇಘವು ಎಲ್ಲಿಯೂ ಆಕಾಶವನ್ನು ಸೋಂಕುವುದಿಲ್ಲ.

**ಅವ್ಯಕ್ತಾದಿ-ಸ್ಥೂಲಪರ್ಯಂತಮೇತ-**
**ದ್ವಿಶ್ವಂ ಯತ್ರಾಭಾಸಮಾತ್ರಂ ಪ್ರತೀತಮ್ ।**
**ವ್ಯೋಮಪ್ರಖ್ಯಂ ಸೂಕ್ಷ್ಮಮಾದ್ಯಂತಹೀನಂ**
**ಬ್ರಹ್ಮಾದ್ವೈತಂ ಯತ್ತದೇವಾಹಮಸ್ಮಿ ॥ ೫೧೧ ॥**

**ಯತ್ರ** = ಯಾವುದರಲ್ಲಿ **ಅವ್ಯಕ್ತಾದಿ-ಸ್ಥೂಲಪರ್ಯಂತಂ** = ಅವ್ಯಕ್ತವೇ ಮೊದಲಾಗಿ ಸ್ಥೂಲಶರೀರದ ವರೆಗಿರುವ **ಏತತ್ ವಿಶ್ವಂ** = ಈ ವಿಶ್ವವು **ಆಭಾಸಮಾತ್ರಂ** =

ಕೇವಲ ತೋರ್ಕೆಯಾಗಿ **ಪ್ರತೀತಂ** = ಕಾಣುತ್ತಿರುವುದೊ, **ಯತ್** = ಯಾವುದು **ವ್ಯೋಮಪ್ರಖ್ಯಂ** = ಆಕಾಶದಂತೆ **ಸೂಕ್ಷ್ಮಂ** = ಸೂಕ್ಷ್ಮವಾದ **ಆದ್ಯಂತ-ಹೀನಂ** = ಆದ್ಯಂತರಹಿತವಾದ **ಅದ್ವೈತಂ ಬ್ರಹ್ಮ** = ಅದ್ವಿತೀಯ-ಬ್ರಹ್ಮವೊ **ತತ್ ಏವ** = ಅದೇ **ಅಹಮ್ ಅಸ್ಮಿ** = ನಾನಾಗಿರುವೆನು.

**೫೧೧.** ಯಾವುದರಲ್ಲಿ ಅವ್ಯಕ್ತವೇ ಮೊದಲಾಗಿ ಸ್ಥೂಲಶರೀರದ ವರೆಗಿರುವ ಈ ವಿಶ್ವವು ಕೇವಲ ತೋರ್ಕೆಯಾಗಿ ಕಾಣುತ್ತಿರುವುದೊ ಯಾವುದು ಆಕಾಶದಂತೆ ಸೂಕ್ಷ್ಮವಾದ ಕೊನೆಮೊದಲಿಲ್ಲದ ಅದ್ವಿತೀಯ-ಬ್ರಹ್ಮವೊ ಅದೇ ನಾನಾಗಿರುವೆನು.

**ಸರ್ವಾಧಾರಂ ಸರ್ವವಸ್ತುಪ್ರಕಾಶಂ**
**ಸರ್ವಾಕಾರಂ ಸರ್ವಗಂ ಸರ್ವಶೂನ್ಯಮ್ ।**
**ನಿತ್ಯಂ ಶುದ್ಧಂ ನಿಶ್ಚಲಂ ನಿರ್ವಿಕಲ್ಪಂ**
**ಬ್ರಹ್ಮಾದ್ವೈತಂ ಯತ್ತದೇವಾಹಮಸ್ಮಿ ॥ ೫೧೨ ॥**

**ಯತ್** = ಯಾವುದು **ಸರ್ವಾಧಾರಂ** = ಸರ್ವಾಶ್ರಯವಾದ **ಸರ್ವವಸ್ತು-ಪ್ರಕಾಶಂ** = ವಸ್ತುಗಳನ್ನೆಲ್ಲ ಬೆಳಗಿಸುವ **ಸರ್ವಾಕಾರಂ** = ಅಪರಿಚ್ಛಿನ್ನಾಕಾರವಾದ **ಸರ್ವಗಂ** = ಸರ್ವವ್ಯಾಪಕವಾದ **ಸರ್ವಶೂನ್ಯಂ** = ದ್ವೈತಶೂನ್ಯವಾದ **ನಿತ್ಯಂ** = ನಿತ್ಯವಾದ **ಶುದ್ಧಂ** = ಶುದ್ಧವಾದ **ನಿಶ್ಚಲಂ** = ನಿಶ್ಚಲವಾದ **ನಿರ್ವಿಕಲ್ಪಂ** = ನಿರ್ವಿಕಲ್ಪವಾದ **ಅದ್ವೈತಂ ಬಹ್ಮ ತತ್ ಏವ ಅಹಮ್ ಅಸ್ಮಿ.**

**೫೧೨.** ಯಾವುದು ಸರ್ವಾಶ್ರಯವೂ ವಸ್ತುಗಳನ್ನೆಲ್ಲ ಪ್ರಕಾಶಿಸುವುದೂ ಅಪರಿಚ್ಛಿನ್ನಾಕಾರವೂ ಸರ್ವವ್ಯಾಪಿಯೂ ದ್ವೈತಶೂನ್ಯವೂ ನಿತ್ಯವೂ ಶುದ್ಧವೂ ನಿಶ್ಚಲವೂ ನಿರ್ವಿಕಲ್ಪವೂ ಆದ ಅದ್ವಿತೀಯ-ಬ್ರಹ್ಮವೊ ಅದೇ ನಾನಾಗಿರುವೆನು.

**ಯತ್ಪ್ರತ್ಯಸ್ತಾಶೇಷ-ಮಾಯಾವಿಶೇಷಂ**
**ಪ್ರತ್ಯಗ್ರೂಪಂ ಪ್ರತ್ಯಯಾಗಮ್ಯಮಾನಮ್ ।**
**ಸತ್ಯಜ್ಞಾನಾನಂತಮಾನಂದರೂಪಂ**
**ಬ್ರಹ್ಮಾದ್ವೈತಂ ಯತ್ತದೇವಾಹಮಸ್ಮಿ ॥ ೫೧೩ ॥**

**ಯತ್** = ಯಾವುದು **ಪ್ರತ್ಯಸ್ತ-ಅಶೇಷ-ಮಾಯಾವಿಶೇಷಂ** = ಮಾಯೆಯ ವಿಶೇಷಗಳನ್ನು ಸಂಪೂರ್ಣವಾಗಿ ಹೋಗಲಾಡಿಸಿಕೊಂಡಿರುವ **ಪ್ರತ್ಯಕ್-ರೂಪಂ** = ಸರ್ವಾಂತರವಾದ **ಪ್ರತ್ಯಯ-ಅಗಮ್ಯಮಾನಂ** = ಮನಸ್ಸಿಗೆ ಅಗೋಚರವಾದ **ಸತ್ಯ-ಜ್ಞಾನ-ಅನಂತಂ** = ಸತ್ಯಜ್ಞಾನಾನಂತವಾದ **ಆನಂದರೂಪಂ** = ಆನಂದಸ್ವರೂಪವಾದ **ಯತ್ ಅದ್ವೈತಂ ಬ್ರಹ್ಮ ತತ್ ಏವ ಅಹಮ್ ಅಸ್ಮಿ.**

**೫೧೪.** ಯಾವುದು ಮಾಯೆಯ ವಿಶೇಷಗಳನ್ನು ಸಂಪೂರ್ಣವಾಗಿ ಹೋಗಲಾಡಿಸಿಕೊಂಡಿರುವುದೊ ಸರ್ವಾಂತರವೊ ಮನಸ್ಸಿಗೆ ಅಗೋಚರವೊ ಸತ್ಯಜ್ಞಾನಾನಂತವೊ ಆನಂದಸ್ವರೂಪವೊ ಅದ್ವಿತೀಯ-ಬ್ರಹ್ಮವೊ ಅದೇ ನಾನಾಗಿರುವೆನು.

**ನಿಷ್ಕ್ರಿಯೋಽಸ್ಮ್ಯವಿಕಾರೋಽಸ್ಮಿ ನಿಷ್ಕಲೋಽಸ್ಮಿ ನಿರಾಕೃತಿಃ ।**
**ನಿರ್ವಿಕಲ್ಪೋಽಸ್ಮಿ ನಿತ್ಯೋಽಸ್ಮಿ ನಿರಾಲಂಬೋಽಸ್ಮಿ ನಿರ್ದ್ವಯಃ**
**॥ ೫೧೪ ॥**

ನಿಷ್ಕ್ರಿಯಃ ಅಸ್ಮಿ=[ನಾನು] ನಿಷ್ಕ್ರಿಯನಾಗಿರುವೆನು **ಅವಿಕಾರಃ ಅಸ್ಮಿ**=ನಿರ್ವಿಕಾರನಾಗಿರುವೆನು **ನಿಷ್ಕಲಃ ಅಸ್ಮಿ**=ನಿಷ್ಕಲನಾಗಿರುವೆನು **ನಿರಾಕೃತಿಃ** [**ಅಸ್ಮಿ**]=ನಿರಾಕಾರನಾಗಿರುವೆನು **ನಿರ್ವಿಕಲ್ಪಃ ಅಸ್ಮಿ**=ನಿರ್ವಿಕಲ್ಪನಾಗಿರುವೆನು **ನಿತ್ಯಃ ಅಸ್ಮಿ**=ನಿತ್ಯನಾಗಿರುವೆನು **ನಿರಾಲಂಬಃ ಅಸ್ಮಿ**=ನಿರಾಶ್ರಯನಾಗಿರುವೆನು **ನಿರ್ದ್ವಯಃ** [**ಅಸ್ಮಿ**]=ಅದ್ವಯನಾಗಿರುವೆನು.

**೫೧೪.** ನನಗೆ ಕ್ರಿಯೆಯಿಲ್ಲ ವಿಕಾರವಿಲ್ಲ ಕಲೆಯಿಲ್ಲ ಆಕಾರವಿಲ್ಲ ವಿಕಲ್ಪವಿಲ್ಲ; ನಾನು ನಿತ್ಯನು ನಿರಾಶ್ರಯನು ಮತ್ತು ಅದ್ವಿತೀಯನು.

**ಸರ್ವಾತ್ಮಕೋಽಹಂ ಸರ್ವೋಽಹಂ ಸರ್ವಾತೀತೋಽಹಮದ್ವಯಃ ।**
**ಕೇವಲಾಖಂಡಬೋಧೋಽಹಮಾನಂದೋಽಹಂ ನಿರಂತರಃ ॥೫೧೫॥**

**ಅಹಂ**=ನಾನು **ಸರ್ವಾತ್ಮಕಃ**=ಸರ್ವಸ್ವರೂಪನು **ಅಹಂ ಸರ್ವಃ**=ನಾನು ಸರ್ವವು **ಅಹಂ ಸರ್ವಾತೀತಃ**=ನಾನು ಎಲ್ಲವನ್ನೂ ಮೀರಿದವನು **ಅದ್ವಯಃ**=ಅದ್ವಯನು **ಅಹಂ ಕೇವಲ-ಅಖಂಡಬೋಧಃ**=ಕೇವಲಾಖಂಡಜ್ಞಾನ-ಸ್ವರೂಪನು **ಅಹಮ್ ಆನಂದಃ**=ಆನಂದಸ್ವರೂಪನು **ನಿರಂತರಃ**=ನಿರವಕಾಶನು.

**೫೧೫.** ನಾನು ಸರ್ವಾತ್ಮನೂ ಸರ್ವವೂ ಎಲ್ಲವನ್ನೂ ಮೀರಿದವನೂ ಅದ್ವಯನೂ ಆಗಿರುತ್ತೇನೆ; ನಾನು ಕೇವಲ ಅಖಂಡ-ಜ್ಞಾನಾನಂದ-ಸ್ವರೂಪನು, ನಾನು ನಿರವಕಾಶನು.

**ಸ್ವಾರಾಜ್ಯ-ಸಾಮ್ರಾಜ್ಯ-ವಿಭೂತಿರೇಷಾ**
**ಭವತ್ಕೃಪಾಶ್ರೀ-ಮಹಿಮಪ್ರಸಾದಾತ್ ।**
**ಪ್ರಾಪ್ತಾ ಮಯಾ ಶ್ರೀಗುರವೇ ಮಹಾತ್ಮನೇ**
**ನಮೋ ನಮಸ್ತೇಽಸ್ತು ಪುನರ್ನಮೋಽಸ್ತು ॥ ೫೧೬ ॥**

**ಭವತ್-ಕೃಪಾಶ್ರೀ-ಮಹಿಮ-ಪ್ರಸಾದಾತ್**=ನಿಮ್ಮ ಕೃಪೆಯೆಂಬ ಲಕ್ಷ್ಮಿಯ ಮಹಿಮೆಯ ಪ್ರಸಾದದಿಂದ **ಏಷಾ**=ಈ **ಸ್ವಾರಾಜ್ಯ-ಸಾಮ್ರಾಜ್ಯ-ವಿಭೂತಿಃ**=ಸ್ವಾರಾಜ್ಯಸಾಮ್ರಾಜ್ಯದ ವೈಭವವು **ಮಯಾ**=ನನ್ನಿಂದ **ಪ್ರಾಪ್ತಾ**=ಹೊಂದಲ್ಪಟ್ಟಿದೆ; **ಮಹಾತ್ಮನೇ**=ಮಹಾತ್ಮನಾದ **ಶ್ರೀಗುರವೇ**=ಶ್ರೀಗುರುವಾದ **ತೇ**=ನಿನಗೆ **ನಮಃ ನಮಃ ಅಸ್ತು**=ಪುನಃಪುನಃ ನಮಸ್ಕಾರವಿರಲಿ, **ಪುನಃ ನಮಃ ಅಸ್ತು.**

**೫೧೬.** ನಿಮ್ಮ ಕೃಪೆಯೆಂಬ ಲಕ್ಷ್ಮಿಯ ಮಹಿಮೆಯ ಪ್ರಸಾದದಿಂದ ಈ ಸ್ವಾರಾಜ್ಯ-ಸಾಮ್ರಾಜ್ಯದ ವೈಭವವು ನನಗೆ ಪ್ರಾಪ್ತವಾಯಿತು. ಮಹಾತ್ಮನಾದ ಶ್ರೀಗುರುವೇ, ನಿನಗೆ ಪುನಃ ಪುನಃ ನಮಸ್ಕಾರಗಳು.

**ಮಹಾಸ್ವಪ್ನೇ ಮಾಯಾಕೃತ-ಜನಿ-ಜರಾ-ಮೃತ್ಯು-ಗಹನೇ**
**ಭ್ರಮಂತಂ ಕ್ಲಿಶ್ಯಂತಂ ಬಹುಲತರ-ತಾಪೈರನುದಿನಮ್ ।**
**ಅಹಂಕಾರವ್ಯಾಘ್ರ-ವ್ಯಥಿತಮಿಮಮತ್ಯಂತ-ಕೃಪಯಾ**
**ಪ್ರಬೋಧ್ಯ ಪ್ರಸ್ವಾಪಾತ್ ಪರಮವಿತವಾನ್ ಮಾಮಸಿ**
**ಗುರೋ ॥ ೫೧೭ ॥**

**ಗುರೋ**=ಹೇ ಗುರುವೆ, **ಮಹಾಸ್ವಪ್ನೇ**=ಮಹಾಸ್ವಪ್ನದಂತಿರುವ **ಮಾಯಾ-ಕೃತ-ಜನಿ-ಜರಾ-ಮೃತ್ಯು-ಗಹನೇ**=ಮಾಯೆಯಿಂದ ಮಾಡಲ್ಪಟ್ಟ ಹುಟ್ಟು-ಮುಪ್ಪು-ಸಾವುಗಳೆಂಬ ಕಾಡಿನಲ್ಲಿ **ಭ್ರಮಂತಂ**=ಅಲೆಯುತ್ತಿರುವ, **ಬಹುಲತರ-ತಾಪೈಃ**=ಬಗೆಬಗೆಯ ತಾಪಗಳಿಂದ **ಅನುದಿನಂ**=ಪ್ರತಿದಿನವೂ **ಕ್ಲಿಶ್ಯಂತಂ**=ಕ್ಲೇಶಪಡುತ್ತಿರುವ, **ಅಹಂಕಾರವ್ಯಾಘ್ರ-ವ್ಯಥಿತಂ**=ಅಹಂಕಾರವೆಂಬ ಹುಲಿಯಿಂದ ವ್ಯಥೆಪಡುತ್ತಿರುವ, **ಇಮಂ ಮಾಂ**=ಈ ನನ್ನನ್ನು **ಅತ್ಯಂತಕೃಪಯಾ**=ಅಪಾರಕೃಪೆಯಿಂದ **ಪ್ರಸ್ವಾ-ಪಾತ್**=ನಿದ್ರೆಯಿಂದ **ಪ್ರಬೋಧ್ಯ**=ಎಚ್ಚರಗೊಳಿಸಿ **ಪರಂ**=ಸಂಪೂರ್ಣವಾಗಿ **ಅವಿ-ತವಾನ್ ಅಸಿ**=ಕಾಪಾಡಿರುವೆ.

**೫೧೭.** ಹೇ ಗುರುವೆ, ಮಹಾಸ್ವಪ್ನದಂತಿರುವ ಮಾಯಾಕೃತವಾದ ಹುಟ್ಟು-ಮುಪ್ಪು-ಸಾವುಗಳೆಂಬ ಕಾಡಿನಲ್ಲಿ ಅಲೆಯುತ್ತಿರುವ, ಬಗೆಬಗೆಯ ತಾಪಗಳಿಂದ ಪ್ರತಿದಿನವೂ ಕ್ಲೇಶಪಡುತ್ತಿರುವ, ಅಹಂಕಾರವೆಂಬ ಹುಲಿಯಿಂದ ವ್ಯಥೆಪಡುತ್ತಿರುವ ಈ ನನ್ನನ್ನು ಅಪಾರಕೃಪೆಯಿಂದ (ಅವಿದ್ಯೆಯೆಂಬ) ನಿದ್ರೆಯಿಂದ ಎಚ್ಚರಗೊಳಿಸಿ ಸಂಪೂರ್ಣವಾಗಿ ಕಾಪಾಡಿರುವೆ !

**ನಮಸ್ತಸ್ಮೈ ಸದೈಕಸ್ಮೈ ಕಸ್ಮೈಚಿನ್ಮಹಸೇ ನಮಃ ।**
**ಯದೇತದ್ವಿಶ್ವರೂಪೇಣ ರಾಜತೇ ಗುರುರಾಜ ತೇ ॥ ೫೧೮ ॥**

**ಗುರುರಾಜ** = ಹೇ ಗುರುರಾಜನೆ, **ಯತ್ ಏತತ್** = ಯಾವ ಈ [ಬ್ರಹ್ಮವು] **ವಿಶ್ವರೂಪೇಣ** = ವಿಶ್ವರೂಪದಿಂದ **ರಾಜತೇ** = ಪ್ರಕಾಶಿಸುತ್ತಿರುವುದೊ **ತಸ್ಮೈ ಮಹಸೇ** = ಆ ತೇಜಃಸ್ವರೂಪನಾದ **ಸದೈಕಸ್ಮೈ** = ಸದಾ ಏಕರೂಪನಾದ **ಕಸ್ಮೈಚಿತ್** = ಮನೋವಾಕ್ಕುಗಳಿಗೆ ಅಗೋಚರನಾದ **ತೇ** = ನಿನಗೆ **ನಮಃ** = ನಮಸ್ಕಾರ, **ನಮಃ.**

**೫೧೮.** ಹೇ ಗುರುರಾಜನೆ, ವಿಶ್ವರೂಪದಿಂದ ಪ್ರಕಾಶಿಸುತ್ತಿರುವ ತೇಜಃಸ್ವರೂಪನಾದ ಸದೈಕರೂಪನಾದ ಮನೋವಾಕ್ಕುಗಳಿಗೆ ಅಗೋಚರನಾದ ನಿನಗೆ ಪುನಃ ಪುನಃ ನಮಸ್ಕಾರ.

**ಇತಿ ನತಮವಲೋಕ್ಯ ಶಿಷ್ಯವರ್ಯಂ**
**ಸಮಧಿಗತಾತ್ಮಸುಖಂ ಪ್ರಬುದ್ಧತತ್ತ್ವಮ್ ।**
**ಪ್ರಮುದಿತ-ಹೃದಯಃ ಸ ದೇಶಿಕೇಂದ್ರಃ**
**ಪುನರಿದಮಾಹ ವಚಃ ಪರಂ ಮಹಾತ್ಮಾ ॥ ೫೧೯ ॥**

**ಇತಿ** = ಹೀಗೆ **ಸಮಧಿಗತ-ಆತ್ಮಸುಖಂ** = ಆತ್ಮಾನಂದವನ್ನು ಸಾಕ್ಷಾತ್ಕರಿಸಿದ **ಪ್ರಬುದ್ಧ-ತತ್ತ್ವಂ** = ತತ್ತ್ವವನ್ನರಿತುಕೊಂಡ **ನತಂ** = ನಮಸ್ಕರಿಸಿದ **ಶಿಷ್ಯವರ್ಯಂ** = ಶಿಷ್ಯವರ್ಯನನ್ನು **ಅವಲೋಕ್ಯ** = ನೋಡಿ **ಪ್ರಮುದಿತ-ಹೃದಯಃ** = ಸಂತೋಷಹೃದಯನಾದ **ಪರಂ ಮಹಾತ್ಮಾ** = ಶ್ರೇಷ್ಠಮಹಾತ್ಮನಾದ **ಸಃ ದೇಶಿಕೇಂದ್ರಃ** = ಆ ಆಚಾರ್ಯವರ್ಯನು **ಪುನಃ** = ಮರಳಿ **ಇದಂ ವಚಃ** = ಈ ಮಾತನ್ನು **ಆಹ** = ಹೇಳುತ್ತಾನೆ.

**೫೧೯.** ಹೀಗೆ ಆತ್ಮಾನಂದವನ್ನು ಸಾಕ್ಷಾತ್ಕರಿಸಿಕೊಂಡು ತತ್ತ್ವವನ್ನರಿತುಕೊಂಡು ನಮಸ್ಕರಿಸಿದ ಶಿಷ್ಯವರ್ಯನನ್ನು ನೋಡಿ ಸಂತೋಷಹೃದಯನೂ ಶ್ರೇಷ್ಠಮಹಾತ್ಮನೂ ಆದ ಆ ಆಚಾರ್ಯವರ್ಯನು ಪುನಃ ಈ ಮಾತನ್ನು ಹೇಳುತ್ತಾನೆ.

**ಬ್ರಹ್ಮಪ್ರತ್ಯಯ-ಸಂತತಿರ್ಜಗದತೋ ಬ್ರಹ್ಮೈವ ತತ್ಸರ್ವತಃ**
**ಪಶ್ಯಾಧ್ಯಾತ್ಮದೃಶಾ ಪ್ರಶಾಂತ-ಮನಸಾ ಸರ್ವಾಸ್ವವಸ್ಥಾಸ್ವಪಿ ।**
**ರೂಪಾದನ್ಯದವೇಕ್ಷಿತುಂ ಕಿಮಭಿತಶ್ಚಕ್ಷುಷ್ಮತಾಂ ವಿದ್ಯತೇ**
**ತದ್ವದ್ಬ್ರಹ್ಮವಿದಃ ಸತಃ ಕಿಮಪರಂ ಬುದ್ಧೇರ್ವಿಹಾರಾಸ್ಪದಮ್**
**॥ ೫೨೦ ॥**

**ಬ್ರಹ್ಮಪ್ರತ್ಯಯ-ಸಂತತಿಃ** = ಬ್ರಹ್ಮಪ್ರತ್ಯಯದ ಪ್ರವಾಹವೇ **ಜಗತ್** = ಜಗತ್ತು; **ಅತಃ** = ಆದುದರಿಂದ **ತತ್** = ಅದು **ಸರ್ವತಃ** = ಎಲ್ಲಾ ಕಡೆಯಲ್ಲಿಯೂ

**ಬ್ರಹ್ಮ ಏವ**=ಬ್ರಹ್ಮವೇ; **ಪ್ರಶಾಂತಮನಸಾ** = ಪ್ರಶಾಂತವಾದ ಮನಸ್ಸಿನಿಂದ **ಅಧ್ಯಾತ್ಮದೃಶಾ**=ಅಧ್ಯಾತ್ಮದೃಷ್ಟಿಯಿಂದ **ಸರ್ವಾಸು ಅವಸ್ಥಾಸು ಅಪಿ**=ಎಲ್ಲ ಅವಸ್ಥೆಗಳಲ್ಲಿಯೂ **ಪಶ್ಯ** = [ಬ್ರಹ್ಮವನ್ನೇ] ನೋಡು; **ಚಕ್ಷುಷ್ಮತಾಂ** = ಕಣ್ಣಿರುವವರಿಗೆ **ಅಭಿತಃ** = ಸುತ್ತಲೂ **ರೂಪಾತ್**=ರೂಪಕ್ಕಿಂತ **ಅನ್ಯತ್** = ಬೇರೊಂದು **ಅವೇಕ್ಷಿತುಂ**=ನೋಡಲು **ಕಿಂ ವಿದ್ಯತೇ**=ಇರುವುದೆ? **ತದ್ವತ್**=ಹಾಗೆಯೇ **ಬ್ರಹ್ಮವಿದಃ**=ಬ್ರಹ್ಮಜ್ಞಾನಿಗೆ **ಸತಃ**=ಸದ್ರೂಪಕ್ಕಿಂತ **ಅಪರಂ ಕಿಂ**=ಬೇರೆ ಯಾವುದು **ಬುದ್ಧೇಃ**=ಬುದ್ಧಿಯ **ವಿಹಾರಾಸ್ಪದಂ**=ಸಂಚಾರಕ್ಕೆ ಆಶ್ರಯವಾಗಿ [ಇರುತ್ತದೆ?]

**೫೨೦.** ಈ ಜಗತ್ತು ಬ್ರಹ್ಮಪ್ರತ್ಯಯದ ಪ್ರವಾಹವಾಗಿರುತ್ತದೆ. ಆದುದರಿಂದ ಅದು ಎಲ್ಲಾ ಕಡೆಯಲ್ಲಿಯೂ ಬ್ರಹ್ಮವೇ. ಪ್ರಶಾಂತಮನಸ್ಸಿನಿಂದ ಮತ್ತು ಅಧ್ಯಾತ್ಮದೃಷ್ಟಿಯಿಂದ ಎಲ್ಲ ಅವಸ್ಥೆಗಳಲ್ಲಿಯೂ (ಬ್ರಹ್ಮವನ್ನೇ) ನೋಡು. ಕಣ್ಣಿರುವವರಿಗೆ ಸುತ್ತಲೂ ರೂಪಕ್ಕಿಂತ ಬೇರೆಯಾದುದು ನೋಡಲು ಇರುವುದೆ? ಹೀಗೆಯೇ ಬ್ರಹ್ಮಜ್ಞಾನಿಗೆ ಸದ್ರೂಪವಾದ (ಬ್ರಹ್ಮಕ್ಕಿಂತ) ಮತ್ತೇನು ಬುದ್ಧಿಯ ಸಂಚಾರಕ್ಕೆ ಆಶ್ರಯವಾದೀತು?

**ಕಸ್ತಾಂ ಪರಾನಂದ-ರಸಾನುಭೂತಿ-**
**ಮುತ್ಸೃಜ್ಯ ಶೂನ್ಯೇಷು ರಮೇತ ವಿದ್ವಾನ್ ।**
**ಚಂದ್ರೇ ಮಹಾಹ್ಲಾದಿನಿ ದೀಪ್ಯಮಾನೇ**
**ಚಿತ್ರೇಂದುಮಾಲೋಕಯಿತುಂ ಕ ಇಚ್ಛೇತ್ ॥ ೫೨೧ ॥**

**ಕಃ ವಿದ್ವಾನ್** = ಯಾವ ವಿದ್ವಾಂಸನು **ತಾಂ**=ಆ **ಪರಾನಂದ-ರಸಾನುಭೂತಿಂ**=ಪರಾನಂದರಸದ ಅನುಭವವನ್ನು **ಉತ್ಸೃಜ್ಯ**=ಬಿಟ್ಟು **ಶೂನ್ಯೇಷು**=ನೀರಸವಿಷಯಗಳಲ್ಲಿ **ರಮೇತ**=ರಮಿಸಿಯಾನು? **ಮಹಾಹ್ಲಾದಿನಿ ಚಂದ್ರೇ ದೀಪ್ಯಮಾನೇ [ಸತಿ]**=ಮಹಾಹ್ಲಾದವನ್ನುಂಟುಮಾಡುವ ಚಂದ್ರನು ಪ್ರಕಾಶಿಸುತ್ತಿರುವಾಗ **ಕಃ**=ಯಾವನು **ಚಿತ್ರ-ಇಂದುಂ**=ಚಿತ್ರದಲ್ಲಿರುವ ಚಂದ್ರನನ್ನು **ಆಲೋಕಯಿತುಂ**=ನೋಡುವುದಕ್ಕೆ **ಇಚ್ಛೇತ್**=ಬಯಸುವನು?

**೫೨೧.** ಆ ಪರಾನಂದದ ಅನುಭವವನ್ನು ಬಿಟ್ಟು, ನೀರಸವಾದ ವಿಷಯಗಳಲ್ಲಿ ಯಾವ ವಿದ್ವಾಂಸನು ತಾನೇ ರಮಿಸಿಯಾನು? ಮಹಾಹ್ಲಾದವನ್ನುಂಟುಮಾಡುವ ಚಂದ್ರನು ಪ್ರಕಾಶಿಸುತ್ತಿರುವಾಗ ಯಾವನು ತಾನೇ ಚಿತ್ರದಲ್ಲಿರುವ ಚಂದ್ರನನ್ನು ನೋಡುವುದಕ್ಕೆ ಬಯಸುವನು?

**ಅಸತ್ಪದಾರ್ಥಾನುಭವೇನ ಕಿಂಚಿ-**
**ನ್ನ ಹ್ಯಸ್ತಿ ತೃಪ್ತಿರ್ನ ಚ ದುಃಖಹಾನಿಃ ।**

**ತದದ್ವಯಾನಂದ-ರಸಾನುಭೂತ್ಯಾ**
**ತೃಪ್ತಃ ಸುಖಂ ತಿಷ್ಠ ಸದಾತ್ಮನಿಷ್ಠಯಾ　　॥ ೫೨೨ ॥**

**ಅಸತ್ಪದಾರ್ಥ-ಅನುಭವೇನ** = ಮಿಥ್ಯಾವಸ್ತುಗಳ ಅನುಭವದಿಂದ **ಕಿಂಚಿತ್** [**ಕಾಚಿತ್**] **ತೃಪ್ತಿಃ** = ಸ್ವಲ್ಪ ತೃಪ್ತಿಯೂ **ನ ಹಿ ಅಸ್ತಿ** = ಇಲ್ಲವು, **ದುಃಖಹಾನಿಃ ಚ ನ** = ದುಃಖನಿವೃತ್ತಿಯೂ ಇಲ್ಲವು; **ತತ್** = ಆದುದರಿಂದ **ಅದ್ವಯಾನಂದರಸ-ಅನುಭೂತ್ಯಾ** = ಅದ್ವಯಾನಂದರಸದ ಅನುಭವದಿಂದ **ತೃಪ್ತಃ** = ತೃಪ್ತನಾಗಿ **ಸದಾತ್ಮ-ನಿಷ್ಠಯಾ** = ಸದ್ರೂಪನಾದ ಆತ್ಮನ ನಿಷ್ಠೆಯಿಂದ **ಸುಖಂ ತಿಷ್ಠ** = ಸುಖವಾಗಿರು.

**೫೨೨.** ಮಿಥ್ಯಾವಸ್ತುಗಳ ಅನುಭವದಿಂದ ಸ್ವಲ್ಪ ತೃಪ್ತಿಯೂ ಉಂಟಾಗುವುದಿಲ್ಲ, ದುಃಖನಿವೃತ್ತಿಯೂ ಆಗುವುದಿಲ್ಲ. ಆದುದರಿಂದ ಅದ್ವಯಾನಂದ ರಸದ ಅನುಭವದಿಂದ ತೃಪ್ತನಾಗಿ ಸದ್ರೂಪಾತ್ಮನ ನಿಷ್ಠೆಯಿಂದಲೇ ಸುಖವಾಗಿರು.

**ಸ್ವಮೇವ ಸರ್ವಥಾ ಪಶ್ಯನ್ಮನ್ಯಮಾನಃ ಸ್ವಮದ್ವಯಮ್ ।**
**ಸ್ವಾನಂದಮನುಭುಂಜಾನಃ ಕಾಲಂ ನಯ ಮಹಾಮತೇ ॥ ೫೨೩ ॥**

**ಮಹಾಮತೇ** = ಎಲೈ ಮಹಾಮತಿಯೆ, **ಸರ್ವಥಾ** = ಸರ್ವಪ್ರಕಾರದಿಂದಲೂ **ಸ್ವಮ್ ಏವ** = ಸ್ವಾತ್ಮನನ್ನೇ **ಪಶ್ಯನ್** = ನೋಡುತ್ತ, **ಅದ್ವಯಂ ಸ್ವಮ್** = ಅದ್ವಯನಾದ ಆತ್ಮನನ್ನೇ **ಮನ್ಯಮಾನಃ** = ಮನನಮಾಡುತ್ತ **ಸ್ವ-ಆನಂದಂ** = ಸ್ವಾತ್ಮಾನಂದವನ್ನೇ **ಅನುಭುಂಜಾನಃ** = ಅನುಭವಿಸುತ್ತ **ಕಾಲಂ** = ಕಾಲವನ್ನು **ನಯ** = ಕಳೆ.

**೫೨೩.** ಎಲೈ ಮಹಾಮತಿಯೆ, ಎಲ್ಲ ಪ್ರಕಾರದಿಂದಲೂ ಸ್ವಾತ್ಮನನ್ನೇ ನೋಡುತ್ತ, ಅದ್ವಯನಾದ ಆತ್ಮನನ್ನೇ ಮನನಮಾಡುತ್ತ, ಸ್ವಾತ್ಮಾನಂದವನ್ನೇ ಅನುಭವಿಸುತ್ತ, ಕಾಲವನ್ನು ಕಳೆ.

**ಅಖಂಡಬೋಧಾತ್ಮನಿ ನಿರ್ವಿಕಲ್ಪೇ**
**ವಿಕಲ್ಪನಂ ವ್ಯೋಮ್ನಿ ಪುರಪ್ರಕಲ್ಪನಮ್ ।**
**ತದದ್ವಯಾನಂದಮಯಾತ್ಮನಾ ಸದಾ**
**ಶಾಂತಿಂ ಪರಾಮೇತ್ಯ ಭಜಸ್ವ ಮೌನಮ್ ॥ ೫೨೪ ॥**

**ನಿರ್ವಿಕಲ್ಪೇ** = ವಿಕಲ್ಪಶೂನ್ಯನಾದ **ಅಖಂಡಬೋಧಾತ್ಮನಿ** = ಅಖಂಡಜ್ಞಾನಾತ್ಮನಲ್ಲಿ **ವಿಕಲ್ಪನಂ** = ವಿವಿಧಕಲ್ಪನೆಯು **ವ್ಯೋಮ್ನಿ** = ಆಕಾಶದಲ್ಲಿ **ಪುರಪ್ರಕಲ್ಪನಂ** = ನಗರವನ್ನು ಕಲ್ಪಿಸಿದಂತೆ; **ತತ್** = ಆದುದರಿಂದ **ಸದಾ** = ಯಾವಾಗಲೂ **ಅದ್ವಯಾ-ನಂದಮಯಾತ್ಮನಾ** = ಅದ್ವಯಾನಂದಸ್ವರೂಪದಿಂದ **ಪರಾಂ ಶಾಂತಿಂ** = ಪರಮಶಾಂತಿಯನ್ನು **ಏತ್ಯ** = ಹೊಂದಿ **ಮೌನಂ** = ಮೌನವನ್ನು **ಭಜಸ್ವ** = ಸೇವಿಸು.

**೫೨೪.** ವಿಕಲ್ಪಶೂನ್ಯನಾದ ಅಖಂಡಜ್ಞಾನಾತ್ಮನಲ್ಲಿ ವಿವಿಧಕಲ್ಪನೆಗಳನ್ನು ಮಾಡುವುದು ಆಕಾಶದಲ್ಲಿ ನಗರವನ್ನು ಕಲ್ಪಿಸಿದಂತೆ. ಆದುದರಿಂದ ಅದ್ವಯಾನಂದ ಸ್ವರೂಪದಿಂದ ಯಾವಾಗಲೂ ಪರಮಶಾಂತಿಯನ್ನು ಹೊಂದಿ ಮೌನವನ್ನು ಸೇವಿಸು.

**ತೂಷ್ಣೀಮವಸ್ಥಾ ಪರಮೋಪಶಾಂತಿ-**
**ರ್ಬುದ್ಧೇರಸತ್ಕಲ್ಪ-ವಿಕಲ್ಪ-ಹೇತೋಃ ।**
**ಬ್ರಹ್ಮಾತ್ಮನಾ ಬ್ರಹ್ಮವಿದೋ ಮಹಾತ್ಮನೋ**
**ಯತ್ರಾದ್ವಯಾನಂದಸುಖಂ ನಿರಂತರಮ್ ॥ ೫೨೫ ॥**

**ಅಸತ್ಕಲ್ಪ-ವಿಕಲ್ಪ-ಹೇತೋಃ** = ಮಿಥ್ಯಾವಿಷಯಗಳ ಕಲ್ಪನೆಗಳಿಗೆ ಕಾರಣವಾದ **ಬುದ್ಧೇಃ** = ಬುದ್ಧಿಗೆ **ಮಹಾತ್ಮನಃ** = ಮಹಾತ್ಮನಾದ **ಬ್ರಹ್ಮವಿದಃ** = ಬ್ರಹ್ಮಜ್ಞಾನಿಯ **ಬ್ರಹ್ಮಾತ್ಮನಾ** = ಬ್ರಹ್ಮಭಾವದಿಂದ [ಆಗುವ] **ತೂಷ್ಣೀಮವಸ್ಥಾ** = ಮೌನವೇ **ಪರಮೋಪಶಾಂತಿಃ** = ಪರಮಶಾಂತಿಯು; **ಯತ್ರ** = ಎಲ್ಲಿ **ನಿರಂತರಂ** = ಯಾವಾಗಲೂ **ಅದ್ವಯಾನಂದಸುಖಂ** = ಅದ್ವಯಾನಂದಸುಖವು [ಆಗುತ್ತದೆಯೊ].

**೫೨೫.** ಮಿಥ್ಯಾವಿಷಯಗಳ ಕಲ್ಪನೆಗಳಿಗೆ ಕಾರಣವಾದ ಬುದ್ಧಿಗೆ, ಮಹಾತ್ಮನಾದ ಬ್ರಹ್ಮಜ್ಞಾನಿಯ ಬ್ರಹ್ಮಭಾವದಿಂದ ಉಂಟಾಗುವ ಮೌನವೇ ಪರಮೋಪಶಾಂತಿ. ಅಲ್ಲಿ ನಿರಂತರವೂ ಅದ್ವಯಾನಂದಸುಖವಾಗುತ್ತದೆ.

**ನಾಸ್ತಿ ನಿರ್ವಾಸನಾನ್ಮೌನಾತ್ ಪರಂ ಸುಖಕೃದುತ್ತಮಮ್ ।**
**ವಿಜ್ಞಾತಾತ್ಮಸ್ವರೂಪಸ್ಯ ಸ್ವಾನಂದರಸ-ಪಾಯಿನಃ ॥ ೫೨೬ ॥**

**ವಿಜ್ಞಾತ-ಆತ್ಮಸ್ವರೂಪಸ್ಯ** = ಆತ್ಮಸ್ವರೂಪವನ್ನು ತಿಳಿದುಕೊಂಡಿರುವ **ಸ್ವ-ಆನಂದರಸ-ಪಾಯಿನಃ** = ಆತ್ಮಾನಂದರಸವನ್ನು ಕುಡಿಯುತ್ತಿರುವವನಿಗೆ **ನಿರ್ವಾಸನಾತ್** = ಸರ್ವವಾಸನಾರಹಿತವಾದ **ಮೌನಾತ್** = ಮೌನಕ್ಕಿಂತ **ಉತ್ತಮಂ** = ಶ್ರೇಷ್ಠವಾದ **ಸುಖಕೃತ್** = ಸುಖಕರವಾದದ್ದು **ಪರಂ ನ ಅಸ್ತಿ** = ಬೇರೊಂದಿಲ್ಲವು.

**೫೨೬.** ಆತ್ಮಸ್ವರೂಪವನ್ನು ತಿಳಿದುಕೊಂಡು ಆತ್ಮಾನಂದರಸವನ್ನು ಕುಡಿಯುತ್ತಿರುವವನಿಗೆ ಸರ್ವವಾಸನಾರಹಿತವಾದ ಮೌನಕ್ಕಿಂತ ಶ್ರೇಷ್ಠ-ಸುಖಕರವಾದದ್ದು ಬೇರೊಂದಿಲ್ಲ.

**ಗಚ್ಛಂಸ್ತಿಷ್ಠನ್ನುಪವಿಶಂಛಯಾನೋ ವಾಽನ್ಯಥಾಽಪಿ ವಾ ।**
**ಯಥೇಚ್ಛಯಾ ವಸೇದ್ವಿದ್ವಾನಾತ್ಮಾರಾಮಃ ಸದಾ ಮುನಿಃ ॥ ೫೨೭ ॥**

**ವಿದ್ವಾನ್** = ವಿದ್ವಾಂಸನಾದ **ಆತ್ಮಾರಾಮಃ** = ಆತ್ಮಾರಾಮನಾದ **ಮುನಿಃ** = ಮುನಿಯು **ಗಚ್ಛನ್** = ನಡೆಯುತ್ತ **ತಿಷ್ಠನ್** = ನಿಲ್ಲುತ್ತ **ಉಪವಿಶನ್** = ಕುಳಿತುಕೊಳ್ಳುತ್ತ **ಶಯಾನಃ ವಾ** = ಮಲಗುತ್ತ **ಅನ್ಯಥಾ ಅಪಿ ವಾ** = ಅಥವಾ ಬೇರೆ ಸ್ಥಿತಿಯಲ್ಲಿ ಇರುತ್ತ **ಯಥೇಚ್ಛಯಾ** = ಸ್ವೇಚ್ಛೆಯಿಂದ **ಸದಾ** = ಯಾವಾಗಲೂ **ವಸೇತ್** = ಇರಬೇಕು.

**೫೨೭.** ವಿದ್ವಾಂಸನೂ ಆತ್ಮಾರಾಮನೂ ಆದ ಮುನಿಯು ನಡೆಯುವಾಗಲೂ ನಿಲ್ಲುವಾಗಲೂ ಕುಳಿತುಕೊಳ್ಳುವಾಗಲೂ ಮಲಗುವಾಗಲೂ ಅಥವಾ ಬೇರೆ ಯಾವ ಸ್ಥಿತಿಯಲ್ಲಿರುವಾಗಲೂ ಸ್ವೇಚ್ಛೆಯಿಂದ[೧] ಯಾವಾಗಲೂ ಇರಬೇಕು.

[[೧] ಪರತಂತ್ರನಾಗದೆ.]

**ನ ದೇಶಕಾಲಾಸನದಿಗ್ಯಮಾದಿ-**
**ಲಕ್ಷ್ಯಾದ್ಯಪೇಕ್ಷಾಽಪ್ರತಿಬದ್ಧವೃತ್ತೇಃ ।**
**ಸಂಸಿದ್ಧತತ್ತ್ವಸ್ಯ ಮಹಾತ್ಮನೋಽಸ್ತಿ**
**ಸ್ವವೇದನೇ ಕಾ ನಿಯಮಾದ್ಯಪೇಕ್ಷಾ ॥ ೫೨೮ ॥**

**ಅಪ್ರತಿಬದ್ಧವೃತ್ತೇಃ** = ಪ್ರತಿಬಂಧವಿಲ್ಲದ ಬುದ್ಧಿವೃತ್ತಿಯುಳ್ಳ **ಸಂಸಿದ್ಧ-ತತ್ತ್ವಸ್ಯ** = ಆತ್ಮಸ್ವರೂಪವನ್ನು ನಿಶ್ಚಯಪಡಿಸಿಕೊಂಡಿರುವ **ಮಹಾತ್ಮನಃ** = ಮಹಾತ್ಮನಿಗೆ **ದೇಶ-ಕಾಲ-ಆಸನ-ದಿಕ್-ಯಮ-ಆದಿ-ಲಕ್ಷ್ಯ-ಆದಿ-ಅಪೇಕ್ಷಾ** = ದೇಶ ಕಾಲ ಆಸನ ದಿಕ್ಕು ಯಮಾದಿಗಳು, ಲಕ್ಷ್ಯವೇ ಮೊದಲಾದುವು— ಇವುಗಳ ಅಪೇಕ್ಷೆಯು **ನ** = ಇರುವುದಿಲ್ಲ; **ಸ್ವ-ವೇದನೇ** = ಸ್ವಾತ್ಮಸಾಕ್ಷಾತ್ಕಾರಕ್ಕೆ **ನಿಯಮಾದಿ-ಅಪೇಕ್ಷಾ** = ನಿಯಮಾದಿಗಳ ಅಪೇಕ್ಷೆಯು **ಕಾ ಅಸ್ತಿ** = ಎಲ್ಲಿಯದು?

**೫೨೮.** ಯಾವ ಪ್ರತಿಬಂಧವೂ ಇಲ್ಲದ ಬುದ್ಧಿವೃತ್ತಿಯುಳ್ಳ, ಆತ್ಮಸ್ವರೂಪವನ್ನು ನಿಶ್ಚಯಪಡಿಸಿಕೊಂಡಿರುವ ಮಹಾತ್ಮನಿಗೆ ದೇಶ[೧] ಕಾಲ ಆಸನ ದಿಕ್ಕು ಯಮನಿಯಮಾದಿಗಳು ಲಕ್ಷ್ಯಾದಿಗಳು[೨]— ಇವುಗಳ ಅಪೇಕ್ಷೆಯಿರುವುದಿಲ್ಲ. ತನ್ನ ಆತ್ಮನನ್ನು ಸಾಕ್ಷಾತ್ಕರಿಸಿಕೊಳ್ಳುವುದಕ್ಕೆ ನಿಯಮಾದಿಗಳ ಅಪೇಕ್ಷೆ ಎಲ್ಲಿಯದು?

[[೧] ಪವಿತ್ರಸ್ಥಾನಗಳು, ಹೀಗೆಯೇ ಪವಿತ್ರವಾದ ಕಾಲ.
[೨] ಧ್ಯಾನಕ್ಕೆ ಬೇಕಾದ ಲಕ್ಷ್ಯಗಳು.]

**ಘಟೋಽಯಮಿತಿ ವಿಜ್ಞಾತುಂ ನಿಯಮಃ ಕೋ ನ್ವಪೇಕ್ಷ್ಯತೇ ।**
**ವಿನಾ ಪ್ರಮಾಣಸುಷ್ಠುತ್ವಂ ಯಸ್ಮಿನ್ಸತಿ ಪದಾರ್ಥಧೀಃ ॥ ೫೨೯ ॥**

**ಯಸ್ಮಿನ್ ಸತಿ** = ಯಾವುದಿದ್ದರೆ **ಪದಾರ್ಥಧೀಃ** = ಪದಾರ್ಥಜ್ಞಾನವು [ಉಂಟಾಗುವುದೊ ಅಂಥ] **ಪ್ರಮಾಣ-ಸುಷ್ಠುತ್ವಂ ವಿನಾ** = ಪ್ರಮಾಣಸೌಷ್ಠವವನ್ನು ಬಿಟ್ಟು **ಅಯಂ** = ಇದು **ಘಟಃ** = ಗಡಿಗೆ **ಇತಿ** = ಎಂದು **ವಿಜ್ಞಾತುಂ** = ತಿಳಿದುಕೊಳ್ಳುವುದಕ್ಕೆ **ಕಃ ನಿಯಮಃ** = ಯಾವ ನಿಯಮವು **ಅಪೇಕ್ಷ್ಯತೇ ನು** = ಅಪೇಕ್ಷಿಸಲ್ಪಡುತ್ತದೆ?

**೫೨೯.** 'ಇದು ಗಡಿಗೆ' ಎಂದು ತಿಳಿದುಕೊಳ್ಳುವುದಕ್ಕೆ ಪ್ರಮಾಣಸೌಷ್ಠವವನ್ನು ಬಿಟ್ಟು ಯಾವ ನಿಯಮವು ಬೇಕಾಗಿರುತ್ತದೆ? ಅದಿದ್ದರೆ ಮಾತ್ರ ಪದಾರ್ಥಜ್ಞಾನವು ಉಂಟಾಗುತ್ತದೆ.

**ಅಯಮಾತ್ಮಾ ನಿತ್ಯಸಿದ್ಧಃ ಪ್ರಮಾಣೇ ಸತಿ ಭಾಸತೇ ।**
**ನ ದೇಶಂ ನಾಪಿ ವಾ ಕಾಲಂ ನ ಶುದ್ಧಿಂ ವಾಪ್ಯಪೇಕ್ಷತೇ ॥ ೫೩೦ ॥**

**ಅಯಮ್ ಆತ್ಮಾ** = ಈ ಆತ್ಮನು **ನಿತ್ಯಸಿದ್ಧಃ** = ನಿತ್ಯಸಿದ್ಧಸ್ವರೂಪನು; **ಪ್ರಮಾಣೇ ಸತಿ** = ಪ್ರಮಾಣವಿರುವಾಗ **ಭಾಸತೇ** = ಪ್ರಕಾಶಿಸುತ್ತಾನೆ; **ದೇಶಂ** = ದೇಶವನ್ನು **ನ ಅಪೇಕ್ಷತೇ** = ಅಪೇಕ್ಷಿಸುವುದಿಲ್ಲ, **ಕಾಲಮ್ ಅಪಿ ವಾ** = ಕಾಲವನ್ನೂ **ನ**, **ಶುದ್ಧಿಂ ವಾ** = ಶುದ್ಧಿಯನ್ನೂ **ನ.**

**೫೩೦.** ಈ ಆತ್ಮನು ನಿತ್ಯಸಿದ್ಧ-ಸ್ವರೂಪನು; ಪ್ರಮಾಣವಿರುವಾಗ ಪ್ರಕಾಶಿಸುತ್ತಾನೆ; ದೇಶವನ್ನಾಗಲಿ ಕಾಲವನ್ನಾಗಲಿ ಶುದ್ಧಿಯನ್ನಾಗಲಿ ಅಪೇಕ್ಷಿಸುವುದಿಲ್ಲ.

[ಯಜ್ಞಾದಿ-ಕರ್ಮಗಳು ಕ್ರಿಯಾರೂಪವಾದುದರಿಂದ ಅವುಗಳಿಗೆ ದೇಶಕಾಲಗಳ ಅಪೇಕ್ಷೆಯಿದೆ. ಆತ್ಮನು ನಿತ್ಯಸಿದ್ಧನಾದುದರಿಂದ ದೇಶಕಾಲಗಳ ಅಪೇಕ್ಷೆಯಿಲ್ಲದಿದ್ದರೂ ಅವನ ಅಭಿವ್ಯಕ್ತಿಗಾಗಿ ಪ್ರಮಾಣ-ಪ್ರವೃತ್ತಿಯ ಅಪೇಕ್ಷೆಯಿದೆ; ಇಲ್ಲದಿದ್ದರೆ ಎಲ್ಲರೂ ಆತ್ಮಜ್ಞರಾಗಬೇಕಾಗಿತ್ತು.]

**ದೇವದತ್ತೋಽಹಮಿತ್ಯೇತದ್ವಿಜ್ಞಾನಂ ನಿರಪೇಕ್ಷಕಮ್ ।**
**ತದ್ವದ್ಬ್ರಹ್ಮವಿದೋಽಪ್ಯಸ್ಯ ಬ್ರಹ್ಮಾಹಮಿತಿ ವೇದನಮ್ ॥ ೫೩೧ ॥**

**ಅಹಂ** = ನಾನು **ದೇವದತ್ತಃ** = ದೇವದತ್ತನು **ಇತಿ** = ಎಂಬ **ಏತತ್ ವಿಜ್ಞಾನಂ** = ಈ ಜ್ಞಾನವು **ನಿರಪೇಕ್ಷಕಂ** = ನಿರಪೇಕ್ಷಕವಾದುದು, **ತದ್ವತ್** = ಹಾಗೆಯೇ **ಬ್ರಹ್ಮವಿದಃ ಅಪಿ** = ಬ್ರಹ್ಮಜ್ಞಾನಿಗೂ **ಅಹಂ** = ನಾನು **ಬ್ರಹ್ಮ** = ಬ್ರಹ್ಮವು **ಇತಿ** = ಎಂಬ **ವೇದನಂ** = ಜ್ಞಾನವು [ನಿರಪೇಕ್ಷಕವು].

**೫೩೧.** 'ನಾನು ದೇವದತ್ತನು' ಎಂಬ ಜ್ಞಾನವು ಯಾವುದನ್ನೂ[೧] ಅಪೇಕ್ಷಿಸದೆ ಆಗುವುದು; ಹಾಗೆಯೇ ಬ್ರಹ್ಮಜ್ಞಾನಿಗೂ 'ನಾನು ಬ್ರಹ್ಮವು' ಎಂಬ ಜ್ಞಾನವು (ಯಾವುದನ್ನೂ ಅಪೇಕ್ಷಿಸದೆ ಆಗುವುದು).

[೧ ದೇಶ-ಕಾಲಾದಿಗಳನ್ನು.]

**ಭಾನುನೇವ ಜಗತ್ಸರ್ವಂ ಭಾಸತೇ ಯಸ್ಯ ತೇಜಸಾ ।**
**ಅನಾತ್ಮಕಮಸತ್ತುಚ್ಛಂ ಕಿಂ ನು ತಸ್ಯಾವಭಾಸಕಮ್ ॥ ೫೩೨ ॥**

**ಸರ್ವಂ ಜಗತ್** = ಸರ್ವಜಗತ್ತೂ **ಭಾನುನಾ ಇವ** = ಸೂರ್ಯನಿಂದ ಹೇಗೋ ಹಾಗೆ **ಯಸ್ಯ** = ಯಾವನ **ತೇಜಸಾ** = ತೇಜಸ್ಸಿನಿಂದ **ಅಸತ್** = ಮಿಥ್ಯಾರೂಪವಾದ **ತುಚ್ಛಂ** = ತುಚ್ಛವಾದ **ಅನಾತ್ಮಕಂ** = ಅನಾತ್ಮವಸ್ತುವು **ಭಾಸತೇ** = ತೋರುತ್ತದೆಯೊ **ತಸ್ಯ** = ಅವನಿಗೆ **ಅವಭಾಸಕಂ** = ಪ್ರಕಾಶಕವಾದದ್ದು **ಕಿಂ ನು [ಸ್ಯಾತ್]** = ಯಾವುದಿದ್ದೀತು?

**೫೩೨.** ಸೂರ್ಯನಿಂದ ಸರ್ವಜಗತ್ತೂ ಬೆಳಗುವ ಹಾಗೆ ಯಾವನ ತೇಜಸ್ಸಿನಿಂದ ಮಿಥ್ಯಾರೂಪವೂ ತುಚ್ಛವೂ ಆದ ಅನಾತ್ಮವಸ್ತುವು ತೋರುತ್ತದೆಯೊ ಅವನನ್ನು ಪ್ರಕಾಶಿಸುವುದು ಯಾವುದಿದ್ದೀತು?

**ವೇದಶಾಸ್ತ್ರಪುರಾಣಾನಿ ಭೂತಾನಿ ಸಕಲಾನ್ಯಪಿ ।**
**ಯೇನಾರ್ಥವಂತಿ ತಂ ಕಿನ್ನು ವಿಜ್ಞಾತಾರಂ ಪ್ರಕಾಶಯೇತ್ ॥೫೩೩॥**

**ವೇದ-ಶಾಸ್ತ್ರ-ಪುರಾಣಾನಿ** = ವೇದಶಾಸ್ತ್ರಪುರಾಣಗಳೂ **ಸಕಲಾನಿ ಭೂತಾನಿ ಅಪಿ** = ಭೂತಗಳೆಲ್ಲವೂ **ಯೇನ** = ಯಾವನಿಂದ **ಅರ್ಥವಂತಿ** = ಅರ್ಥವತ್ತಾಗುವುವೊ **ತಂ ವಿಜ್ಞಾತಾರಂ** = ಆ ವಿಜ್ಞಾತೃವನ್ನು **ಕಿಂ ನು** = ಯಾವುದು ತಾನೇ **ಪ್ರಕಾಶಯೇತ್** = ಪ್ರಕಾಶಪಡಿಸೀತು?

**೫೩೩.** ವೇದ-ಶಾಸ್ತ್ರ-ಪುರಾಣಗಳೂ ಸಮಸ್ತ ಭೂತಗಳೂ ಯಾವುದರಿಂದ ಅರ್ಥವತ್ತಾಗುವುವೊ ಆ ವಿಜ್ಞಾತೃವನ್ನು ಯಾವುದು ತಾನೇ ಪ್ರಕಾಶಪಡಿಸೀತು?[೧]

[೧ 'ಯಾವನಿಂದ ಇದೆಲ್ಲವನ್ನೂ ತಿಳಿದುಕೊಳ್ಳುತ್ತಾನೆಯೊ ಅವನನ್ನು ಯಾವುದರಿಂದ ತಿಳಿದುಕೊಂಡಾನು? ಎಲೆ ಮೈತ್ರೇಯಿ, ವಿಜ್ಞಾತೃವನ್ನು ಯಾವುದರಿಂದ ತಿಳಿದುಕೊಂಡಾನು?' **ಯೇನೇದಂ ಸರ್ವಂ ವಿಜಾನಾತಿ ತಂ ಕೇನ ವಿಜಾನೀಯಾತ್? ವಿಜ್ಞಾತಾರಮರೇ ಕೇನ ವಿಜಾನೀಯಾದಿತಿ** (ಬೃಹದಾರಣ್ಯಕ ಉ. ೨. ೪. ೧೪).]

ಏಷ ಸ್ವಯಂಜ್ಯೋತಿರನಂತಶಕ್ತಿ-
ರಾತ್ಮಾಪ್ರಮೇಯಃ ಸಕಲಾನುಭೂತಿಃ ।
ಯಮೇವ ವಿಜ್ಞಾಯ ವಿಮುಕ್ತಬಂಧೋ
ಜಯತ್ಯಯಂ ಬ್ರಹ್ಮವಿದುತ್ತಮೋತ್ತಮಃ ॥ ೫೩೪ ॥

**ಏಷಃ ಆತ್ಮಾ**=ಈ ಆತ್ಮನು **ಸ್ವಯಂಜ್ಯೋತಿಃ**=ಸ್ವಯಂಪ್ರಕಾಶನು **ಅನಂತ-ಶಕ್ತಿಃ**=ಅನಂತಶಕ್ತಿಯುಳ್ಳವನು **ಅಪ್ರಮೇಯಃ**=ಅಪ್ರಮೇಯನು **ಸಕಲಾನು-ಭೂತಿಃ**=ಸರ್ವಾನುಭವಸಿದ್ಧನು; **ಯಮ್ ಏವ**=ಯಾವನನ್ನೇ **ವಿಜ್ಞಾಯ**=ತಿಳಿದುಕೊಂಡು **ವಿಮುಕ್ತಬಂಧಃ**=ಬಂಧದಿಂದ ಮುಕ್ತನಾಗಿ **ಅಯಂ**=ಇವನು **ಬ್ರಹ್ಮವಿತ್-ಉತ್ತಮೋತ್ತಮಃ**=ಬ್ರಹ್ಮಜ್ಞಾನಿಗಳಲ್ಲಿ ಸರ್ವೋತ್ತಮನಾಗಿ **ಜಯತಿ**=ಸರ್ವೋತ್ಕೃಷ್ಟನಾಗಿರುತ್ತಾನೆ.

**೫೩೪.** ಈ ಆತ್ಮನು ಸ್ವಯಂಪ್ರಕಾಶನು, ಅನಂತಶಕ್ತಿಯುಳ್ಳವನು, ಅಪ್ರಮೇಯನಾಗಿದ್ದರೂ ಎಲ್ಲರ ಅನುಭವಕ್ಕೂ ಗೋಚರನಾದವನು; ಅವನನ್ನೇ ಅರಿತುಕೊಂಡು ಸಂಸಾರಬಂಧದಿಂದ ಮುಕ್ತನಾದ ಇವನು ಬ್ರಹ್ಮವಿದರಲ್ಲಿ ಸರ್ವೋತ್ತಮನಾಗಿ ಸರ್ವೋತ್ಕೃಷ್ಟನಾಗಿರುತ್ತಾನೆ.

ನ ಖಿದ್ಯತೇ ನೋ ವಿಷಯೈಃ ಪ್ರಮೋದತೇ
ನ ಸಜ್ಜತೇ ನಾಪಿ ವಿರಜ್ಯತೇ ಚ ।
ಸ್ವಸ್ಮಿನ್ಸದಾ ಕ್ರೀಡತಿ ನಂದತಿ ಸ್ವಯಂ
ನಿರಂತರಾನಂದರಸೇನ ತೃಪ್ತಃ ॥ ೫೩೫ ॥

[ಇವನು] **ನ ಖಿದ್ಯತೇ**=ದುಃಖಿಸುವುದಿಲ್ಲ, **ವಿಷಯೈಃ**=ವಿಷಯಗಳಿಂದ **ನ ಉ ಪ್ರಮೋದತೇ**=ಸಂತೋಷಪಡುವುದಿಲ್ಲ; [ಅವುಗಳಲ್ಲಿ] **ನ ಸಜ್ಜತೇ**=ಆಸಕ್ತನಾಗುವುದಿಲ್ಲ, **ನ ಅಪಿ ವಿರಜ್ಯತೇ ಚ**=ವಿರಕ್ತನಾಗುವುದೂ ಇಲ್ಲ; **ನಿರಂತರ-ಆನಂದ-ರಸೇನ**=ನಿತ್ಯಾನಂದರಸದಿಂದ **ತೃಪ್ತಃ**=ತೃಪ್ತನಾಗಿ **ಸದಾ**=ಯಾವಾಗಲೂ **ಸ್ವಯಂ**=ತಾನೇ **ಸ್ವಸ್ಮಿನ್**=ತನ್ನಲ್ಲಿಯೇ **ಕ್ರೀಡತಿ**=ಕ್ರೀಡಿಸುತ್ತಾನೆ, **ನಂದತಿ**=ಆನಂದಿಸುತ್ತಾನೆ.

**೫೩೫.** ಅವನು (ವಿಷಯ-ವಿಯೋಗದಿಂದ) ದುಃಖಿಸುವುದಿಲ್ಲ, ವಿಷಯಗಳಿಂದ ಸಂತೋಷಪಡುವುದಿಲ್ಲ; (ಸುಖ-ಸಾಧನಗಳಲ್ಲಿ) ಆಸಕ್ತನಾಗುವುದೂ ಇಲ್ಲ, ವಿರಕ್ತನಾಗುವುದೂ ಇಲ್ಲ. ನಿತ್ಯಾನಂದರಸದಿಂದ ತೃಪ್ತನಾಗಿ ಯಾವಾಗಲೂ ತಾನೇ ತನ್ನಲ್ಲಿಯೇ ಕ್ರೀಡಿಸುತ್ತಾನೆ, ಆನಂದಪಡುತ್ತಾನೆ.

**ಕ್ಷುಧಾಂ ದೇಹವ್ಯಥಾಂ ತ್ಯಕ್ತ್ವಾ ಬಾಲಃ ಕ್ರೀಡತಿ ವಸ್ತುನಿ ।**
**ತಥೈವ ವಿದ್ವಾನ್ ರಮತೇ ನಿರ್ಮಮೋ ನಿರಹಂ ಸುಖೀ ॥ ೫೩೬ ॥**

**ಬಾಲಃ**=ಬಾಲಕನು **ಕ್ಷುಧಾಂ**=ಹಸಿವನ್ನೂ **ದೇಹವ್ಯಥಾಂ**=ದೇಹಾಯಾಸದ ವ್ಯಥೆಯನ್ನೂ **ತ್ಯಕ್ತ್ವಾ**=ಬಿಟ್ಟು **ವಸ್ತುನಿ**=[ಆಟದ] ವಸ್ತುವಿನಲ್ಲಿ **ಕ್ರೀಡತಿ**=ಆಡುತ್ತಾನೆ, **ತಥಾ ಏವ**=ಹಾಗೆಯೇ **ವಿದ್ವಾನ್**=ಬ್ರಹ್ಮಜ್ಞಾನಿಯು **ನಿರ್ಮಮಃ**=ಮಮಕಾರವಿಲ್ಲದೆ **ನಿರಹಂ**=ಅಹಂಕಾರವಿಲ್ಲದೆ **ಸುಖೀ**=ಸುಖಿಯಾಗಿ **ರಮತೇ**=ರಮಿಸುತ್ತಾನೆ.

**೫೩೬.** ಬಾಲಕನು ಹಸಿವನ್ನೂ ದೇಹಾಯಾಸದ ವ್ಯಥೆಯನ್ನೂ ಮರೆತು ತನ್ನ ಆಟದ ವಸ್ತುವಿನೊಂದಿಗೆ ಆಡುವಂತೆ ಬ್ರಹ್ಮಜ್ಞಾನಿಯು ಅಹಂಕಾರ-ಮಮಕಾರಗಳಿಲ್ಲದೆ ಸುಖಿಯಾಗಿ (ತನ್ನ ಆತ್ಮನಲ್ಲಿ) ರಮಿಸುತ್ತಾನೆ.

**ಚಿಂತಾಶೂನ್ಯಮದೈನ್ಯಭೈಕ್ಷಮಶನಂ ಪಾನಂ ಸರಿದ್ವಾರಿಷು**
**ಸ್ವಾತಂತ್ರ್ಯೇಣ ನಿರಂಕುಶಾ ಸ್ಥಿತಿರಭೀರ್ನಿದ್ರಾ ಶ್ಮಶಾನೇ ವನೇ ।**
**ವಸ್ತ್ರಂ ಕ್ಷಾಲನ-ಶೋಷಣಾದಿ-ರಹಿತಂ ದಿಗ್ವಾಸ್ತು ಶಯ್ಯಾ ಮಹೀ**
**ಸಂಚಾರೋ ನಿಗಮಾಂತ-ವೀಥಿಷು ವಿದಾಂ ಕ್ರೀಡಾ ಪರೇ ಬ್ರಹ್ಮಣಿ**
**॥ ೫೩೭ ॥**

**ವಿದಾಂ**=ಬ್ರಹ್ಮಜ್ಞಾನಿಗಳಿಗೆ **ಚಿಂತಾಶೂನ್ಯಂ**=ಚಿಂತಾರಹಿತವಾದ **ಅದೈನ್ಯ-ಭೈಕ್ಷ್ಯಂ**=ದೀನತ್ವವಿಲ್ಲದ ಭಿಕ್ಷೆಯಾಗಿರುವ **ಅಶನಂ**=ಆಹಾರವು, **ಸರಿತ್-ವಾರಿಷು**=ನದಿಯ ಜಲಗಳಲ್ಲಿ **ಪಾನಂ**=ಪಾನವು, **ಸ್ವಾತಂತ್ರ್ಯೇಣ**=ಸ್ವತಂತ್ರವಾಗಿ **ನಿರಂಕುಶಾ**=ನಿರಂಕುಶವಾದ **ಸ್ಥಿತಿಃ**=ಸ್ಥಿತಿಯು, **ಶ್ಮಶಾನೇ ವನೇ**=ಶ್ಮಶಾನದಲ್ಲಾಗಲಿ ಕಾಡಿನಲ್ಲಾಗಲಿ **ಅಭೀಃ**=ನಿರ್ಭಯವಾದ **ನಿದ್ರಾ**=ನಿದ್ರೆ, **ದಿಕ್ ವಾ**=ದಿಕ್ಕೇ **ಕ್ಷಾಲನ-ಶೋಷಣಾದಿರಹಿತಂ**=ಒಗೆಯುವುದು ಒಣಗಿಸುವುದು ಮೊದಲಾದುದಿಲ್ಲದ **ವಸ್ತ್ರಮ್ ಅಸ್ತು**=ವಸ್ತ್ರವಾಗಲಿ, **ಮಹೀ**=ಭೂಮಿಯೇ **ಶಯ್ಯಾ**=ಹಾಸಿಗೆ, **ನಿಗಮಾಂತ-ವೀಥಿಷು**=ವೇದಾಂತವೆಂಬ ಬೀದಿಗಳಲ್ಲಿ **ಸಂಚಾರಃ**=ಸಂಚಾರ, **ಪರೇ ಬ್ರಹ್ಮಣಿ**=ಪರಬ್ರಹ್ಮದಲ್ಲಿ **ಕ್ರೀಡಾ**=ಕ್ರೀಡೆಯು.

**೫೩೭.** ಬ್ರಹ್ಮಜ್ಞಾನಿಗಳು ಯಾವ ಚಿಂತೆಯಾಗಲಿ ದೈನ್ಯವಾಗಲಿ ಇಲ್ಲದೆ ಭಿಕ್ಷೆಯಿಂದಲೇ ಊಟಮಾಡುತ್ತಾರೆ; ನದಿಯ ನೀರೇ ಅವರಿಗೆ ಪಾನವಾಗಿದೆ; ಸ್ವತಂತ್ರವಾಗಿಯೂ ನಿರಂಕುಶವಾಗಿಯೂ ಇದ್ದು, ಶ್ಮಶಾನದಲ್ಲಾಗಲಿ ಕಾಡಿನಲ್ಲಾಗಲಿ ನಿರ್ಭಯವಾಗಿ ಮಲಗುತ್ತಾರೆ; ಅವರಿಗೆ ದಿಕ್ಕೇ ಒಗೆಯುವುದು ಒಣಗಿಸುವುದು ಮೊದಲಾದುದಿಲ್ಲದ ವಸ್ತ್ರವಾಗಿದೆ; ನೆಲವೇ ಅವರಿಗೆ ಹಾಸಿಗೆ; ಅವರು ವೇದಾಂತವೆಂಬ ಬೀದಿಗಳಲ್ಲಿ ಸಂಚರಿಸುತ್ತಾರೆ; ಅವರಿಗೆ ಕ್ರೀಡೆಯು ಪರಬ್ರಹ್ಮದಲ್ಲಿಯೇ.

**ವಿಮಾನಮಾಲಂಬ್ಯ ಶರೀರಮೇತದ್-**
**ಭುನಕ್ತ್ಯಶೇಷಾನ್ವಿಷಯಾನುಪಸ್ಥಿತಾನ್ ।**
**ಪರೇಚ್ಛಯಾ ಬಾಲವದಾತ್ಮವೇತ್ತಾ**
**ಯೋಽವ್ಯಕ್ತಲಿಂಗೋಽನನುಷಕ್ತಬಾಹ್ಯಃ ॥ ೫೩೮ ॥**

**ಅವ್ಯಕ್ತಲಿಂಗಃ**=ವರ್ಣಾಶ್ರಮಚಿಹ್ನೆಗಳಿಲ್ಲದ **ಅನನುಷಕ್ತ-ಬಾಹ್ಯಃ**=ಬಾಹ್ಯ ವಿಷಯಗಳಲ್ಲಿ ಆಸಕ್ತನಾಗದ **ಯಃ ಆತ್ಮವೇತ್ತಾ**=ಆತ್ಮಜ್ಞಾನಿಯಾದವನು **ಏತತ್**=ಈ **ಶರೀರಂ**=ಶರೀರವೆಂಬ **ವಿಮಾನಂ**=ವಿಮಾನವನ್ನು **ಆಲಂಬ್ಯ**=ಆಶ್ರಯಿಸಿಕೊಂಡು **ಪರೇಚ್ಛಯಾ**=ಇತರರ ಅಪೇಕ್ಷೆಯಿಂದ **ಉಪಸ್ಥಿತಾನ್**=ಒದಗಿದ **ಅಶೇಷಾನ್ ವಿಷಯಾನ್**=ಸಮಸ್ತ ವಿಷಯಗಳನ್ನೂ **ಬಾಲವತ್**=ಹುಡುಗನಂತೆ **ಭುನಕ್ತಿ**=ಅನುಭವಿಸುತ್ತಾನೆ.

**೫೩೮.** ಯಾವ ವರ್ಣಾಶ್ರಮಾದಿಚಿಹ್ನೆಗಳಿಲ್ಲದ, ಬಾಹ್ಯವಿಷಯಗಳಲ್ಲಿ ಆಸಕ್ತನಾಗದ ಆತ್ಮಜ್ಞಾನಿಯು ಈ ಶರೀರವೆಂಬ ವಿಮಾನವನ್ನು ಆಶ್ರಯಿಸಿಕೊಂಡು ಇತರರ ಅಪೇಕ್ಷೆಯಿಂದ ಒದಗಿದ ವಿಷಯಗಳನ್ನೆಲ್ಲ ಹುಡುಗನಂತೆ ಅನುಭವಿಸುತ್ತಾನೆ.

**ದಿಗಂಬರೋ ವಾಽಪಿ ಸಾಂಬರೋ ವಾ**
**ತ್ವಗಂಬರೋ ವಾಽಪಿ ಚಿದಂಬರಸ್ಥಃ ।**
**ಉನ್ಮತ್ತವದ್ವಾಽಪಿ ಚ ಬಾಲವದ್ವಾ**
**ಪಿಶಾಚವದ್ವಾಽಪಿ ಚರತ್ಯವನ್ಯಾಮ್ ॥ ೫೩೯ ॥**

**ಚಿದಂಬರಸ್ಥಃ**=ಚಿದಾಕಾಶದಲ್ಲಿರುವವನು **ದಿಗಂಬರಃ ವಾ ಅಪಿ**=ದಿಗಂಬರನಾಗಿ, **ಸಾಂಬರಃ ವಾ**=ಅಥವಾ ವಸ್ತ್ರವನ್ನುಟ್ಟುಕೊಂಡವನಾಗಿ, **ತ್ವಗಂಬರಃ ವಾ ಅಪಿ**=ಅಥವಾ ನಾರುಬಟ್ಟೆಯನ್ನುಟ್ಟವನಾಗಿ **ಉನ್ಮತ್ತವತ್ ವಾ ಅಪಿ**=ಉನ್ಮತ್ತನಂತೆ **ಚ ಬಾಲವತ್ ವಾ**=ಅಥವಾ ಬಾಲಕನಂತೆ **ಪಿಶಾಚವತ್ ವಾ ಅಪಿ**=ಅಥವಾ ಪಿಶಾಚದಂತೆ **ಅವನ್ಯಾಂ**=ಭೂಮಿಯಲ್ಲಿ **ಚರತಿ**=ಸಂಚರಿಸುತ್ತಾನೆ.

**೫೩೯.** ಚಿದಾಕಾಶದಲ್ಲಿರುವವನು (ಎಂದರೆ ಬ್ರಹ್ಮಜ್ಞಾನಿಯು) ದಿಗಂಬರನಾಗಿ ಅಥವಾ ವಸ್ತ್ರವನ್ನುಟ್ಟುಕೊಂಡು ಅಥವಾ ನಾರುಬಟ್ಟೆಯನ್ನುಟ್ಟುಕೊಂಡು, ಉನ್ಮತ್ತನಂತೆ ಬಾಲಕನಂತೆ ಅಥವಾ ಪಿಶಾಚದಂತೆ ಭೂಮಿಯಲ್ಲಿ ಸಂಚರಿಸುತ್ತಾನೆ.

**ಕಾಮಾನ್ನೀ ಕಾಮರೂಪೀ ಸಂಶ್ಚರತ್ಯೇಕಚರೋ ಮುನಿಃ ।**
**ಸ್ವಾತ್ಮನೈವ ಸದಾ ತುಷ್ಟಃ ಸ್ವಯಂ ಸರ್ವಾತ್ಮನಾ ಸ್ಥಿತಃ ॥ ೫೪೦ ॥**

**ಸ್ವ-ಆತ್ಮನಾ ಏವ** = ತನ್ನ ಆತ್ಮನಿಂದಲೇ **ಸದಾ** = ಯಾವಾಗಲೂ **ತುಷ್ಟಃ** = ಸಂತುಷ್ಟನಾದ **ಸ್ವಯಂ** = ತಾನೇ **ಸರ್ವಾತ್ಮನಾ ಸ್ಥಿತಃ** = ಸರ್ವಾತ್ಮಭಾವದಿಂದ ಇರುವ **ಏಕಚರಃ** = ಒಬ್ಬನೇ ಆದ **ಮುನಿಃ** = ಮುನಿಯು **ಕಾಮ-ಅನ್ನೀ** = ಯಥೇಚ್ಛಾ-ಅನ್ನಶಾಲಿಯಾಗಿ **ಕಾಮರೂಪೀ** = ಯಥೇಚ್ಛಾ-ರೂಪಶಾಲಿಯಾಗಿ **ಸಂಶ್ಚರತಿ** = ಸಂಚರಿಸುತ್ತಾನೆ.

**೫೪೦.** ಸ್ವಾತ್ಮನಿಂದಲೇ ಸದಾ ಸಂತುಷ್ಟನಾದ, ತಾನೇ ಸರ್ವಾತ್ಮನಾದ ಮತ್ತು ಏಕಚಾರಿಯಾದ ಮುನಿಯು ಯಥೇಚ್ಛವಾಗಿ ಅನ್ನಶಾಲಿಯೂ ರೂಪ ಶಾಲಿಯೂ ಆಗಿ[೧] ಸಂಚರಿಸುತ್ತಾನೆ.

[[೧] ಬ್ರಹ್ಮಜ್ಞಾನಿಯು ತಾನೇ ಎಲ್ಲವೂ ಆಗಿರುವುದರಿಂದ ಬ್ರಹ್ಮಸ್ವರೂಪದಿಂದ ಎಲ್ಲರ ರೂಪವನ್ನೂ ಅನ್ನವನ್ನೂ ಪಡೆದುಕೊಳ್ಳುತ್ತಾನೆ ಎಂದರ್ಥ. ಭೃಗುವಲ್ಲಿಯ (ತೈತ್ತಿರೀಯ ಉ.) ಹತ್ತನೆಯ ಅನುವಾಕವನ್ನು ನೋಡಿ.]

**ಕ್ವಚಿನ್ಮೂಢೋ ವಿದ್ವಾನ್ ಕ್ವಚಿದಪಿ ಮಹಾರಾಜ-ವಿಭವಃ**
**ಕ್ವಚಿದ್ಭ್ರಾಂತಃ ಸೌಮ್ಯಃ ಕ್ವಚಿದಜಗರಾಚಾರ-ಕಲಿತಃ ।**
**ಕ್ವಚಿತ್ಪಾತ್ರೀಭೂತಃ ಕ್ವಚಿದವಮತಃ ಕ್ವಾಪ್ಯವಿದಿತ-**
**ಶ್ಚರತ್ಯೇವಂ ಪ್ರಾಜ್ಞಃ ಸತತ-ಪರಮಾನಂದ-ಸುಖಿತಃ ॥ ೫೪೧ ॥**

**ಸತತ-ಪರಮಾನಂದ-ಸುಖಿತಃ** = ನಿರಂತರವೂ ಪರಮಾನಂದ-ಸುಖವುಳ್ಳ **ಪ್ರಾಜ್ಞಃ** = ಬ್ರಹ್ಮವಿದನು **ಕ್ವಚಿತ್** = ಕೆಲವು ವೇಳೆ **ಮೂಢಃ** = ಮೂಢನಂತೆ, **ಕ್ವಚಿತ್ ಅಪಿ ವಿದ್ವಾನ್** = ವಿದ್ವಾಂಸನಂತೆ, **ಮಹಾರಾಜ-ವಿಭವಃ** = ಮಹಾರಾಜ-ವೈಭವದಿಂದ ಮೆರೆಯುವಂತೆ, **ಕ್ವಚಿತ್ ಭ್ರಾಂತಃ** = ಭ್ರಾಂತನಂತೆ, **ಕ್ವಚಿತ್ ಸೌಮ್ಯಃ** = ಸೌಮ್ಯನಂತೆ, **ಅಜಗರ-ಆಚಾರ-ಕಲಿತಃ** = ಅಜಗರವೃತ್ತಿಯಿಂದ ಕೂಡಿದವನಾಗಿ, **ಕ್ವಚಿತ್ ಪಾತ್ರೀಭೂತಃ** = ಸತ್ಪಾತ್ರನಾಗಿ, **ಕ್ವಚಿತ್ ಅವಮತಃ** = ಅವಮಾನಿತನಾಗಿ, **ಕ್ವ ಅಪಿ** = ಎಲ್ಲಿಯೊ **ಅವಿದಿತಃ** = ತಿಳಿಯಲ್ಪಡದವನಾಗಿ— **ಏವಂ** = ಹೀಗೆ **ಚರತಿ** = ಸಂಚರಿಸುತ್ತಾನೆ.

**೫೪೧.** ಕೆಲವು ವೇಳೆ ಮೂಢನಂತೆ, ಕೆಲವೊಮ್ಮೆ ವಿದ್ವಾಂಸನಂತೆ, ಮಹಾರಾಜ-ವೈಭವದಿಂದ ಮೆರೆಯುವಂತೆ, ಇನ್ನೊಮ್ಮೆ ಭ್ರಾಂತನಂತೆ, ಮತ್ತೊಂದು ಸಲ ಶಾಂತನಂತೆ, ಕೆಲವು ಸಮಯ ಅಜಗರವೃತ್ತಿಯನ್ನವಲಂಬಿಸಿದವನಾಗಿ,[೧] ಮತ್ತೊಮ್ಮೆ ಸತ್ಪಾತ್ರನಾಗಿ, ಕೆಲವು ಸಲ ಅವಮಾನಿತನಾಗಿ, ಎಲ್ಲಿಯೊ ಯಾರಿಗೂ ತಿಳಿಯದಂತೆ ಇರುತ್ತ, ನಿರಂತರವೂ ಪರಮಾನಂದ ಸುಖವುಳ್ಳ ಬ್ರಹ್ಮವಿದನು ಹೀಗೆ ಸಂಚರಿಸುತ್ತಾನೆ.

[ಜಗತ್ತಿನಲ್ಲಿ ಬ್ರಹ್ಮಜ್ಞಾನಿಯನ್ನು ಜನರು ನಾನಾ ಬಗೆಯಿಂದ ನೋಡುತ್ತಾರೆ, ಅವನ ವಿಷಯದಲ್ಲಿ ನಾನಾ ವಿಧವಾದ ಅಭಿಪ್ರಾಯವನ್ನು ಕೊಡುತ್ತಾರೆ. ಅವರು ಏನೇ ಹೇಳಲಿ, ಏನೇ ಮಾಡಲಿ—ಬ್ರಹ್ಮವಿದನು ಉದಾಸೀನನಾಗಿಯೇ ಇರುತ್ತಾನೆ.

[೧] ಹೆಬ್ಬಾವು ಹೆಚ್ಚು ಓಡಾಡದೆ ತನ್ನ ಸಮೀಪಕ್ಕೆ ಬಂದ ಆಹಾರವನ್ನೇ ತೆಗೆದುಕೊಳ್ಳುತ್ತದೆ.]

**ನಿರ್ಧನೋಽಪಿ ಸದಾ ತುಷ್ಟೋಽಪ್ಯಸಹಾಯೋ ಮಹಾಬಲಃ ।**
**ನಿತ್ಯತೃಪ್ತೋಽಪ್ಯಭುಂಜಾನೋಽಪ್ಯಸಮಃ ಸಮದರ್ಶನಃ ॥ ೫೪೨ ॥**

[ಬ್ರಹ್ಮಜ್ಞಾನಿಯು] **ನಿರ್ಧನಃ ಅಪಿ** = ಧನರಹಿತನಾದರೂ **ಸದಾ** = ಯಾವಾಗಲೂ **ತುಷ್ಟಃ** = ಸಂತುಷ್ಟನಾಗಿಯೂ **ಅಸಹಾಯಃ ಅಪಿ** = ಸಹಾಯವಿಲ್ಲದವನಾದರೂ **ಮಹಾಬಲಃ** = ಮಹಾಬಲನಾಗಿಯೂ **ಅಭುಂಜಾನಃ ಅಪಿ** = ವಿಷಯಭೋಗಗಳನ್ನು ಅನುಭವಿಸದಿದ್ದರೂ **ನಿತ್ಯತೃಪ್ತಃ** = ನಿತ್ಯತೃಪ್ತನಾಗಿಯೂ **ಅಸಮಃ ಅಪಿ** = ಅಸದೃಶನಾಗಿದ್ದರೂ **ಸಮದರ್ಶನಃ** = ಸಮದೃಷ್ಟಿಯುಳ್ಳವನಾಗಿಯೂ [ಇರುತ್ತಾನೆ].

**೫೪೨.** (ಬ್ರಹ್ಮಜ್ಞಾನಿಯು) ಧನರಹಿತನಾದರೂ ಸದಾ ಸಂತುಷ್ಟನಾಗಿರುತ್ತಾನೆ;[೧] ಸಹಾಯವಿಲ್ಲದವನಾದರೂ ಮಹಾಬಲನಾಗಿರುತ್ತಾನೆ;[೨] ವಿಷಯಭೋಗಗಳನ್ನು ಅನುಭವಿಸದಿದ್ದರೂ ನಿತ್ಯತೃಪ್ತನಾಗಿರುತ್ತಾನೆ;[೩] ಅಸದೃಶನಾಗಿದ್ದರೂ ಸಮದೃಷ್ಟಿಯುಳ್ಳವನಾಗಿರುತ್ತಾನೆ.[೪]

[[೧] ಆತ್ಮಜ್ಞಾನವೆಂಬ ಸಂಪತ್ತು ಇರುವುದರಿಂದ.

[೨] ವಿವೇಕ ಧೈರ್ಯ ಮೊದಲಾದುವುಗಳಿಂದ ಸಂಪನ್ನನಾಗಿರುತ್ತಾನೆ.

[೩] ಆತ್ಮಾನಂದವನ್ನು ಅನುಭವಿಸುತ್ತ ಇರುತ್ತಾನೆ.

[೪] ಸರ್ವತ್ರ ಶತ್ರುಗಳನ್ನಾಗಲಿ ಮಿತ್ರರನ್ನಾಗಲಿ ನೋಡುವುದಿಲ್ಲ.]

**ಅಪಿ ಕುರ್ವನ್ನಕುರ್ವಾಣಶ್ಚಾಭೋಕ್ತಾ ಫಲಭೋಗ್ಯಪಿ ।**
**ಶರೀರ್ಯಪ್ಯಶರೀರ್ಯೇಷ ಪರಿಚ್ಛಿನ್ನೋಽಪಿ ಸರ್ವಗಃ ॥ ೫೪೩ ॥**

**ಏಷಃ** = ಇವನು **ಕುರ್ವನ್ ಅಪಿ** = ಕೆಲಸ ಮಾಡುತ್ತಿದ್ದರೂ **ಅಕುರ್ವಾಣಃ** = ಮಾಡುತ್ತಿಲ್ಲ, **ಫಲಭೋಗೀ ಅಪಿ** = ಕರ್ಮಫಲವನ್ನು ಅನುಭವಿಸುತ್ತಿದ್ದರೂ **ಅಭೋಕ್ತಾ ಚ** = ಅನುಭವಿಸುತ್ತಿಲ್ಲ, **ಶರೀರೀ ಅಪಿ** = ಶರೀರವುಳ್ಳವನಾಗಿದ್ದರೂ **ಅಶರೀರೀ** = ಶರೀರವಿಲ್ಲದವನು, **ಪರಿಚ್ಛಿನ್ನಃ ಅಪಿ** = ಪರಿಚ್ಛಿನ್ನನಾಗಿದ್ದರೂ **ಸರ್ವಗಃ** = ಸರ್ವವ್ಯಾಪಿಯು.

**೫೪೩.** ಇವನು ಕೆಲಸ ಮಾಡುತ್ತಿದ್ದರೂ ಮಾಡುತ್ತಿಲ್ಲ;[೧] ಕರ್ಮಫಲವನ್ನನುಭವಿಸುತ್ತಿದ್ದರೂ ಅನುಭವಿಸುತ್ತಿಲ್ಲ;[೨] ಶರೀರವುಳ್ಳವನಾಗಿದ್ದರೂ ಶರೀರವಿಲ್ಲದವನು;[೩] ಪರಿಚ್ಛಿನ್ನನಾಗಿದ್ದರೂ ಸರ್ವವ್ಯಾಪಿಯು.

[[೧] ಕರ್ತೃತ್ವವಿಲ್ಲದಿರುವುದರಿಂದ.
[೨] ಭೋಕ್ತೃತ್ವವಿಲ್ಲದಿರುವುದರಿಂದ.
[೩] ಶರೀರದಲ್ಲಿ ಆತ್ಮಭಾವವಿಲ್ಲದಿರುವುದರಿಂದ.]

**ಅಶರೀರಂ ಸದಾ ಸಂತಮಿಮಂ ಬ್ರಹ್ಮವಿದಂ ಕ್ವಚಿತ್ ।**
**ಪ್ರಿಯಾಪ್ರಿಯೇ ನ ಸ್ಪೃಶತಸ್ತಥೈವ ಚ ಶುಭಾಶುಭೇ ॥ ೫೪೪ ॥**

**ಸದಾ** = ಯಾವಾಗಲೂ **ಅಶರೀರಂ ಸಂತಂ** = ಶರೀರಾಭಿಮಾನವಿಲ್ಲದಿರುವ **ಇಮಂ ಬ್ರಹ್ಮವಿದಂ** = ಈ ಬ್ರಹ್ಮಜ್ಞಾನಿಯನ್ನು **ಪ್ರಿಯಾಪ್ರಿಯೇ** = ಸುಖದುಃಖಗಳಾಗಲಿ **ತಥಾ ಏವ ಚ** = ಹಾಗೆಯೇ **ಶುಭಾಶುಭೇ** = ಪುಣ್ಯಪಾಪಗಳಾಗಲಿ **ಕ್ವಚಿತ್** = ಎಂದಿಗೂ **ನ ಸ್ಪೃಶತಃ** = ಸೋಂಕುವುದಿಲ್ಲ.

**೫೪೪.** ಯಾವಾಗಲೂ ಶರೀರಾಭಿಮಾನವಿಲ್ಲದೆ ಇರುತ್ತಿರುವ ಈ ಬ್ರಹ್ಮಜ್ಞಾನಿಯನ್ನು ಸುಖದುಃಖಗಳಾಗಲಿ ಪುಣ್ಯಪಾಪಗಳಾಗಲಿ ಎಂದಿಗೂ ಸೋಂಕುವುದಿಲ್ಲ.

[ಛಾಂದೋಗ್ಯೋಪನಿಷತ್ತಿನ **ಅಶರೀರಂ ವಾವ ಸಂತಂ ಪ್ರಿಯಾಪ್ರಿಯೇ ನ ಸ್ಪೃಶತಃ** (೮. ೧೨. ೧) ಎಂಬುದರ ಭಾವ.]

**ಸ್ಥೂಲಾದಿ-ಸಂಬಂಧವತೋಽಭಿಮಾನಿನಃ**
**ಸುಖಂ ಚ ದುಃಖಂ ಚ ಶುಭಾಶುಭೇ ಚ ।**
**ವಿಧ್ವಸ್ತಬಂಧಸ್ಯ ಸದಾತ್ಮನೋ ಮುನೇಃ**
**ಕುತಃ ಶುಭಂ ವಾಽಪ್ಯಶುಭಂ ಫಲಂ ವಾ ॥ ೫೪೫ ॥**

**ಸ್ಥೂಲಾದಿ-ಸಂಬಂಧವತಃ** = ಸ್ಥೂಲದೇಹವೇ ಮೊದಲಾದುವುಗಳೊಂದಿಗೆ ಸಂಬಂಧವುಳ್ಳ **ಅಭಿಮಾನಿನಃ** = ಅಭಿಮಾನಿಗೆ **ಸುಖಂ ಚ ದುಃಖಂ ಚ** = ಸುಖದುಃಖಗಳೂ **ಶುಭಾಶುಭೇ ಚ** = ಶುಭಾಶುಭಗಳೂ [ಉಂಟಾಗುತ್ತವೆ]; **ವಿಧ್ವಸ್ತ-ಬಂಧಸ್ಯ** = ಬಂಧವನ್ನು ಧ್ವಂಸಮಾಡಿಕೊಂಡ **ಸದಾತ್ಮನಃ** = ಸತ್ಸ್ವರೂಪನಾದ **ಮುನೇಃ** = ಮುನಿಗೆ **ಶುಭಂ ವಾ ಅಪಿ** = ಶುಭವಾಗಲಿ **ಅಶುಭಂ** = ಅಶುಭವಾಗಲಿ **ಫಲಂ ವಾ** = ಫಲವಾಗಲಿ **ಕುತಃ** = ಎಲ್ಲಿಯದು?

**೫೪೫.** ಸ್ಥೂಲದೇಹವೇ ಮೊದಲಾದುವುಗಳೊಂದಿಗೆ ಸಂಬಂಧವನ್ನು ಪಡೆದಿರುವ ಅಭಿಮಾನಿಗೆ ಸುಖದುಃಖಗಳೂ ಶುಭಾಶುಭಗಳೂ ಉಂಟಾಗು

ತ್ತವೆ. ಬಂಧವನ್ನು ಧ್ವಂಸಪಡಿಸಿಕೊಂಡು ಸತ್ಸ್ವರೂಪನಾಗಿರುವ ಮುನಿಗೆ ಶುಭವಾಗಲಿ ಅಶುಭವಾಗಲಿ ಅವುಗಳ ಫಲವಾಗಲಿ ಎಲ್ಲಿಯದು?

**ತಮಸಾ ಗ್ರಸ್ತವದ್ಭಾನಾದಗ್ರಸ್ತೋಽಪಿ ರವಿರ್ಜನೈಃ ।**
**ಗ್ರಸ್ತ ಇತ್ಯುಚ್ಯತೇ ಭ್ರಾಂತ್ಯಾ ಹ್ಯಜ್ಞಾತ್ವಾ ವಸ್ತುಲಕ್ಷಣಮ್ ॥೫೪೬॥**

ರವಿಃ = ಸೂರ್ಯನು **ಅಗ್ರಸ್ತಃ ಅಪಿ** = ಗ್ರಸ್ತನಾಗದಿದ್ದರೂ **ತಮಸಾ** = ರಾಹುವಿನಿಂದ **ಗ್ರಸ್ತವತ್** = ಗ್ರಸ್ತನಾದಂತೆ **ಭಾನಾತ್** = ತೋರುವುದರಿಂದ **ವಸ್ತು-ಲಕ್ಷಣಮ್ ಅಜ್ಞಾತ್ವಾ** = ವಸ್ತುಸ್ವರೂಪವನ್ನು ಅರಿಯದೆ **ಭ್ರಾಂತ್ಯಾ ಹಿ** = ಭ್ರಾಂತಿಯಿಂದ **ಜನೈಃ** = ಜನರಿಂದ **ಗ್ರಸ್ತಃ ಇತಿ** = ಗ್ರಸ್ತನಾಗಿರುವನು ಎಂದು **ಉಚ್ಯತೇ** = ಹೇಳಲ್ಪಡುತ್ತಾನೆ.

**೫೪೬.** ಸೂರ್ಯನು ರಾಹುವಿನಿಂದ ಗ್ರಸ್ತನಾಗದಿದ್ದರೂ ಗ್ರಸ್ತನಾದಂತೆ ತೋರುವುದರಿಂದ ವಸ್ತುಸ್ವರೂಪವನ್ನರಿಯದ ಜನರು '(ಸೂರ್ಯನು) ಗ್ರಸ್ತನಾಗಿರುವನು' ಎಂದು ಭ್ರಾಂತಿಯಿಂದ ಹೇಳುತ್ತಾರೆ.

**ತದ್ವದ್ದೇಹಾದಿ-ಬಂಧೇಭ್ಯೋ ವಿಮುಕ್ತಂ ಬ್ರಹ್ಮವಿತ್ತಮಮ್ ।**
**ಪಶ್ಯಂತಿ ದೇಹಿವನ್ಮೂಢಾಃ ಶರೀರಾಭಾಸ-ದರ್ಶನಾತ್ ॥ ೫೪೭ ॥**

**ತದ್ವತ್** = ಹಾಗೆಯೇ **ದೇಹಾದಿ-ಬಂಧೇಭ್ಯಃ** = ದೇಹಾದಿ-ಬಂಧಗಳಿಂದ **ವಿಮುಕ್ತಂ** = ವಿಮುಕ್ತನಾದ **ಬ್ರಹ್ಮವಿತ್ತಮಂ** = ಶ್ರೇಷ್ಠಬ್ರಹ್ಮಜ್ಞಾನಿಯನ್ನು **ಮೂಢಾಃ** = ಅಜ್ಞಾನಿಗಳು **ಶರೀರ-ಆಭಾಸ-ದರ್ಶನಾತ್** = ಶರೀರವಿದ್ದಂತೆ ತೋರುವುದರಿಂದ **ದೇಹಿವತ್** = ಶರೀರವುಳ್ಳವನಂತೆ **ಪಶ್ಯಂತಿ** = ನೋಡುತ್ತಾರೆ.

**೫೪೭.** ಹಾಗೆಯೇ ದೇಹಾದಿಬಂಧಗಳಿಂದ ಮುಕ್ತನೂ ಶ್ರೇಷ್ಠನೂ ಆದ ಬ್ರಹ್ಮಜ್ಞಾನಿಗೆ ಶರೀರವಿದ್ದಂತೆ ತೋರುವುದರಿಂದ ಅಜ್ಞಾನಿಗಳು ಅವನಿಗೂ ಶರೀರವಿದೆಯೆಂದು ತಿಳಿಯುತ್ತಾರೆ.

**ಅಹಿ-ನಿರ್ಲ್ವಯನೀವಾಯಂ ಮುಕ್ತದೇಹಸ್ತು ತಿಷ್ಠತಿ ।**
**ಇತಸ್ತತಶ್ಚಾಲ್ಯಮಾನೋ ಯತ್ಕಿಂಚಿತ್ಪ್ರಾಣವಾಯುನಾ ॥ ೫೪೮ ॥**

**ತು** = ಆದರೆ **ಅಯಂ** = ಈ **ಮುಕ್ತದೇಹಃ** = ಮುಕ್ತನ ದೇಹವು **ಅಹಿ-ನಿರ್ಲ್ವಯನೀ ಇವ** = ಹಾವಿನ ಪೊರೆಯಂತೆ **ಯತ್ಕಿಂಚಿತ್** = ಹೇಗೋ **ಪ್ರಾಣ-ವಾಯುನಾ** = ಪ್ರಾಣವಾಯುವಿನಿಂದ **ಇತಃ ತತಃ** = ಇಲ್ಲಿ ಅಲ್ಲಿ **ಚಾಲ್ಯಮಾನಃ** = ಚಲಿಸಲ್ಪಡುತ್ತ **ತಿಷ್ಠತಿ** = ಇರುತ್ತದೆ.

**೫೪೮.** ಆದರೆ ಈ ಮುಕ್ತನ ದೇಹವು (ಬಿಡಲ್ಪಟ್ಟ) ಹಾವಿನ ಪೊರೆಯಂತೆ ಹೇಗೋ ಪ್ರಾಣವಾಯುವಿನಿಂದ ಇಲ್ಲಿ ಅಲ್ಲಿ ಚಲಿಸಲ್ಪಡುತ್ತ ಇರುತ್ತದೆ.

['ಹೇಗೆ ಪ್ರಾಣರಹಿತವಾದ ಹಾವಿನ ಪೊರೆಯು ಹುತ್ತದಲ್ಲಿ ಬಿಡಲ್ಪಟ್ಟು ಬಿದ್ದಿರುತ್ತದೆಯೊ ಹಾಗೆಯೇ ಈ ಶರೀರವು ಬಿದ್ದಿರುತ್ತದೆ' **ತದ್ಯಥಾಽಹಿನಿರ್ಲ್ವಯನೀ ವಲ್ಮೀಕೇ ಮೃತಾ ಪ್ರತ್ಯಸ್ತಾ ಶಯೀತ, ಏವಮೇವೇದಂ ಶರೀರಂ ಶೇತೇ** (ಬೃಹದಾರಣ್ಯಕ ಉ. ೪. ೪. ೭). ]

**ಸ್ರೋತಸಾ ನೀಯತೇ ದಾರು ಯಥಾ ನಿಮ್ನೋನ್ನತ-ಸ್ಥಲಮ್ ।**
**ದೈವೇನ ನೀಯತೇ ದೇಹೋ ಯಥಾಕಾಲೋಪಭುಕ್ತಿಷು ॥ ೫೪೯ ॥**

**ಯಥಾ** = ಹೇಗೆ **ದಾರು** = ಮರದ ತುಂಡು **ಸ್ರೋತಸಾ** = ಪ್ರವಾಹದಿಂದ **ನಿಮ್ನ-ಉನ್ನತ-ಸ್ಥಲಂ** = ಹಳ್ಳತಿಟ್ಟುಗಳಿಗೆ **ನೀಯತೇ** = ಒಯ್ಯಲ್ಪಡುತ್ತದೆಯೊ [ಹಾಗೆಯೇ] **ದೇಹಃ** = ದೇಹವು **ಯಥಾಕಾಲ-ಉಪಭುಕ್ತಿಷು** = ಕಾಲೋಚಿತವಾದ ಭೋಗಗಳ ಕಡೆಗೆ **ದೈವೇನ** = ಪ್ರಾರಬ್ಧಕರ್ಮದಿಂದ **ನೀಯತೇ.**

**೫೪೯.** ಹೇಗೆ ನೀರಿನ ಪ್ರವಾಹವು ಮರದ ತುಂಡನ್ನು ಹಳ್ಳತಿಟ್ಟುಗಳಿಗೆ ಒಯ್ಯುತ್ತದೆಯೊ ಹಾಗೆಯೇ ಪ್ರಾರಬ್ಧಕರ್ಮವು ದೇಹವನ್ನು ಕಾಲೋಚಿತವಾದ ಸುಖದುಃಖಾನುಭವದ ಕಡೆಗೆ ಒಯ್ಯುತ್ತದೆ.

**ಪ್ರಾರಬ್ಧಕರ್ಮ-ಪರಿಕಲ್ಪಿತ-ವಾಸನಾಭಿಃ**
**ಸಂಸಾರಿವಚ್ಚರತಿ ಭುಕ್ತಿಷು ಮುಕ್ತದೇಹಃ ।**
**ಸಿದ್ಧಃ ಸ್ವಯಂ ವಸತಿ ಸಾಕ್ಷಿವದತ್ರ ತೂಷ್ಣೀಂ**
**ಚಕ್ರಸ್ಯ ಮೂಲಮಿವ ಕಲ್ಪ-ವಿಕಲ್ಪ-ಶೂನ್ಯಃ ॥ ೫೫೦ ॥**

**ಮುಕ್ತದೇಹಃ** = ಬ್ರಹ್ಮಜ್ಞಾನಿಯು **ಪ್ರಾರಬ್ಧಕರ್ಮ-ಪರಿಕಲ್ಪಿತ-ವಾಸನಾಭಿಃ** = ಪ್ರಾರಬ್ಧಕರ್ಮಗಳಿಂದ ಕಲ್ಪಿತವಾಗಿರುವ ಸಂಸ್ಕಾರಗಳಿಂದ **ಭುಕ್ತಿಷು** = ಭೋಗಗಳಲ್ಲಿ **ಸಂಸಾರಿವತ್** = ಸಂಸಾರಿಯಂತೆ **ಚರತಿ** = ಸಂಚರಿಸುತ್ತಾನೆ; **ಸಿದ್ಧಃ** = [ಆ] ಸಿದ್ಧನು **ಚಕ್ರಸ್ಯ** = ಚಕ್ರದ **ಮೂಲಮ್ ಇವ** = ಅಚ್ಚಿನಂತೆ **ಕಲ್ಪ-ವಿಕಲ್ಪ-ಶೂನ್ಯಃ** = ಸಂಕಲ್ಪ-ವಿಕಲ್ಪಗಳಿಲ್ಲದೆ **ಸಾಕ್ಷಿವತ್** = ಸಾಕ್ಷಿಯ ಹಾಗೆ **ಅತ್ರ** = ಇಲ್ಲಿ **ಸ್ವಯಂ** = ತಾನು **ತೂಷ್ಣೀಂ ವಸತಿ** = ಸುಮ್ಮನಿರುತ್ತಾನೆ.

**೫೫೦.** ಬ್ರಹ್ಮಜ್ಞಾನಿಯು ಪ್ರಾರಬ್ಧಕರ್ಮಗಳಿಂದ ಕಲ್ಪಿತವಾಗಿರುವ ಸಂಸ್ಕಾರಗಳಿಂದ ಸಂಸಾರಿಯಂತೆ ಭೋಗಗಳಲ್ಲಿ ಸಂಚರಿಸುತ್ತಾನೆ. ಚಕ್ರದ

ಕೆಳಗಿರುವ ಅಚ್ಚಿನಂತೆ[೧] ಸಿದ್ಧನು ಸಂಕಲ್ಪ-ವಿಕಲ್ಪಗಳಿಲ್ಲದೆ ಸಾಕ್ಷಿಯ ಹಾಗೆ ಸಂಸಾರದಲ್ಲಿ ಸುಮ್ಮನಿರುತ್ತಾನೆ.

[೧ ಗಡಿಗೆಯನ್ನು ಮಾಡುವ ಚಕ್ರವು ತಿರುಗುತ್ತಿದ್ದರೂ ಅದರ ಕೆಳಗಿರುವ ಆಧಾರ ವಾದ ಅಚ್ಚು ಅಚಲವಾಗಿರುತ್ತದೆ.]

**ನೈವೇಂದ್ರಿಯಾಣಿ ವಿಷಯೇಷು ನಿಯುಂಕ್ತ ಏಷ**
**ನೈವಾಪಯುಂಕ್ತ ಉಪದರ್ಶನ-ಲಕ್ಷಣಸ್ಥಃ ।**
**ನೈವಕ್ರಿಯಾಫಲಮಪೀಷದವೇಕ್ಷತೇ ಸ**
**ಸ್ವಾನಂದ-ಸಾಂದ್ರರಸಪಾನ-ಸುಮತ್ತ-ಚಿತ್ತಃ ॥ ೫೫೧ ॥**

**ಉಪದರ್ಶನ-ಲಕ್ಷಣಸ್ಥಃ**=ಸಾಕ್ಷಿರೂಪನಾದ **ಏಷಃ**=ಇವನು **ಇಂದ್ರಿಯಾಣಿ**=ಇಂದ್ರಿಯಗಳನ್ನು **ವಿಷಯೇಷು**=ವಿಷಯಗಳಲ್ಲಿ **ನ ಏವ ನಿಯುಂಕ್ತೇ**= ನಿಯೋಜಿಸುವುದೇ ಇಲ್ಲ, **ನ ಏವ ಅಪಯುಂಕ್ತೇ**=ಹಿಂತೆಗೆಯುವುದೂ ಇಲ್ಲ, **ಕ್ರಿಯಾ ಫಲಂ**=ಕರ್ಮಫಲವನ್ನು **ಈಷತ್ ಅಪಿ**=ಸ್ವಲ್ಪವೂ **ನ ಏವ ಅವೇಕ್ಷತೇ**= ಗಮನಿಸುವುದೇ ಇಲ್ಲ; **ಸಃ**=ಅವನು **ಸ್ವಾನಂದ-ಸಾಂದ್ರರಸಪಾನ-ಸುಮತ್ತ-ಚಿತ್ತಃ**= ಸ್ವಾತ್ಮಾನಂದದ ಸಾಂದ್ರರಸಪಾನದಿಂದ ಮತ್ತವಾದ ಚಿತ್ತವುಳ್ಳವನಾಗಿರುತ್ತಾನೆ.

**೫೫೧.** ಬ್ರಹ್ಮಜ್ಞಾನಿಯು ಇಂದ್ರಿಯಗಳನ್ನು ವಿಷಯಗಳಲ್ಲಿ ನಿಯೋಜಿಸುವುದೂ ಇಲ್ಲ, ಅವುಗಳಿಂದ ಹಿಂತೆಗೆಯುವುದೂ ಇಲ್ಲ; ಸಾಕ್ಷಿರೂಪದಿಂದ ಅವಿಕಾರಿಯಾಗಿರುತ್ತಾನೆ. ಕರ್ಮಫಲವನ್ನು ಸ್ವಲ್ಪವಾದರೂ ಗಮನಿಸುವುದೇ ಇಲ್ಲ. ಅವನು ಸ್ವಾತ್ಮಾನಂದದ ಸಾಂದ್ರರಸಪಾನದಿಂದ ಮತ್ತನಾಗಿರುತ್ತಾನೆ.

**ಲಕ್ಷ್ಯಾಲಕ್ಷ್ಯಗತಿಂ ತ್ಯಕ್ತ್ವಾ ಯಸ್ತಿಷ್ಠೇತ್ಕೇವಲಾತ್ಮನಾ ।**
**ಶಿವ ಏವ ಸ್ವಯಂ ಸಾಕ್ಷಾದಯಂ ಬ್ರಹ್ಮವಿದುತ್ತಮಃ ॥ ೫೫೨ ॥**

**ಯಃ**=ಯಾವನು **ಲಕ್ಷ್ಯ-ಅಲಕ್ಷ್ಯ-ಗತಿಂ**=ಲಕ್ಷ್ಯ ಅಲಕ್ಷ್ಯ ಎಂಬ ಭಾವನೆಯನ್ನು **ತ್ಯಕ್ತ್ವಾ**=ಬಿಟ್ಟು **ಕೇವಲ-ಆತ್ಮನಾ**=ಕೇವಲ-ಆತ್ಮಸ್ವರೂಪದಿಂದ **ತಿಷ್ಠೇತ್**= ಇರುತ್ತಾನೆಯೊ **ಅಯಂ**=ಇವನು **ಸ್ವಯಂ**=ತಾನೇ **ಶಿವಃ ಏವ**=ಸಾಕ್ಷಾತ್ ಶಿವನೇ, **ಬ್ರಹ್ಮವಿತ್-ಉತ್ತಮಃ**=ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠನು.

**೫೫೨.** ಲಕ್ಷ್ಯ, ಅಲಕ್ಷ್ಯ[೧] ಎಂಬ ಭಾವನೆಗಳನ್ನು ಬಿಟ್ಟು ಕೇವಲಾತ್ಮ ರೂಪದಿಂದಲೇ ಇರುತ್ತಿರುವ ಇವನು ಸಾಕ್ಷಾತ್ ಶಿವನೂ ಬ್ರಹ್ಮಜ್ಞಾನಿ ಗಳಲ್ಲಿ ಶ್ರೇಷ್ಠನೂ ಆಗಿರುವನು.

[೧ ಇದು ಧ್ಯಾನಕ್ಕೆ ಯೋಗ್ಯವಾದುದು, ಯೋಗ್ಯವಲ್ಲ ಎಂಬ ಭಾವನೆಗಳು.]

**ಜೀವನ್ನೇವ ಸದಾ ಮುಕ್ತಃ ಕೃತಾರ್ಥೋ ಬ್ರಹ್ಮವಿತ್ತಮಃ ।**
**ಉಪಾಧಿನಾಶಾದ್ಬ್ರಹ್ಮೈವ ಸನ್ ಬ್ರಹ್ಮಾಪ್ಯೇತಿ ನಿರ್ದ್ವಯಮ್**
**॥ ೫೫೩ ॥**

**ಬ್ರಹ್ಮವಿತ್ತಮಃ** = ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠನಾದವನು **ಜೀವನ್ ಏವ** = ಬದುಕಿರುವಾಗಲೇ **ಸದಾ ಮುಕ್ತಃ** = ನಿತ್ಯಮುಕ್ತನೂ **ಕೃತಾರ್ಥಃ** = ಕೃತಾರ್ಥನೂ [ಆಗಿರುತ್ತಾನೆ]; **ಬ್ರಹ್ಮ ಏವ ಸನ್** = [ಮೊದಲೂ] ಬ್ರಹ್ಮವೇ ಆಗಿದ್ದು **ಉಪಾಧಿ-ನಾಶಾತ್** = ಉಪಾಧಿಯು ನಾಶದಿಂದ **ನಿರ್ದ್ವಯಂ** = ಅದ್ವಯವಾದ **ಬ್ರಹ್ಮ** = ಬ್ರಹ್ಮವನ್ನು **ಅಪ್ಯೇತಿ** = ಹೊಂದುತ್ತಾನೆ.

***೫೫೩.*** ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠನಾದವನು ಬದುಕಿರುವಾಗಲೇ ನಿತ್ಯ ಮುಕ್ತನೂ ಕೃತಾರ್ಥನೂ ಆಗಿರುತ್ತಾನೆ; ಮೊದಲೂ ಬ್ರಹ್ಮವೇ ಆಗಿದ್ದು, ಉಪಾಧಿಯು ನಾಶವಾಗಲು, ಅದ್ವಯವಾದ ಬ್ರಹ್ಮವನ್ನು ಹೊಂದುತ್ತಾನೆ.

**ಶೈಲೂಷೋ ವೇಷಸದ್ಭಾವಾಭಾವಯೋಶ್ಚ ಯಥಾ ಪುಮಾನ್ ।**
**ತಥೈವ ಬ್ರಹ್ಮವಿಚ್ಛ್ರೇಷ್ಠಃ ಸದಾ ಬ್ರಹ್ಮೈವ ನಾಪರಃ ॥ ೫೫೪ ॥**

**ಶೈಲೂಷಃ** = ನಟನು **ವೇಷಸದ್ಭಾವ-ಅಭಾವಯೋಃ ಚ** = ವೇಷವಿರುವಾಗಲೂ ಇಲ್ಲದಿರುವಾಗಲೂ **ಯಥಾ** = ಹೇಗೆ **ಪುಮಾನ್** = ಪುರುಷನಾಗಿರುವನೊ **ತಥಾ** = ಹಾಗೆಯೇ **ಬ್ರಹ್ಮವಿತ್-ಶ್ರೇಷ್ಠಃ** = ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠನಾದವನು **ಸದಾ** = ಯಾವಾಗಲೂ **ಬ್ರಹ್ಮ ಏವ** = ಬ್ರಹ್ಮವೇ ಆಗಿರುವನು, **ನ ಅಪರಃ** = ಬೇರೆಯಾಗಿರುವುದಿಲ್ಲ.

***೫೫೪.*** ನಟನು ವೇಷವನ್ನು ಧರಿಸಿರುವಾಗಲೂ ವೇಷವಿಲ್ಲದಿರುವಾಗಲೂ ಹೇಗೆ ಪುರುಷನೇ ಆಗಿರುವನೊ ಹಾಗೆಯೇ ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠನಾಗಿರುವವನು ಯಾವಾಗಲೂ ಬ್ರಹ್ಮವೇ ಆಗಿರುತ್ತಾನೆ, ಬೇರೆಯಾಗಿರುವುದಿಲ್ಲ.

**ಯತ್ರ ಕ್ವಾಪಿ ವಿಶೀರ್ಣಂ ಸತ್ಪರ್ಣಮಿವ ತರೋರ್ವಪುಃ ಪತತಾತ್ ।**
**ಬ್ರಹ್ಮೀಭೂತಸ್ಯ ಯತೇಃ ಪ್ರಾಗೇವ ಹಿ ತಚ್ಚಿದಗ್ನಿನಾ ದಗ್ಧಮ್**
**॥ ೫೫೫ ॥**

**ಬ್ರಹ್ಮೀಭೂತಸ್ಯ** = ಬ್ರಹ್ಮವೇ ಆಗಿರುವ **ಯತೇಃ** = ಯತಿಯ **ವಪುಃ** = ಶರೀರವು **ತರೋಃ** = ಮರದಿಂದ **ವಿಶೀರ್ಣಂ ಸತ್** = ಉದುರಿಹೋದ **ಪರ್ಣಮ್ ಇವ** = ಎಲೆಯ ಹಾಗೆ **ಯತ್ರ ಕ್ವ ಅಪಿ** = ಎಲ್ಲಿಯಾದರೂ **ಪತತಾತ್** = ಬಿದ್ದು ಹೋಗಲಿ; **ತತ್** = ಅದು **ಪ್ರಾಕ್ ಏವ** = ಮೊದಲೇ **ಚಿದಗ್ನಿನಾ** = ಜ್ಞಾನಾಗ್ನಿಯಿಂದ **ದಗ್ಧಂ ಹಿ** = ಸುಟ್ಟುಹೋಗಿರುವುದು.

**೫೫೫.** ಬ್ರಹ್ಮವೇ ಆದ ಯತಿಯ ಶರೀರವು ಮರದಿಂದ ಉದುರಿ ಹೋದ ಎಲೆಯಂತೆ ಎಲ್ಲಿಯಾದರೂ ಬೀಳಲಿ, (ಅದರಿಂದ ಅವನಿಗೆ ಏನೂ ಆಗುವುದಿಲ್ಲ). ಏಕೆಂದರೆ ಅದು ಮೊದಲೇ ಜ್ಞಾನಾಗ್ನಿಯಿಂದ ಸುಟ್ಟುಹೋಗಿರುವುದು.[೧]

[೧ ಆದುದರಿಂದ ಅವನು ತನ್ನ ಶವಸಂಸ್ಕಾರದ ವಿಷಯದಲ್ಲಿ ಯೋಚಿಸಬೇಕಾದ ಆವಶ್ಯಕತೆಯಿರುವುದಿಲ್ಲ.]

**ಸದಾತ್ಮನಿ ಬ್ರಹ್ಮಣಿ ತಿಷ್ಠತೋ ಮುನೇಃ**
**ಪೂರ್ಣಾದ್ವಯಾನಂದಮಯಾತ್ಮನಾ ಸದಾ ।**
**ನ ದೇಶಕಾಲಾದ್ಯುಚಿತ-ಪ್ರತೀಕ್ಷಾ**
**ತ್ವಙ್ಮಾಂಸ-ವಿಟ್ಪಿಂಡ-ವಿಸರ್ಜನಾಯ ॥ ೫೫೬ ॥**

**ಸದಾತ್ಮನಿ** = ಸತ್ಸ್ವರೂಪವಾದ **ಬ್ರಹ್ಮಣಿ** = ಬ್ರಹ್ಮದಲ್ಲಿ **ಸದಾ** = ಯಾವಾಗಲೂ **ಪೂರ್ಣ-ಅದ್ವಯ-ಆನಂದಮಯ-ಆತ್ಮನಾ** = ಪೂರ್ಣವಾದ ಅದ್ವಯಾನಂದ ಸ್ವರೂಪದಿಂದ **ತಿಷ್ಠತಃ** = ನಿಂತಿರುವ **ಮುನೇಃ** = ಮುನಿಗೆ **ತ್ವಕ್-ಮಾಂಸ-ವಿಟ್-ಪಿಂಡ-ವಿಸರ್ಜನಾಯ** = ಚರ್ಮಮಾಂಸಮಲಗಳ ಮುದ್ದೆಯಾಗಿರುವ ಶರೀರದ ವಿಸರ್ಜನೆಗೆ **ದೇಶ-ಕಾಲಾದಿ-ಉಚಿತ-ಪ್ರತೀಕ್ಷಾ ನ** = ಉಚಿತವಾದ ದೇಶಕಾಲಾದಿಗಳ ಅಪೇಕ್ಷೆಯು ಇರುವುದಿಲ್ಲ.

**೫೫೬.** ಸತ್ಸ್ವರೂಪವಾದ ಬ್ರಹ್ಮದಲ್ಲಿ ಪೂರ್ಣಾದ್ವಯಾನಂದರೂಪದಿಂದ ಯಾವಾಗಲೂ ನಿಂತಿರುವ ಮುನಿಗೆ ಚರ್ಮಮಾಂಸಮಲಗಳ ಮುದ್ದೆಯಾಗಿರುವ ಶರೀರವನ್ನು ತ್ಯಜಿಸುವುದಕ್ಕೆ ಉಚಿತವಾದ ದೇಶಕಾಲಾದಿಗಳ ಅಪೇಕ್ಷೆಯು ಇರುವುದಿಲ್ಲ.

[ಶರೀರವು ತನ್ನ ಕಾರ್ಯವನ್ನು ಮುಗಿಸಿರುವುದರಿಂದ ಅದನ್ನು ಅವನು ಯಾವಾಗಲಾದರೂ ಬಿಡಬಹುದು.]

**ದೇಹಸ್ಯ ಮೋಕ್ಷೋ ನೋ ಮೋಕ್ಷೋ ನ ದಂಡಸ್ಯ ಕಮಂಡಲೋಃ ।**
**ಅವಿದ್ಯಾ-ಹೃದಯಗ್ರಂಥಿ-ಮೋಕ್ಷೋ ಮೋಕ್ಷೋ ಯತಸ್ತತಃ**
**॥ ೫೫೭ ॥**

**ಯತಃ** = ಯಾವ ಕಾರಣದಿಂದ **ಅವಿದ್ಯಾ-ಹೃದಯಗ್ರಂಥಿ-ಮೋಕ್ಷಃ** = ಅವಿದ್ಯೆಯೆಂಬ ಹೃದಯಗ್ರಂಥಿಯ ಬಿಡುವಿಕೆಯು **ಮೋಕ್ಷಃ** = ಮೋಕ್ಷವೊ **ತತಃ** = ಆ ಕಾರಣದಿಂದ **ದೇಹಸ್ಯ** = ದೇಹದ **ಮೋಕ್ಷಃ** = ಬಿಡುವಿಕೆಯು **ನ ಉ ಮೋಕ್ಷಃ** =

ಮೋಕ್ಷವಲ್ಲ, **ದಂಡಸ್ಯ** = ದಂಡದ **ಕಮಂಡಲೋಃ** = ಕಮಂಡಲುವಿನ [ಬಿಡುವಿಕೆಯು] **ನ.**

**೫೫೭.** ಅವಿದ್ಯೆ ಎಂಬ ಹೃದಯಗ್ರಂಥಿಯು ಕಳಚಿಹೋಗುವುದೇ ಮೋಕ್ಷವೆನಿಸುವುದು; ಆದಕಾರಣ ದೇಹವನ್ನು ಬಿಡುವುದು ಮೋಕ್ಷವಲ್ಲ. ದಂಡವನ್ನಾಗಲಿ ಕಮಂಡಲುವನ್ನಾಗಲಿ^೧ ಬಿಡುವುದೂ ಮೋಕ್ಷವಲ್ಲ.

[೧ ಇವೆರಡೂ ಸಂನ್ಯಾಸಿಯ ಬಾಹ್ಯಚಿಹ್ನೆಗಳು. ಕೇವಲ ಬಾಹ್ಯತ್ಯಾಗದಿಂದ ಮೋಕ್ಷವು ಸಿದ್ಧಿಸುವುದಿಲ್ಲ. ಇವುಗಳು ಮನಸ್ಸಿನಲ್ಲಿಯೂ ಇರಕೂಡದು.]

**ಕುಲ್ಯಾಯಾಮಥ ನದ್ಯಾಂ ವಾ ಶಿವಕ್ಷೇತ್ರೇಽಪಿ ಚತ್ವರೇ ।**
**ಪರ್ಣಂ ಪತತಿ ಚೇತ್ತೇನ ತರೋಃ ಕಿಂ ನು ಶುಭಾಶುಭಮ್**
**॥ ೫೫೮ ॥**

**ಪರ್ಣಂ** = ಎಲೆಯು **ಕುಲ್ಯಾಯಾಂ** = ಕಾಲುವೆಯಲ್ಲಿ **ಅಥ ವಾ** - ಅಥವಾ **ನದ್ಯಾಂ** = ನದಿಯಲ್ಲಿ **ಶಿವಕ್ಷೇತ್ರೇ ಅಪಿ** = ಶಿವಕ್ಷೇತ್ರದಲ್ಲಿ **ಚತ್ವರೇ** = ಚೌಕದಲ್ಲಿ **ಪತತಿ ಚೇತ್** = ಬಿದ್ದರೆ **ತೇನ** = ಅದರಿಂದ **ತರೋಃ** = ಮರಕ್ಕೆ **ಶುಭಾಶುಭಂ** = ಶುಭಾಶುಭವು **ಕಿಂ ನು** = ಆಗುವುದೇನು?

**೫೫೮.** ಮರದ ಎಲೆಯು ಕಾಲುವೆಯಲ್ಲಾಗಲಿ ನದಿಯಲ್ಲಾಗಲಿ ಶಿವಕ್ಷೇತ್ರದಲ್ಲಾಗಲಿ ಬೀದಿಗಳು ಸೇರುವ ಚೌಕದಲ್ಲಾಗಲಿ ಬಿದ್ದರೆ ಅದರಿಂದ ಮರಕ್ಕೆ ಶುಭವಾಗಲಿ ಅಶುಭವಾಗಲಿ ಉಂಟಾದೀತೆ?

**ಪತ್ರಸ್ಯ ಪುಷ್ಪಸ್ಯ ಫಲಸ್ಯ ನಾಶವದ್**
**ದೇಹೇಂದ್ರಿಯ-ಪ್ರಾಣ-ಧಿಯಾಂ ವಿನಾಶಃ ।**
**ನೈವಾತ್ಮನಃ ಸ್ವಸ್ಯ ಸದಾತ್ಮಕಸ್ಯಾ-**
**ನಂದಾಕೃತೇರ್ವೃಕ್ಷವದಸ್ತಿ ಚೈಷಃ ॥ ೫೫೯ ॥**

**ಪತ್ರಸ್ಯ** = ಎಲೆಯು **ಪುಷ್ಪಸ್ಯ** = ಹೂವಿನ **ಫಲಸ್ಯ** = ಹಣ್ಣಿನ **ನಾಶವತ್** = ನಾಶದ ಹಾಗೆ **ದೇಹ-ಇಂದ್ರಿಯ-ಪ್ರಾಣ-ಧಿಯಾಂ** = ದೇಹೇಂದ್ರಿಯಪ್ರಾಣಬುದ್ಧಿಗಳ **ವಿನಾಶಃ** = ನಾಶವು **ಸದಾತ್ಮಕಸ್ಯ** = ಸತ್ಸ್ವರೂಪನಾಗಿರುವ **ಆನಂದಾಕೃತೇಃ** = ಆನಂದಸ್ವರೂಪನಾದ **ಸ್ವಸ್ಯ ಆತ್ಮನಃ** = ಆತ್ಮನಾದ ತನಗೆ **ನ ಏವ** = ಇಲ್ಲವು; **ಏಷಃ** = ಇವನು **ವೃಕ್ಷವತ್** = ಮರದ ಹಾಗೆ **ಅಸ್ತಿ** = ಇರುತ್ತಾನೆ.

**೫೫೯.** ಮರದ ಎಲೆ ಹೂವು ಅಥವಾ ಹಣ್ಣು ನಾಶವಾಗುವ ಹಾಗೆ ದೇಹೇಂದ್ರಿಯ-ಪ್ರಾಣ-ಬುದ್ಧಿಗಳೂ ನಾಶವಾಗುವುವು. ಇದರಿಂದ ಸತ್ಸ್ವ-

ರೂಪನೂ ಆನಂದಸ್ವರೂಪನೂ ಆತ್ಮನೂ ಆದ ತನಗೆ ಏನೂ ಆಗುವುದಿಲ್ಲ. ಇವನು ಮರದ ಹಾಗೆ ಅವಿನಾಶಿಯಾಗಿರುತ್ತಾನೆ.

**ಪ್ರಜ್ಞಾನಘನ ಇತ್ಯಾತ್ಮಲಕ್ಷಣಂ ಸತ್ಯಸೂಚಕಮ್ ।**
**ಅನೂದ್ಯೌಪಾಧಿಕಸ್ಯೈವ ಕಥಯಂತಿ ವಿನಾಶನಮ್ ॥ ೫೬೦ ॥**

**ಪ್ರಜ್ಞಾನಘನಃ** = ಪ್ರಜ್ಞಾನಘನನು **ಇತಿ** – ಎಂದು **ಸತ್ಯಸೂಚಕಂ** = ಸತ್ಯವನ್ನು ಸೂಚಿಸುವ **ಆತ್ಮಲಕ್ಷಣಂ** = ಆತ್ಮಸ್ವರೂಪವನ್ನು **ಅನೂದ್ಯ** = ಅನುವಾದ ಮಾಡಿಕೊಂಡು **ಔಪಾಧಿಕಸ್ಯ ಏವ** = ಉಪಾಧಿಸಂಬಂಧವಾದ ರೂಪಕ್ಕೇ **ವಿನಾಶನಂ** = ನಾಶವನ್ನು **ಕಥಯಂತಿ** = [ಶ್ರುತಿಗಳು] ತಿಳಿಸುತ್ತವೆ.

**೫೬೦.** 'ಪ್ರಜ್ಞಾನಘನನು'[೧] ಎಂಬ ಸತ್ಯವನ್ನು ಸೂಚಿಸುವ ಆತ್ಮಸ್ವರೂಪವನ್ನು ಅನುವಾದಮಾಡಿಕೊಂಡು ಉಪಾಧಿಸಂಬಂಧವಾದ ರೂಪವು[೨] ನಾಶವಾಗುತ್ತದೆಂದು (ಶ್ರುತಿಗಳು) ಹೇಳುತ್ತವೆ.

[[೧] 'ಹೇಗೆ ಉಪ್ಪಿನ ಗಟ್ಟಿಯು ಒಳಗಿಲ್ಲದೆ ಹೊರಗಿಲ್ಲದೆ ಪೂರ್ಣವಾಗಿ ಸಮರಸವಾಗಿರುವುದೊ ಹಾಗೆಯೇ, ಎಲೆ ಮೈತ್ರೇಯಿ, ಈ ಆತ್ಮನು ಒಳಗಿಲ್ಲದೆ ಹೊರಗಿಲ್ಲದೆ ಪೂರ್ಣವಾದ ಪ್ರಜ್ಞಾನಘನನಾಗಿರುವನು. (ಆತ್ಮನ ಭಿನ್ನತೆಯು) ಈ ಭೂತಗಳಿಂದ ಉಂಟಾಗಿ ಭೂತವರ್ಗದ ಲಯದೊಂದಿಗೆ ತಾನೂ ಲಯವಾಗುತ್ತದೆ. ದೇಹೇಂದ್ರಿಯಗಳಿಂದ ಮುಕ್ತಿಹೊಂದಿದ ಮೇಲೆ ವಿಶೇಷಜ್ಞಾನವಿರುವುದಿಲ್ಲ' (ಬೃಹದಾರಣ್ಯಕ ಉ. ೪. ೫. ೧೩); ಯಾಜ್ಞವಲ್ಕ್ಯನ ಈ ವಾಕ್ಯವು ಮೈತ್ರೇಯಿಗೆ ಭ್ರಾಂತಿಯನ್ನುಂಟುಮಾಡಿದಂತೆ ಕಂಡುಬರುತ್ತದೆ. ಆಗ ಯಾಜ್ಞವಲ್ಕ್ಯನು ಉಪಾಧಿಗಳ ನಾಶವುಂಟಾಗುತ್ತದೆಯೇ ಹೊರತು ಅವಿಕ್ರಿಯನೂ ಅವಿನಾಶಿಯೂ ಆದ ಆತ್ಮನಿಗೆ ಯಾವ ಹಾನಿಯೂ ಉಂಟಾಗುವುದಿಲ್ಲವೆಂದು ಹೇಳುತ್ತಾನೆ.

[೨] ಸೂರ್ಯನು ಪ್ರತಿಬಿಂಬಿಸಿರುವ ನೀರು, ಜಪಾಕುಸುಮದ ರೂಪವನ್ನು ಪ್ರತಿಬಿಂಬಿಸುವ ಸ್ಫಟಿಕ—ಇವೇ ಮೊದಲಾದ ಉಪಾಧಿಗಳು ನಾಶವಾದರೆ ಸೂರ್ಯನ ಸ್ವರೂಪವೂ ಸ್ಫಟಿಕದ ಸ್ವರೂಪವೂ ಹಾಗೆಯೇ ಉಳಿಯುತ್ತವೆ.]

**ಅವಿನಾಶೀ ವಾ ಅರೇಽಯಮಾತ್ಮೇತಿ ಶ್ರುತಿರಾತ್ಮನಃ ।**
**ಪ್ರಬ್ರವೀತ್ಯವಿನಾಶಿತ್ವಂ ವಿನಶ್ಯತ್ಸು ವಿಕಾರಿಷು ॥ ೫೬೧ ॥**

**ಅರೇ** = ಎಲೆ, **ಅಯಂ** = ಈ **ಆತ್ಮಾ** = ಆತ್ಮನು **ಅವಿನಾಶೀ ವೈ** – ಅವಿನಾಶಿಯೇ **ಇತಿ** = ಎಂದು **ವಿಕಾರಿಷು** = ವಿಕಾರವುಳ್ಳ [ಪದಾರ್ಥಗಳು] **ವಿನಶ್ಯತ್ಸು** = ನಾಶವಾಗುತ್ತಿರಲಾಗಿ **ಆತ್ಮನಃ** = ಆತ್ಮನಿಗೆ **ಅವಿನಾಶಿತ್ವಂ** = ಅವಿನಾಶಿತ್ವವನ್ನು **ಶ್ರುತಿಃ** = ಶ್ರುತಿಯು **ಪ್ರಬ್ರವೀತಿ** = ಹೇಳುತ್ತದೆ.

**೫೬೧.** ವಿಕಾರವುಳ್ಳ ವಸ್ತುಗಳು ನಾಶವಾಗುತ್ತಿದ್ದರೂ ಆತ್ಮನು ನಾಶವಾಗುವುದಿಲ್ಲವೆಂದು ಶ್ರುತಿಯು ಹೇಳುತ್ತದೆ: 'ಎಲೆ ಮೈತ್ರೇಯಿ, ಈ ಆತ್ಮನು ಅವಿನಾಶಿಯೇ.'[೧]

[[೧] ಬೃಹದಾರಣ್ಯಕ ಉ. ೪. ೫. ೧೪]

**ಪಾಷಾಣ-ವೃಕ್ಷ-ತೃಣ-ಧಾನ್ಯ-ಕಡಂಕರಾದ್ಯಾ**
**ದಗ್ಧಾ ಭವಂತಿ ಹಿ ಮೃದೇವ ಯಥಾ ತಥೈವ ।**
**ದೇಹೇಂದ್ರಿಯಾಸು-ಮನಆದಿ ಸಮಸ್ತ-ದೃಶ್ಯಂ**
**ಜ್ಞಾನಾಗ್ನಿದಗ್ಧಮುಪಯಾತಿ ಪರಾತ್ಮಭಾವಮ್ ॥೫೬೨॥**

**ಪಾಷಾಣ-ವೃಕ್ಷ-ತೃಣ-ಧಾನ್ಯ-ಕಡಂಕರ-ಆದ್ಯಾಃ** = ಕಲ್ಲು ಮರ ಹುಲ್ಲು ಧಾನ್ಯ ಹೊಟ್ಟು ಮೊದಲಾದುವು **ದಗ್ಧಾಃ** = ದಗ್ಧವಾಗಿ **ಯಥಾ** = ಹೇಗೆ **ಮೃತ್ ಏವ** = ಮಣ್ಣೇ **ಭವಂತಿ ಹಿ** = ಆಗುತ್ತವೆಯೊ **ತಥಾ ಏವ** = ಹಾಗೆಯೇ **ದೇಹ-ಇಂದ್ರಿಯ-ಅಸು-ಮನಃ-ಆದಿ** = ದೇಹ ಇಂದ್ರಿಯ ಪ್ರಾಣ ಮನಸ್ಸು ಮೊದಲಾದ **ಸಮಸ್ತದೃಶ್ಯಂ** = ಸಮಸ್ತದೃಶ್ಯಪದಾರ್ಥವೂ **ಜ್ಞಾನಾಗ್ನಿ-ದಗ್ಧಂ** = ಜ್ಞಾನಾಗ್ನಿಯಿಂದ ದಗ್ಧವಾದ **ಪರಾತ್ಮಭಾವಂ** = ಪರಮಾತ್ಮಭಾವವನ್ನು **ಉಪಯಾತಿ** = ಹೊಂದುತ್ತದೆ.

**೫೬೨.** ಕಲ್ಲು ಮರ ಹುಲ್ಲು ಧಾನ್ಯ ಹೊಟ್ಟು—ಮೊದಲಾದುವು ದಗ್ಧವಾದರೆ ಮಣ್ಣೇ ಆಗುವಂತೆ, ದೇಹೇಂದ್ರಿಯ ಪ್ರಾಣ ಮನಸ್ಸು ಮೊದಲಾದ ದೃಶ್ಯವಸ್ತುವೆಲ್ಲವೂ ಜ್ಞಾನಾಗ್ನಿಯಿಂದ ದಗ್ಧವಾಗಿ ಪರಮಾತ್ಮಸ್ವರೂಪವನ್ನೇ ಹೊಂದುತ್ತವೆ.

**ವಿಲಕ್ಷಣಂ ಯಥಾ ಧ್ವಾಂತಂ ಲೀಯತೇ ಭಾನುತೇಜಸಿ ।**
**ತಥೈವ ಸಕಲಂ ದೃಶ್ಯಂ ಬ್ರಹ್ಮಣಿ ಪ್ರವಿಲೀಯತೇ ॥ ೫೬೩ ॥**

**ಭಾನುತೇಜಸಿ** = ಸೂರ್ಯನ ಬೆಳಕಿನಲ್ಲಿ **ವಿಲಕ್ಷಣಂ** = [ಅದಕ್ಕಿಂತ] ಬೇರೆಯಾಗಿರುವ **ಧ್ವಾಂತಂ** = ಕತ್ತಲೆಯು **ಯಥಾ** = ಹೇಗೆ **ಲೀಯತೇ** = ಲಯವಾಗುವುದೊ **ತಥಾ ಏವ** = ಹಾಗೆಯೇ **ಸಕಲಂ ದೃಶ್ಯಂ** = ದೃಶ್ಯವಸ್ತುವೆಲ್ಲವೂ **ಬ್ರಹ್ಮಣಿ** = ಬ್ರಹ್ಮದಲ್ಲಿ **ಪ್ರವಿಲೀಯತೇ** = ಲಯವಾಗುತ್ತದೆ.

**೫೬೩.** ಸೂರ್ಯನ ಬೆಳಕಿನಲ್ಲಿ (ಅದಕ್ಕಿಂತ) ಭಿನ್ನವಾದ ಕತ್ತಲೆಯು ಹೇಗೆ ಲಯವಾಗಿ ಹೋಗುವುದೊ ಹಾಗೆಯೇ ದೃಶ್ಯವಸ್ತುವೆಲ್ಲವೂ ಬ್ರಹ್ಮದಲ್ಲಿ ಲಯವಾಗುತ್ತದೆ.

**ಘಟೇ ನಷ್ಟೇ ಯಥಾ ವ್ಯೋಮ ವ್ಯೋಮೈವ ಭವತಿ ಸ್ಫುಟಮ್ ।**
**ತಥೈವೋಪಾಧಿವಿಲಯೇ ಬ್ರಹ್ಮೈವ ಬ್ರಹ್ಮವಿತ್ಸ್ವಯಮ್ ॥ ೫೬೪ ॥**

**ಘಟೇ ನಷ್ಟೇ** [ಸತಿ] = ಗಡಿಗೆಯು ನಾಶವಾದಾಗ **ವ್ಯೋಮ**=[ಅದರಲ್ಲಿರುವ] ಆಕಾಶವು **ಯಥಾ** = ಹೇಗೆ **ವ್ಯೋಮ ಏವ ಸ್ಫುಟಂ ಭವತಿ**=ಸ್ಫುಟವಾಗಿ ಆಕಾಶವೇ ಆಗುತ್ತದೆಯೊ **ತಥಾ ಏವ** = ಹಾಗೆಯೇ **ಉಪಾಧಿ-ವಿಲಯೇ** = ಉಪಾಧಿಯು ನಾಶವಾದಾಗ **ಬ್ರಹ್ಮವಿತ್** = ಬ್ರಹ್ಮಜ್ಞಾನಿಯು **ಸ್ವಯಂ** = ತಾನೇ **ಬ್ರಹ್ಮ ಏವ ಭವತಿ** = ಬ್ರಹ್ಮವಾಗುತ್ತಾನೆ.

**೫೬೪.** ಗಡಿಗೆಯು ನಾಶವಾದಾಗ ಅದರಲ್ಲಿರುವ ಆಕಾಶವು ಹೇಗೆ ಸ್ಫುಟವಾಗಿ ಮಹಾಕಾಶವೇ ಆಗುತ್ತದೆಯೊ ಹಾಗೆಯೇ ಉಪಾಧಿಯು ನಾಶವಾದಾಗ ಬ್ರಹ್ಮಜ್ಞಾನಿಯು ತಾನೇ ಬ್ರಹ್ಮವಾಗುತ್ತಾನೆ.

**ಕ್ಷೀರಂ ಕ್ಷೀರೇ ಯಥಾ ಕ್ಷಿಪ್ತಂ ತೈಲಂ ತೈಲೇ ಜಲಂ ಜಲೇ ।**
**ಸಂಯುಕ್ತಮೇಕತಾಂ ಯಾತಿ ತಥಾಽಽತ್ಮನ್ಯಾತ್ಮವಿನ್ಮುನಿಃ ॥ ೫೬೫ ॥**

**ಕ್ಷೀರೇ** = ಹಾಲಿನಲ್ಲಿ **ಕ್ಷಿಪ್ತಂ** = ಸುರಿದ **ಕ್ಷೀರಂ** = ಹಾಲು **ಯಥಾ** = ಹೇಗೊ, **ತೈಲೇ** = ಎಣ್ಣೆಯಲ್ಲಿ [ಸುರಿದ] **ತೈಲಂ** = ಎಣ್ಣೆಯು [ಹೇಗೊ], **ಜಲೇ** = ನೀರಿನಲ್ಲಿ **ಸಂಯುಕ್ತಂ** = ಸೇರಿಸಿದ **ಜಲಂ** = ನೀರು [ಹೇಗೊ], **ತಥಾ ಏವ** = ಹಾಗೆಯೇ **ಆತ್ಮವಿತ್** = ಆತ್ಮಜ್ಞಾನಿಯಾದ **ಮುನಿಃ** = ಮುನಿಯು **ಆತ್ಮನಿ** = ಬ್ರಹ್ಮದಲ್ಲಿ **ಏಕತಾಂ ಯಾತಿ** = ಐಕ್ಯವನ್ನು ಹೊಂದುತ್ತಾನೆ.

**೫೬೫.** ಹಾಲಿನಲ್ಲಿ ಸುರಿದ ಹಾಲು, ಎಣ್ಣೆಯಲ್ಲಿ ಸುರಿದ ಎಣ್ಣೆ, ನೀರಿನಲ್ಲಿ ಸೇರಿಸಿದ ನೀರು—ಇವು ಹೇಗೆ ಒಂದಾಗುತ್ತವೆಯೊ ಹಾಗೆಯೇ ಆತ್ಮಜ್ಞಾನಿಯಾದ ಮುನಿಯು ಬ್ರಹ್ಮದಲ್ಲಿ ಐಕ್ಯನಾಗುತ್ತಾನೆ.

[ಕಠ ಉ. ೪. ೧೫ ಮತ್ತು ಮುಂಡಕ ಉ. ३. ೨. ೮ ಇವುಗಳೊಂದಿಗೆ ಹೋಲಿಸಿ.]

**ಏವಂ ವಿದೇಹಕೈವಲ್ಯಂ ಸನ್ಮಾತ್ರತ್ವಮಖಂಡಿತಮ್ ।**
**ಬ್ರಹ್ಮಭಾವಂ ಪ್ರಪದ್ಯೈಷ ಯತಿರ್ನಾವರ್ತತೇ ಪುನಃ ॥ ೫೬೬ ॥**

**ಏವಂ** = ಹೀಗೆ **ವಿದೇಹಕೈವಲ್ಯಂ** = ವಿದೇಹಮುಕ್ತಿಯನ್ನು [ಹೊಂದಿ] **ಅಖಂಡಿತಂ** = ಅಖಂಡವಾದ **ಸನ್ಮಾತ್ರತ್ವಂ** = ಸತ್ಸ್ವರೂಪತ್ವವೆಂಬ **ಬ್ರಹ್ಮಭಾವಂ** = ಬ್ರಹ್ಮಭಾವವನ್ನು **ಪ್ರಪದ್ಯ** = ಪಡೆದು **ಏಷಃ ಯತಿಃ** = ಈ ಯತಿಯು **ಪುನಃ** = ಮತ್ತೆ **ನ ಆವರ್ತತೇ** = ಹಿಂತಿರುಗುವುದಿಲ್ಲ.

೫೬೬. ಹೀಗೆ ವಿದೇಹಮುಕ್ತಿಯನ್ನು (ಹೊಂದಿ), ಅಖಂಡ-ಸತ್ಸ್ವರೂಪತ್ವವೆಂಬ ಬ್ರಹ್ಮಭಾವವನ್ನು ಪಡೆದು ಈ ಯತಿಯು ಪುನಃ (ಸಂಸಾರಕ್ಕೆ) ಹಿಂತಿರುಗುವುದಿಲ್ಲ.

**ಸದಾತ್ಮೈಕತ್ವ-ವಿಜ್ಞಾನ-ದಗ್ಧಾವಿದ್ಯಾದಿ-ವರ್ಷ್ಮಣಃ ।**
**ಅಮುಷ್ಯ ಬ್ರಹ್ಮಭೂತತ್ವಾದ್ಬ್ರಹ್ಮಣಃ ಕುತ ಉದ್ಭವಃ ॥ ೫೬೭ ॥**

**ಸದಾತ್ಮ-ಏಕತ್ವ-ವಿಜ್ಞಾನ-ದಗ್ಧ-ಅವಿದ್ಯಾದಿ-ವರ್ಷ್ಮಣಃ** = ಸತ್ಸ್ವರೂಪನಾದ ಪರಮಾತ್ಮನ ಏಕತ್ವ-ಜ್ಞಾನದಿಂದ ಸುಡಲ್ಪಟ್ಟ ಅವಿದ್ಯಾದಿ-ಶರೀರವುಳ್ಳ **ಅಮುಷ್ಯ**= ಇವನಿಗೆ **ಬ್ರಹ್ಮಭೂತತ್ವಾತ್** = ಬ್ರಹ್ಮಭೂತನಾಗಿರುವುದರಿಂದ **ಬ್ರಹ್ಮಣಃ** = ಬ್ರಹ್ಮಕ್ಕೆ **ಉದ್ಭವಃ** = ಜನ್ಮವು **ಕುತಃ** = ಎಲ್ಲಿಯದು?

೫೬೭. ಸತ್ಸ್ವರೂಪವಾದ ಪರಮಾತ್ಮನೂ ನಾನೂ ಒಂದೇ ಎಂಬ ಜ್ಞಾನದಿಂದ ಅವಿದ್ಯಾದಿ-ಶರೀರಗಳನ್ನು[೧] ಸುಟ್ಟುಕೊಂಡು ಇವನು ಬ್ರಹ್ಮವೇ ಆಗುತ್ತಾನೆ. ಬ್ರಹ್ಮಕ್ಕೆ ಪುನರ್ಜನ್ಮವು ಎಲ್ಲಿಯದು?

[[೧] ಕಾರಣಶರೀರ ಸೂಕ್ಷ್ಮಶರೀರ ಮತ್ತು ಸ್ಥೂಲಶರೀರ.]

**ಮಾಯಾಕ್ಲೃಪ್ತೌ ಬಂಧಮೋಕ್ಷೌ ನ ಸ್ತಃ ಸ್ವಾತ್ಮನಿ ವಸ್ತುತಃ ।**
**ಯಥಾ ರಜ್ಜೌ ನಿಷ್ಕ್ರಿಯಾಯಾಂ ಸರ್ಪಾಭಾಸ-ವಿನಿರ್ಗಮೌ**
**॥ ೫೬೮ ॥**

**ನಿಷ್ಕ್ರಿಯಾಯಾಂ** = ನಿಷ್ಕ್ರಿಯವಾಗಿರುವ **ರಜ್ಜೌ** = ಹಗ್ಗದಲ್ಲಿ **ಸರ್ಪ-ಆಭಾಸ-ವಿನಿರ್ಗಮೌ** = ಹಾವು ತೋರಿಕೊಳ್ಳುವುದು ಮತ್ತು ಹೋಗುವುದು—ಇವು **ಯಥಾ** = ಹೇಗೊ [ಹಾಗೆಯೇ] **ಮಾಯಾಕ್ಲೃಪ್ತೌ** = ಮಾಯಾಕಲ್ಪಿತವಾದ **ಬಂಧ-ಮೋಕ್ಷೌ**-ಬಂಧಮೋಕ್ಷಗಳು **ಸ್ವಾತ್ಮನಿ**-ಆತ್ಮನಲ್ಲಿ **ವಸ್ತುತಃ** = ನಿಜವಾಗಿ **ನ ಸ್ತಃ**= ಇಲ್ಲವು.

೫೬೮. ನಿಷ್ಕ್ರಿಯವಾದ ಹಗ್ಗದಲ್ಲಿ ಹಾವು ತೋರಿಕೊಳ್ಳುವುದು ಮತ್ತು ಹೋಗುವುದು—ಇವು ಹೇಗೆ (ಅಸತ್ಯವೊ ಹಾಗೆಯೇ) ಬಂಧಮೋಕ್ಷಗಳು ಮಾಯಾಕಲ್ಪಿತವಾಗಿರುವುದರಿಂದ ಆತ್ಮನಲ್ಲಿ ನಿಜವಾಗಿ ಇರುವುದಿಲ್ಲ.

**ಆವೃತೇಃ ಸದಸತ್ತ್ವಾಭ್ಯಾಂ ವಕ್ತವ್ಯೇ ಬಂಧಮೋಕ್ಷಣೇ ।**
**ನಾವೃತಿರ್ಬ್ರಹ್ಮಣಃ ಕಾಚಿದನ್ಯಾಭಾವಾದನಾವೃತಮ್ ।**
**ಯದ್ಯಸ್ತ್ಯದ್ವೈತಹಾನಿಃ ಸ್ಯಾದ್ದ್ವೈತಂ ನೋ ಸಹತೇ ಶ್ರುತಿಃ ॥೫೬೯॥**

**ಆವೃತೇಃ** = ಆವರಣದ **ಸತ್-ಅಸತ್ತ್ವಾಭ್ಯಾಂ** = ಇರುವಿಕೆ ಮತ್ತು ಇಲ್ಲದಿರುವಿಕೆ ಎಂಬಿವುಗಳ ದೆಸೆಯಿಂದ **ಬಂಧಮೋಕ್ಷಣೇ** = ಬಂಧಮೋಕ್ಷಗಳು **ವಕ್ತವ್ಯೇ** = ಹೇಳಲ್ಪಡತಕ್ಕವು; **ಬ್ರಹ್ಮಣಃ** = ಬ್ರಹ್ಮಕ್ಕೆ **ಕಾಚಿತ್** = ಯಾವ **ಆವೃತಿಃ** = ಆವರಣವೂ **ನ** = ಇಲ್ಲವು; **ಅನ್ಯ-ಅಭಾವಾತ್** = ಬೇರೊಂದು ವಸ್ತುವು ಇಲ್ಲದಿರುವುದರಿಂದ **ಅನಾವೃತಂ** = [ಅದಕ್ಕೆ] ಆವರಣವಿಲ್ಲ; **ಯದಿ ಅಸ್ತಿ** = [ಆವರಣವು] ಇದ್ದರೆ **ಅದ್ವೈತ-ಹಾನಿಃ ಸ್ಯಾತ್** = ಅದ್ವೈತಹಾನಿಯುಂಟಾಗುತ್ತದೆ; **ಶ್ರುತಿಃ** = ಶ್ರುತಿಯು **ದ್ವೈತಂ** = ದ್ವೈತವನ್ನು **ನ ಉ ಸಹತೇ** = ಸಹಿಸುವುದಿಲ್ಲ.

**೫೬೯.** ಮಾಯೆಯ ಆವರಣವಿದ್ದರೆ ಅಥವಾ ಇಲ್ಲದಿದ್ದರೆ ಬಂಧಮೋಕ್ಷಗಳನ್ನು ಹೇಳಬಹುದು. ಆದರೆ ಬ್ರಹ್ಮಕ್ಕೆ ಯಾವ ಆವರಣವೂ ಇರುವುದಿಲ್ಲ; ಏಕೆಂದರೆ ಎರಡನೆಯ ವಸ್ತುವೇ ಇಲ್ಲದಿರುವುದರಿಂದ ಅದಕ್ಕೆ ಯಾವ ಆವರಣವೂ ಇಲ್ಲ. ಆವರಣವಿದ್ದರೆ ಅದ್ವೈತಕ್ಕೆ ಹಾನಿಯುಂಟಾಗುತ್ತದೆ, ಆದರೆ ಶ್ರುತಿಯು ದ್ವೈತವನ್ನು ಸಹಿಸುವುದಿಲ್ಲ.[೧]

[೧ 'ಯಾವನು ಇಲ್ಲಿ ಭೇದವಿರುವಂತೆ ನೋಡುವನೊ ಅವನು ಮೃತ್ಯುವಿನಿಂದ ಮೃತ್ಯುವನ್ನು ಹೊಂದುತ್ತಾನೆ' **ಮೃತ್ಯೋಃ ಸ ಮೃತ್ಯುಂ ಗಚ್ಛತಿ ಯ ಇಹ ನಾನೇವ ಪಶ್ಯತಿ** (ಕಠ ಉ. ೨. ೪. ೧೧).]

**ಬಂಧಂ ಚ ಮೋಕ್ಷಂ ಚ ಮೃಷೈವ ಮೂಢಾ**
**ಬುದ್ಧೇರ್ಗುಣಂ ವಸ್ತುನಿ ಕಲ್ಪಯಂತಿ ।**
**ದೃಗಾವೃತಿಂ ಮೇಘಕೃತಾಂ ಯಥಾ ರವೌ**
**ಯತೋಽದ್ವಯಾಽಸಂಗ-ಚಿದೇತದಕ್ಷರಮ್ ॥ ೫೭೦ ॥**

**ಮೂಢಾಃ** = ಮೂಢರು **ಬುದ್ಧೇಃ** = ಬುದ್ಧಿಯ **ಗುಣಂ** = ಗುಣವಾಗಿರುವ **ಬಂಧಂ ಚ** = ಬಂಧವನ್ನೂ **ಮೋಕ್ಷಂ ಚ** = ಮೋಕ್ಷವನ್ನೂ **ವಸ್ತುನಿ** = ವಸ್ತುವಿನಲ್ಲಿ **ಮೃಷಾ ಏವ** = ಸುಳ್ಳಾಗಿಯೇ **ಕಲ್ಪಯಂತಿ** = ಕಲ್ಪಿಸುತ್ತಾರೆ, **ಮೇಘಕೃತಾಂ** = ಮೇಘದಿಂದಾದ **ದೃಕ್-ಆವೃತಿಂ** = ದೃಷ್ಟಿಯ ಮರೆಯನ್ನು **ರವೌ** = ಸೂರ್ಯನಲ್ಲಿ **ಯಥಾ** = ಹೇಗೊ [ಹಾಗೆ]; **ಯತಃ** = ಏಕೆಂದರೆ **ಏತತ್** = ಇದು **ಅದ್ವಯ-ಅಸಂಗ-ಚಿತ್** = ಅದ್ವಯವೂ ಅಸಂಗವೂ ಜ್ಞಾನಸ್ವರೂಪವೂ ಆದ **ಅಕ್ಷರಂ** = ಅಕ್ಷರವೇ.

**೫೭೦.** ಮೇಘದಿಂದಾಗಿರುವ ದೃಷ್ಟಿಯ ಮರೆಯನ್ನು ಸೂರ್ಯನಲ್ಲಿ ಕಲ್ಪಿಸುವಂತೆ ಮೂಢರು ಬುದ್ಧಿಯ ಗುಣವಾದ ಬಂಧವನ್ನೂ ಮೋಕ್ಷವನ್ನೂ ನಿತ್ಯವಸ್ತುವಿನಲ್ಲಿ ಸುಳ್ಳಾಗಿಯೇ ಆರೋಪಿಸುತ್ತಾರೆ; ಏಕೆಂದರೆ ಈ ನಿತ್ಯವಸ್ತುವು ಅದ್ವಯವೂ ಅಸಂಗವೂ ಜ್ಞಾನಸ್ವರೂಪವೂ ಆದ ಅಕ್ಷರವೇ.

**ಅಸ್ತೀತಿ ಪ್ರತ್ಯಯೋ ಯಶ್ಚ ಯಶ್ಚ ನಾಸ್ತೀತಿ ವಸ್ತುನಿ ।**
**ಬುದ್ಧೇರೇವ ಗುಣಾವೇತೌ ನ ತು ನಿತ್ಯಸ್ಯ ವಸ್ತುನಃ ॥ ೫೭೧ ॥**

**ವಸ್ತುನಿ** = ನಿತ್ಯವಸ್ತುವಿನಲ್ಲಿ **ಅಸ್ತಿ ಇತಿ** = [ಬಂಧವು] ಇದೆ ಎಂಬ **ಯಃ ಚ ಪ್ರತ್ಯಯಃ** = ಯಾವ ಜ್ಞಾನವೂ **ನ ಅಸ್ತಿ ಇತಿ** = [ಬಂಧವು] ಇಲ್ಲ ಎಂಬ **ಯಃ ಚ** = ಯಾವ [ಪ್ರತ್ಯಯವೊ] **ಏತೌ** = ಈ ಎರಡೂ **ಬುದ್ಧೇಃ** = ಬುದ್ಧಿಯ **ಗುಣೌ ಏವ** = ಗುಣಗಳೇ, **ನಿತ್ಯಸ್ಯ ವಸ್ತುನಃ** = ನಿತ್ಯವಸ್ತುವಿಗೆ **ನ ತು** = ಸೇರಿಲ್ಲ.

**೫೭೧.** ನಿತ್ಯವಸ್ತುವಿನ ವಿಷಯದಲ್ಲಿ ಬಂಧವಿದೆ ಎಂಬ ಜ್ಞಾನ, ಅದಿಲ್ಲವೆಂಬ ಜ್ಞಾನ— ಇವೆರಡೂ ಬುದ್ಧಿಯ ಗುಣಗಳೇ ಹೊರತು ನಿತ್ಯವಸ್ತುವಿಗೆ ಸೇರಿದ್ದಲ್ಲ.

**ಅತಸ್ತೌ ಮಾಯಯಾ ಕ್ಲೃಪ್ತೌ ಬಂಧಮೋಕ್ಷೌ ನ ಚಾತ್ಮನಿ ।**
**ನಿಷ್ಕಲೇ ನಿಷ್ಕ್ರಿಯೇ ಶಾಂತೇ ನಿರವದ್ಯೇ ನಿರಂಜನೇ ।**
**ಅದ್ವಿತೀಯೇ ಪರೇ ತತ್ತ್ವೇ ವ್ಯೋಮವತ್ಕಲ್ಪನಾ ಕುತಃ ॥ ೫೭೨ ॥**

**ಅತಃ** = ಆದುದರಿಂದ **ತೌ ಬಂಧಮೋಕ್ಷೌ** = ಆ ಬಂಧಮೋಕ್ಷಗಳು **ಮಾಯಯಾ** = ಮಾಯೆಯಿಂದ **ಕ್ಲೃಪ್ತೌ** = ಕಲ್ಪಿತವಾದುವು, **ನ ಚ ಆತ್ಮನಿ** = ಆತ್ಮನಲ್ಲಿಲ್ಲ; **ವ್ಯೋಮವತ್** = ಆಕಾಶದಂತಿರುವ **ನಿಷ್ಕಲೇ** = ನಿಷ್ಕಲವಾದ **ನಿಷ್ಕ್ರಿಯೇ** = ನಿಷ್ಕ್ರಿಯವಾದ **ಶಾಂತೇ** = ಶಾಂತವಾದ **ನಿರವದ್ಯೇ** = ನಿರ್ಮಲವಾದ **ನಿರಂಜನೇ** = ನಿರಂಜನವಾದ **ಅದ್ವಿತೀಯೇ** = ಅದ್ವಿತೀಯವಾದ **ಪರೇ ತತ್ತ್ವೇ** = ಪರತತ್ತ್ವದಲ್ಲಿ **ಕಲ್ಪನಾ** = ಕಲ್ಪನೆಯು **ಕುತಃ** = ಎಲ್ಲಿಯದು?

**೫೭೨.** ಆದುದರಿಂದ ಬಂಧ-ಮೋಕ್ಷಗಳು ಮಾಯೆಯಿಂದ ಕಲ್ಪಿತವಾಗಿವೆ, ಆತ್ಮನಲ್ಲಿಲ್ಲ. ಆಕಾಶದಂತಿರುವ ಮತ್ತು ನಿಷ್ಕಲವೂ ನಿಷ್ಕ್ರಿಯವೂ ಶಾಂತವೂ ನಿರ್ಮಲವೂ ನಿರಂಜನವೂ ಅದ್ವಿತೀಯವೂ ಆದ ಪರತತ್ತ್ವದಲ್ಲಿ ಕಲ್ಪನೆಯು ಎಲ್ಲಿಯದು?

**ನ ನಿರೋಧೋ ನ ಚೋತ್ಪತ್ತಿರ್ನ ಬದ್ಧೋ ನ ಚ ಸಾಧಕಃ ।**
**ನ ಮುಮುಕ್ಷುರ್ನ ವೈ ಮುಕ್ತ ಇತ್ಯೇಷಾ ಪರಮಾರ್ಥತಾ ॥೫೭೩॥**

**ನಿರೋಧಃ** = ಪ್ರಲಯವೂ **ನ** = ಇಲ್ಲ, **ಉತ್ಪತ್ತಿಃ ಚ** = ಉತ್ಪತ್ತಿಯೂ **ನ**, **ಬದ್ಧಃ** = ಬದ್ಧನೂ **ನ**, **ಸಾಧಕಃ ಚ** = ಸಾಧಕನೂ **ನ**, **ಮುಮುಕ್ಷುಃ** = ಮುಮುಕ್ಷುವು **ನ**, **ಮುಕ್ತಃ** = ಮುಕ್ತನು **ನ ವೈ** — **ಇತಿ ಏಷಾ** = ಹೀಗೆ ಇದು **ಪರಮಾರ್ಥತಾ** = ಪರಮಾರ್ಥವು.

**೫೭೩.** ಪ್ರಲಯವೂ ಇಲ್ಲ, ಉತ್ಪತ್ತಿಯೂ ಇಲ್ಲ; ಬದ್ಧನೂ ಇಲ್ಲ, ಸಾಧಕನೂ ಇಲ್ಲ; ಮುಮುಕ್ಷುವೂ ಇಲ್ಲ, ಮುಕ್ತನೂ ಇಲ್ಲ; ಹೀಗೆ ಇದು ಪರಮಾರ್ಥವು.[೧]

[ಇದರ ಮೂಲವನ್ನು ಅಮೃತಬಿಂದೂಪನಿಷತ್ತಿನಲ್ಲಿಯೂ (೧೦) ಮಾಂಡೂಕ್ಯ-ಕಾರಿಕೆಗಳಲ್ಲಿಯೂ (೨. ೩೨) ನೋಡಬಹುದು.

[೧] ಯಾವಾಗ ದ್ವೈತವು ಅಸತ್ಯವೆಂದೂ ಆತ್ಮನೊಬ್ಬನೇ ಪರಮಾರ್ಥವೆಂದೂ ನಿಷ್ಕರ್ಷಿಸಲ್ಪಟ್ಟಿತೊ ಆಗ ಸಮಸ್ತ ವ್ಯವಹಾರವೂ ಅವಿದ್ಯಾವಿಷಯವೆಂದು ಸಿದ್ಧವಾಗುತ್ತದೆ.]

**ಸಕಲನಿಗಮ-ಚೂಡಾ-ಸ್ವಾಂತ-ಸಿದ್ಧಾಂತರೂಪಂ**
**ಪರಮಿದಮತಿಗುಹ್ಯಂ ದರ್ಶಿತಂ ತೇ ಮಯಾದ್ಯ ।**
**ಅಪಗತ-ಕಲಿದೋಷಂ ಕಾಮ-ನಿರ್ಮುಕ್ತ-ಬುದ್ಧಿಂ**
**ಸ್ವಸುತವದಸಕೃತ್ತ್ವಾಂ ಭಾವಯಿತ್ವಾ ಮುಮುಕ್ಷುಮ್ ॥೫೭೪॥**

**ಅಪಗತ-ಕಲಿದೋಷಂ** = ಕಲಿದೋಷಗಳಿಲ್ಲದ **ಕಾಮ-ನಿರ್ಮುಕ್ತ-ಬುದ್ಧಿಂ** = ಕಾಮವಿಲ್ಲದ ಬುದ್ಧಿಯುಳ್ಳ **ಮುಮುಕ್ಷುಂ** = ಮುಮುಕ್ಷುವಾದ **ತ್ವಾಂ** = ನಿನ್ನನ್ನು **ಸ್ವ-ಸುತವತ್** = ನನ್ನ ಮಗನಂತೆ **ಭಾವಯಿತ್ವಾ** = ಭಾವಿಸಿಕೊಂಡು **ಸಕಲ-ನಿಗಮ-ಚೂಡಾ-ಸ್ವಾಂತ-ಸಿದ್ಧಾಂತ-ರೂಪಂ** = ಸಕಲ ಶ್ರುತಿಗಳ ಶಿರಸ್ಸಾದ ವೇದಾಂತದಲ್ಲಿರುವ ಸಿದ್ಧಾಂತರೂಪವಾದ **ಪರಂ** = ಶ್ರೇಷ್ಠವಾದ **ಇದಮ್ ಅತಿಗುಹ್ಯಂ** = ಈ ಅತ್ಯಂತ ರಹಸ್ಯವು **ತೇ** = ನಿನಗೆ **ಅದ್ಯ** = ಈಗ **ಮಯಾ** = ನನ್ನಿಂದ **ಅಸಕೃತ್** = ಪುನಃ ಪುನಃ **ದರ್ಶಿತಂ** = ತಿಳಿಸಲ್ಪಟ್ಟಿತು.

**೫೭೪.** ಕಲಿದೋಷಗಳಿಲ್ಲದ, ಕಾಮವಿಲ್ಲದ ಬುದ್ಧಿಯುಳ್ಳ, ಮುಮುಕ್ಷುವಾದ ನಿನ್ನನ್ನು ನನ್ನ ಮಗನೆಂದು ಭಾವಿಸಿಕೊಂಡು ಶ್ರುತಿಶಿರಸ್ಸಾದ ವೇದಾಂತದಲ್ಲಿರುವ ಸಿದ್ಧಾಂತರೂಪವೂ ಶ್ರೇಷ್ಠವೂ ಆದ ಈ ರಹಸ್ಯವನ್ನು[೧] ನಿನಗೆ ಇಂದು ಪುನಃ ಪುನಃ ಉಪದೇಶಿಸಿರುತ್ತೇನೆ.

[ಇಲ್ಲಿಗೆ ಆಚಾರ್ಯನ ಉಪದೇಶವು ಮುಗಿಯುತ್ತದೆ.

[೧] ಅಲ್ಪಮತಿಗಳು ಪ್ರಯತ್ನಪಟ್ಟರೂ ಲಭಿಸದ ಆತ್ಮಾನಾತ್ಮವಿವೇಕವೆಂಬ ರಹಸ್ಯವನ್ನು. ಇದೇ **ವಿವೇಕಚೂಡಾಮಣಿ.**]

**ಇತಿ ಶ್ರುತ್ವಾ ಗುರೋರ್ವಾಕ್ಯಂ ಪ್ರಶ್ರಯೇಣ ಕೃತಾನತಿಃ ।**
**ಸ ತೇನ ಸಮನುಜ್ಞಾತೋ ಯಯೌ ನಿರ್ಮುಕ್ತ-ಬಂಧನಃ ॥ ೫೭೫ ॥**

**ಇತಿ** = ಹೀಗೆ **ಗುರೋಃ** = ಗುರುವಿನ **ವಾಕ್ಯಂ** = ವಾಕ್ಯವನ್ನು **ಶ್ರುತ್ವಾ** = ಕೇಳಿ **ಪ್ರಶ್ರಯೇಣ** = ನಮ್ರಭಾವದಿಂದ **ಕೃತಾನತಿಃ** = ನಮಸ್ಕಾರಮಾಡಿದವನಾಗಿ **ತೇನ**=

ಅವನಿಂದ **ಸಮನುಜ್ಞಾತಃ** = ಅನುಜ್ಞೆಯನ್ನು ಪಡೆದವನಾಗಿ **ನಿರ್ಮುಕ್ತ-ಬಂಧನಃ** = ಬಂಧದಿಂದ ಬಿಡುಗಡೆಹೊಂದಿದ **ಸಃ** = ಅವನು **ಯಯೌ** = ಹೊರಟುಹೋದನು.

**೫೭೫.** ಹೀಗೆ ಗುರುವಿನ ವಾಕ್ಯವನ್ನು ಕೇಳಿ ಬಂಧದಿಂದ ಮುಕ್ತನಾದ ಆ ಶಿಷ್ಯನು ನಮ್ರಭಾವದಿಂದ ನಮಸ್ಕರಿಸಿ ಗುರುವಿಂದ ಅನುಜ್ಞೆಯನ್ನು ಪಡೆದು ಹೊರಟುಹೋದನು.

**ಗುರುರೇವಂ ಸದಾನಂದ-ಸಿಂಧೌ ನಿರ್ಮಗ್ನಮಾನಸಃ ।**
**ಪಾವಯನ್ ವಸುಧಾಂ ಸರ್ವಾಂ ವಿಚಚಾರ ನಿರಂತರಮ್ ॥೫೭೬॥**

**ಏವಂ** = ಹೀಗೆ **ಗುರುಃ** = ಗುರುವು **ಸದಾನಂದ-ಸಿಂಧೌ** = ಸದಾನಂದಸಾಗರದಲ್ಲಿ **ನಿರ್ಮಗ್ನ-ಮಾನಸಃ** = ಮುಳುಗಿದ ಮನಸ್ಸುಳ್ಳವನಾಗಿ **ಸರ್ವಾಂ ವಸುಧಾಂ** = ಸಮಸ್ತ ಭೂಮಿಯನ್ನು **ಪಾವಯನ್** = ಪವಿತ್ರಗೊಳಿಸುತ್ತ **ನಿರಂತರಂ** = ನಿರಂತರವಾಗಿ **ವಿಚಚಾರ** = ಸಂಚರಿಸುತ್ತಿದ್ದನು.

**೫೭೬.** ಹೀಗೆ ಗುರುವು ಸದಾನಂದಸಾಗರದಲ್ಲಿ ಮುಳುಗಿದ ಮನಸ್ಸುಳ್ಳವನಾಗಿ ಸಮಸ್ತ ಭೂಮಿಯನ್ನೂ ಪವಿತ್ರಗೊಳಿಸುತ್ತ ನಿರಂತರವೂ ಸಂಚರಿಸುತ್ತಿದ್ದನು.

**ಇತ್ಯಾಚಾರ್ಯಸ್ಯ ಶಿಷ್ಯಸ್ಯ ಸಂವಾದೇನಾತ್ಮ-ಲಕ್ಷಣಮ್ ।**
**ನಿರೂಪಿತಂ ಮುಮುಕ್ಷೂಣಾಂ ಸುಖಬೋಧೋಪಪತ್ತಯೇ ॥೫೭೭॥**

**ಇತಿ** = ಹೀಗೆ **ಆಚಾರ್ಯಸ್ಯ** = ಆಚಾರ್ಯನ **ಶಿಷ್ಯಸ್ಯ** = [ಮತ್ತು] ಶಿಷ್ಯನ **ಸಂವಾದೇನ** = ಸಂವಾದದಿಂದ **ಆತ್ಮಲಕ್ಷಣಂ** = ಆತ್ಮಸ್ವರೂಪವು **ಮುಮುಕ್ಷೂಣಾಂ** = ಮುಮುಕ್ಷುಗಳಿಗೆ **ಸುಖ-ಬೋಧ-ಉಪಪತ್ತಯೇ** = ಸುಗಮವಾಗಿ ಜ್ಞಾನವನ್ನು ಹೊಂದಲು **ನಿರೂಪಿತಂ** = ನಿರೂಪಿಸಲ್ಪಟ್ಟಿತು.

**೫೭೭.** ಹೀಗೆ ಆಚಾರ್ಯನ ಮತ್ತು ಶಿಷ್ಯನ ಸಂವಾದದಿಂದ ಮುಮುಕ್ಷುಗಳಿಗೆ ಸುಗಮವಾಗಿ ಜ್ಞಾನವನ್ನು ಹೊಂದಲು ಆತ್ಮಸ್ವರೂಪವು ನಿರೂಪಿಸಲ್ಪಟ್ಟಿತು.

**ಹಿತಮಿದಮುಪದೇಶಮಾದ್ರಿಯಂತಾಂ**
**ವಿಹಿತ-ನಿರಸ್ತ-ಸಮಸ್ತ-ಚಿತ್ತದೋಷಾಃ ।**
**ಭವಸುಖ-ವಿರತಾಃ ಪ್ರಶಾಂತಚಿತ್ತಾಃ**
**ಶ್ರುತಿರಸಿಕಾ ಯತಯೋ ಮುಮುಕ್ಷವೋ ಯೇ ॥೫೭೮॥**

**ವಿಹಿತ-ನಿರಸ್ತ-ಸಮಸ್ತ-ಚಿತ್ತದೋಷಾಃ** = ಸಾಧನದ ಅನುಷ್ಠಾನದಿಂದ ಚಿತ್ತದ ಸಮಸ್ತ-ದೋಷಗಳನ್ನೂ ಕಳೆದುಕೊಂಡ **ಭವಸುಖವಿರತಾಃ** = ಸಂಸಾರಸುಖದಲ್ಲಿ

ವಿರಕ್ತರಾದ **ಪ್ರಶಾಂತಚಿತ್ತಾಃ** = ಪ್ರಶಾಂತಚಿತ್ತರಾದ **ಶ್ರುತಿರಸಿಕಾಃ** = ಶ್ರುತಿಯಲ್ಲಿ ರಸಿಕರಾದ **ಮುಮುಕ್ಷವಃ** = ಮುಮುಕ್ಷುಗಳಾದ **ಯತಯಃ** = ಪ್ರಯತ್ನಶೀಲರು **ಯೇ** – ಯಾರೊ [**ತೇ** = ಅವರು] **ಹಿತಂ** = ಹಿತವಾದ **ಇಮಮ್ ಉಪದೇಶಂ** = ಈ ಉಪದೇಶವನ್ನು **ಆದ್ರಿಯಂತಾಂ** = ಆದರಿಸಲಿ.

**೫೭೮.** ಸಾಧನದ ಅನುಷ್ಠಾನದಿಂದ[೧] ಚಿತ್ತದ ಸಮಸ್ತ ದೋಷಗಳನ್ನೂ ಕಳೆದುಕೊಂಡ, ಸಂಸಾರಸುಖದಲ್ಲಿ ವಿರಕ್ತರಾದ, ಪ್ರಶಾಂತಚಿತ್ತರಾದ, ಶ್ರುತಿಯಲ್ಲಿ ರಸಿಕರಾದ, ಮುಮುಕ್ಷುಗಳಾದ ಪ್ರಯತ್ನಶೀಲರು ಹಿತವಾದ ಉಪದೇಶವನ್ನು ಆದರಿಸಲಿ.

[೧ ಯಜ್ಞಾದಿ ಬಾಹ್ಯಸಾಧನಗಳಿಂದಲೂ ಶಮಾದಿ ಅಂತರಂಗಸಾಧನದಿಂದಲೂ.]

**ಸಂಸಾರಾಧ್ವನಿ ತಾಪಭಾನು-ಕಿರಣ-ಪ್ರೋದ್ಭೂತ-ದಾಹವ್ಯಥಾ-**
**ಖಿನ್ನಾನಾಂ ಜಲಕಾಂಕ್ಷಯಾ ಮರುಭುವಿ ಭ್ರಾಂತ್ಯಾ**
**ಪರಿಭ್ರಾಮ್ಯತಾಮ್ ।**
**ಅತ್ಯಾಸನ್ನ-ಸುಧಾಂಬುಧಿಂ ಸುಖಕರಂ ಬ್ರಹ್ಮಾದ್ವಯಂ ದರ್ಶಯಂ-**
**ತ್ಯೇಷಾ ಶಂಕರಭಾರತೀ ವಿಜಯತೇ ನಿರ್ವಾಣ-ಸಂದಾಯಿನೀ**
**॥ ೫೭೯ ॥**

**ಸಂಸಾರ-ಅಧ್ವನಿ** = ಸಂಸಾರಮಾರ್ಗದಲ್ಲಿ **ತಾಪಭಾನು-ಕಿರಣ-ಪ್ರೋದ್ಭೂತ-ದಾಹವ್ಯಥಾ-ಖಿನ್ನಾನಾಂ** = ತಾಪತ್ರಯವೆಂಬ ಸೂರ್ಯಕಿರಣದಿಂದ ಉಂಟಾದ ಬಾಯಾರಿಕೆಯ ವ್ಯಥೆಯಿಂದ ಬಳಲುತ್ತಿರುವ, **ಮರುಭುವಿ** = ಮರುಭೂಮಿಯಲ್ಲಿ **ಜಲ-ಕಾಂಕ್ಷಯಾ** = ನೀರಿಗಾಗಿ **ಭ್ರಾಂತ್ಯಾ** = ಭ್ರಾಂತಿಯಿಂದ **ಪರಿಭ್ರಾಮ್ಯತಾಂ** = ಅಲೆಯುತ್ತಿರುವ [ಚೇತನರಿಗೆ] **ಅತ್ಯಾಸನ್ನ-ಸುಧಾಂಬುಧಿಂ** = ಅತ್ಯಂತ ಸಮೀಪದಲ್ಲಿರುವ ಅಮೃತಸಮುದ್ರದಂತಿರುವ **ಸುಖಕರಂ** = ಸುಖಕರವಾದ **ಅದ್ವಯಂ ಬ್ರಹ್ಮ** = ಅದ್ವಿತೀಯ ಬ್ರಹ್ಮವನ್ನು **ದರ್ಶಯಂತೀ** = ತೋರಿಸುತ್ತಿರುವ **ನಿರ್ವಾಣ-ಸಂದಾಯಿನೀ** – ಮೋಕ್ಷದಾಯಕವಾದ **ಏಷಾ** = ಈ **ಶಂಕರಭಾರತೀ** = ಶಂಕರವಾಣಿಯು **ವಿಜಯತೇ** = ಸರ್ವೋತ್ಕೃಷ್ಟವಾಗಿರುತ್ತದೆ.

**೫೭೯.** ಸಂಸಾರಮಾರ್ಗದಲ್ಲಿ ತಾಪತ್ರಯವೆಂಬ ಸೂರ್ಯಕಿರಣದಿಂದ ಉಂಟಾದ ಬಾಯಾರಿಕೆಯಿಂದ ಬಳಲುತ್ತಿರುವ, ಮರುಭೂಮಿಯಲ್ಲಿ ನೀರಿಗಾಗಿ ಭ್ರಾಂತಿಯಿಂದ ಅಲೆಯುತ್ತಿರುವ (ಚೇತನರಿಗೆ) ಅತ್ಯಂತ ಸಮೀಪದಲ್ಲಿರುವ ಅಮೃತಸಮುದ್ರದಂತಿರುವ ಸುಖಕರವಾದ ಅದ್ವಿತೀಯಬ್ರಹ್ಮವನ್ನು ತೋರಿಸಿಕೊಡುತ್ತಿರುವ, ಮೋಕ್ಷದಾಯಕವಾದ ಈ ಶಂಕರವಾಣಿಯು ಸರ್ವೋತ್ಕೃಷ್ಟವಾಗಿರುತ್ತದೆ.